# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 407
ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
ಉತ್ತರಿಸಬೇಕಾದ ದಿನಾಂಕ : 23-09-2020
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಕಳೆದ ಮೂರು ನಾಲ್ಕು ವರ್ಷಗಳಿಂದ ವಿಜಯಪುರ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಇಂಡಿ ಪಟ್ಟಣದಲ್ಲಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಭವನ ನಿರ್ಮಾಣ ಮಾಡಲು ಅನುದಾನ ಮಂಜೂರಾತಿ ಪ್ರಸ್ತಾವನೆಯು ಸರ್ಕಾರದಲ್ಲಿ ಬಾಕಿ ಇರುವುದು ಗಮನಿಸಿದೆಯೇ; | ಹೌದು. |
| 2 | ಹಾಗಿದ್ದಲ್ಲಿ, 2020-21ನೇ ಸಾಲಿನ ಕ್ರಿಯಾಯೋಜನೆಯಲ್ಲಿ ಸೇರ್ಪಡೆಗೊಳಿಸಲು ಸರ್ಕಾರ ಆಸಕ್ತಿ ಹೊಂದಿದೆಯೇ (ವಿವರ ನೀಡುವುದು); | ಸದರಿ ಲೆಕ್ಕಶೀರ್ಷಿಕೆಯಲ್ಲಿ ಲಭ್ಯವಾಗುವ ಅನುದಾನದ ಲಭ್ಯತೆಯನ್ನಾಧರಿಸಿ ಕ್ರಿಯಾ ಯೋಜನೆಯಲ್ಲಿ ಸೇರಿಸುವ ಬಗ್ಗೆ ಪರಿಶೀಲಿಸಲಾಗುವುದು. |
| 3 | ತಾಲ್ಲೂಕು ಕೇಂದ್ರವಾದ ಇಂಡಿ ಪಟ್ಟಣದಲ್ಲಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಭವನ ನಿರ್ಮಾಣ ಮಾಡಲು ಇದುವರೆಗೂ ಅನುದಾನ ಮಂಜೂರು ಮಾಡದಿರಲು ಕಾರಣಗಳೇನು; | 2019-20ನೇ ಸಾಲಿನ ಕ್ರಿಯಾಯೋಜನೆಯಲ್ಲಿ ಇಂಡಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಭವನಕ್ಕೆ ರೂ. 75.00 ಲಕ್ಷಗಳನ್ನು ಅವಕಾಶ ಮಾಡಿಕೊಳ್ಳಲಾಗಿದ್ದು, ಸದರಿ ಯೋಜನೆಗೆ ಅನುದಾನದ ಕೊರತೆ ಇದ್ದುದರಿಂದ, ಅನುದಾನವನ್ನು ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. |
| 4 | ಯಾವಾಗ ಮತ್ತು ಎಷ್ಟು ಅನುದಾನ ಮಂಜೂರು ಮಾಡಲಾಗುವುದು; ಅದಕ್ಕಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು)? | ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಒದಗಿಸುವ ಅನುದಾನದ ಲಭ್ಯತೆಯನುಸಾರ ಮುಂದಿನ ದಿನಗಳಲ್ಲಿ ಮಂಜೂರು ಮಾಡುವ ಬಗ್ಗೆ ಪರಿಶೀಲಿಸಲಾಗುವುದು. |

ಕಸಂಪಾ 71 ಕವಿಸ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 408

ಮಾನ್ಯ ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)

ವಿಷಯ : ಅನುದಾನ ಮಂಜೂರಾತಿ

ಉತ್ತರಿಸುವ ದಿನಾಂಕ : 23/09/2020

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2019-20ನೇ ಸಾಲಿನಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ವಿಜಯಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಅಗರಕೇಡ ಗ್ರಾಮದ ಸಿದ್ದರೂಢ ಮಠ ಹಾಗೂ ಇಂಡಿ ನಗರದ ಹುಸೇನಬಾಷಾ ಮಸೂತಿ ಅಭಿವೃದ್ಧಿ ಸಮಿತಿ ಮತ್ತು ಓಂಕಾರೇಶ್ವರ ಆಶ್ರಮದ ಬಳಿ ಯಾತ್ರಿನಿವಾಸ ನಿರ್ಮಾಣ ಮಾಡಲು ತಲಾ ರೂ.25.00 ಲಕ್ಷಗಳಂತೆ ಅನುದಾನ ಮಂಜೂರು ಮಾಡಿ ಆದೇಶ ಹೊರಡಿಸಿದ್ದು ನಿಜವೇ. | ಹೌದು. |
| ಆ) | ಹಾಗಿದ್ದಲ್ಲಿ, ಇದುವರೆಗೂ ಸದರಿ ಸ್ಥಳಗಳಲ್ಲಿ ಯಾತ್ರಿನಿವಾಸ ನಿರ್ಮಾಣದ ಕಾಮಗಾರಿಗಳನ್ನು ಪ್ರಾರಂಭಿಸದಿರಲು ಕಾರಣಗಳೇನು (ವಿವರ ನೀಡುವುದು). | 2019ನೇ ಜುಲೈ ತಿಂಗಳಲ್ಲಿ ಮಂಜೂರಾಗಿರುವ ಒಟ್ಟು 294 ಕಾಮಗಾರಿಗಳನ್ನು ತಡೆಹಿಡಿಯಲಾಗಿರುತ್ತದೆ. ಸದರಿ ತಡೆಹಿಡಿಯಲಾದ ಕಾಮಗಾರಿಗಳನ್ನು ಸರ್ಕಾರದ ಮರುಪರಿಶೀಲನೆಯ ನಂತರ ನೂತನ ಕಾಮಗಾರಿಗಳನ್ನು ಮಂಜೂರು ಮಾಡಲಾಗಿದ್ದು, ಅದರಲ್ಲಿ ಈ ಕಾಮಗಾರಿಗಳು ಸೇರಿಲ್ಲವಾದ್ದರಿಂದ ಕಾಮಗಾರಿಗಳನ್ನು ಪ್ರಾರಂಭಿಸಿರುವುದಿಲ್ಲ. |
| ಇ) | ಸದರಿ ಮಂಜೂರಾದ ಯಾತ್ರಿನಿವಾಸದ ಕಾಮಗಾರಿಗಳನ್ನು ಹಿಂಪ್ಪಡೆಯಲಾಗಿದೆಯೇ/ ರದ್ದುಪಡಿಸಲಾಗಿದೆಯೇ: | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಟಿಪ್ಪಣಿ ಸಂಖ್ಯೆ: ಮುಕಾ/736/2019, ದಿನಾಂಕ:26.07.2019 ರಲ್ಲಿ ನೀಡಿದ ಆದೇಶದಂತೆ ಜುಲೈ ಮಾಹೆಯಲ್ಲಿ ಮಂಜೂರಾದ ಎಲ್ಲಾ ಕಾಮಗಾರಿಗಳನ್ನು ತಡೆಹಿಡಿಯಲಾಗಿರುತ್ತದೆ. ಸರ್ಕಾರದ ಮರುಪರಿಶೀಲನೆಯ ನಂತರ ನೂತನ ಕಾಮಗಾರಿಗಳನ್ನು ಮಂಜೂರು ಮಾಡಲಾಗಿದ್ದು, ಅದರಲ್ಲಿ ಈ ಕಾಮಗಾರಿಗಳು ಸೇರಿರುವುದಿಲ್ಲ. |
| ಈ) | ಹಿಂಪಡೆದಿದ್ದರೇ/ರದ್ದುಪಡಿಸಿದ್ದರೇ ಯಥಾಸ್ಥಿತಿ ಕಾಯ್ದುಕೊಳ್ಳಲು ಕಾರಣಗಳೇನು (ವಿವರ ನೀಡುವುದು). | |
| ಉ) | ಸದರಿ ಸ್ಥಳಗಳಲ್ಲಿ ಯಾತ್ರಿನಿವಾಸ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರ ಆಸಕ್ತಿ ಹೊಂದಿದೆಯೇ, ಹೊಂದಿದ್ದರೆ, ಯಾವಾಗ ಮತ್ತು ಎಷ್ಟು ಅನುದಾನ ಮಂಜೂರು ಮಾಡಲಾಗುವುದು (ವಿವರ ನೀಡುವುದು) | 2020-21ನೇ ಸಾಲಿನಲ್ಲಿ ಬಂಡವಾಳ ವೆಚ್ಚಗಳ ಲೆಕ್ಕಶೀರ್ಷಿಕೆ ಅಡಿ ಲಭ್ಯವಿರುವ ಅನುದಾನವನ್ನು ಈ ಹಿಂದೆ ಪ್ರಾರಂಭಿಸಲಾದ ಮುಂದುವರೆದ ಕಾಮಗಾರಿಗಳಿಗೆ ವಿನಿಯೋಗಿಸಿಕೊಳ್ಳಲಾಗುತ್ತಿದೆ. ಅನುದಾನದ ಕೊರತೆಯ ಹಿನ್ನೆಲೆಯಲ್ಲಿ ಯಾತ್ರಿನಿವಾಸ ನಿರ್ಮಾಣ ಕಾಮಗಾರಿ ಕೈಗೊಳ್ಳಲು ಸಾಧ್ಯವಾಗುವುದಿಲ್ಲ. |

ಕಡತ ಸಂಖ್ಯೆ: ಟಿಒಆರ್ 167 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

## ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 409 |
|---|---|
| ಸದಸ್ಯರ ಹೆಸರು | ಶ್ರೀ ಸತೀಶ್ ಎಂ. ಜಾರಕಿಹೊಳಿ |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಮಾನ್ಯ ಮುಖ್ಯಮಂತ್ರಿಗಳ ಸಿ.ಎಂ.ಜಿ.ಎಸ್.ವೈ ಯೋಜನೆಯಡಿ ಬೆಳಗಾವಿ ಜಿಲ್ಲೆಗೆ 2019-20ನೇ ಸಾಲಿನಲ್ಲಿ ಬಿಡುಗಡೆಯಾದ ಅನುದಾನವೆಷ್ಟು; | ಸಿಎಂಜಿಎಸ್‌ವೈ ಯೋಜನೆಯಡಿ ಮಂಜೂರಾದ ಕಾಮಗಾರಿಗಳ ಬಾಕಿ ಬಿಲ್ಲುಗಳನ್ನು ಪಾವತಿಸಲು 2019-20ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ಒಟ್ಟು ರೂ. 290.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. |
| ಆ. | ಈ ಅನುದಾನವನ್ನು ಹಿಂಪಡೆಯಲಾಗಿರುವುದಕ್ಕೆ ಕಾರಣವೇನು; | 2018-19ನೇ ಸಾಲಿನಲ್ಲಿ ಯಮಕನಮರಡಿ ವಿಧಾನಸಭಾ ಕ್ಷೇತ್ರಕ್ಕೆ ರೂ. 8.00 ಕೋಟಿಗಳನ್ನು ಮಂಜೂರು ಮಾಡಿದ್ದು, ಈ ರೂ. 8.00 ಕೋಟಿಗಳ ಕಾಮಗಾರಿಗಳನ್ನು 2019-20ನೇ ಸಾಲಿನಲ್ಲಿ ತಡೆಹಿಡಿಯಲಾಗಿತ್ತು. ನಂತರ ತಡೆಹಿಡಿದಿರುವ ಕಾಮಗಾರಿಗಳ ಪೈಕಿ ಇದೇ ಸಾಲಿನಲ್ಲಿ ರೂ. 4.85 ಕೋಟಿಗಳ ಕಾಮಗಾರಿಗಳನ್ನು ಮುಂದುವರೆಸಲಾಗಿರುತ್ತದೆ. |
| ಇ. | ಸದರಿ ಅನುದಾನ ಬಿಡುಗಡೆ ಮಾಡುವ ಕುರಿತು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; | ಆರ್ಥಿಕ ಲಭ್ಯತೆಯನ್ನಾಧರಿಸಿ ಅನುದಾನ ಬಿಡುಗಡೆ ಮಾಡಲು ಕ್ರಮ ಕೊಳ್ಳಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ: ಅಧಿ07/04:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 411

ಸದಸ್ಯರ ಹೆಸರು : ಶ್ರೀ ಸತೀಶ್ ಎಲ್. ಜಾರಕಿಹೊಳಿ (ಯಮಕನಮರಡಿ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳ ಪ್ರಯಾಣಿಕರ ಅನುಕೂಲಕ್ಕಾಗಿ "ಪರಿಸರ ವಾಹಿನಿ" ಬಸ್ಸಿನ ಸೌಕರ್ಯ ಇಲ್ಲದೇ ಇರುವುದರಿಂದ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ 112 ಹಳ್ಳಿಗಳಿಗೆ ಒಟ್ಟು 69 ವಾಹನಗಳು ಕಾರ್ಯಾಚರಿಸುತ್ತಿದ್ದು, ಅವುಗಳಲ್ಲಿ 31 ದ್ವಿ-ದ್ವಾರ (Double Door) ಪರಿಸರ ವಾಹಿನಿ ಬಸ್ಸುಗಳಾಗಿರುತ್ತವೆ. ಗ್ರಾಮೀಣ ಪ್ರದೇಶಗಳ ಸಾರ್ವಜನಿಕ ಪ್ರಯಾಣಿಕರು ಸದರಿ ಸಾರಿಗೆ ಸೇವೆಯ ಅನುಕೂಲತೆಯನ್ನು ಪಡೆದುಕೊಳ್ಳುತ್ತಿದ್ದಾರೆ. |
| ಆ. | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು? | |

ಸಂಖ್ಯೆ: ಟಿಡಿ 142 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 414 |
| ಮಾನ್ಯ ವಿಧಾನ ಸಭೆಯ ಸದಸ್ಯರು | : | ಶ್ರೀ ನರೇಂದ್ರ ಆರ್ (ಹನೂರು) |
| ಉತ್ತರಿಸಬೇಕಾದ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ "ವೆಲ್ಲೆಸ್ಲಿ ಸೇತುವೆ" ದುರಸ್ತಿಗೊಳಗಾಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಈ ಸೇತುವೆಯನ್ನು ಅಭಿವೃದ್ಧಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು (ಸಂಪೂರ್ಣ ವಿವರ ನೀಡುವುದು)? | ಪ್ರವಾಹದಿಂದ ಬಿದ್ದುಹೋಗಿದ್ದ 30ಮೀಟರ್‌ಗಳ ವೆಲ್ಲೆಸ್ಲಿ (ಲೂಷಿಂಗ್‌ಟನ್) ಸೇತುವೆಯ ಸಂರಕ್ಷಣೆಗೆ ರೂ.200.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿಯನ್ನು ಪಡೆದು ನಿಯಮಾನುಸಾರ ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಕಾಮಗಾರಿಯನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ದಿನಾಂಕ 11/08/2019ರಂದು ಉಂಟಾದ ಪ್ರವಾಹದಿಂದ ಇನ್ನು 45 ಮೀಟರ್‌ಗಳ ಸೇತುವೆಯು ಬಿದ್ದುಹೋಗಿರುತ್ತದೆ. ಈ 45 ಮೀಟರ್‌ಗಳ ಸಂರಕ್ಷಣೆಯನ್ನು ಒಳಗೊಂಡಂತೆ ಒಟ್ಟಾರೆ 75 ಮೀಟರ್‌ಗಳ ಸಂರಕ್ಷಣೆಗೆ ಇಲಾಖೆಯು ಕ್ರಮವಹಿಸುತ್ತಿದೆ.<br><br>ಈವರೆವಿಗೆ ಕಾಮಗಾರಿಯಲ್ಲಿ ಪಾಯವನ್ನು ಭದ್ರಪಡಿಸಿ, ಹಳೆಯ ಪಿಲ್ಲರ್ ಕಲ್ಲುಗಳು ಬಳಕೆಗೆ ಯೋಗ್ಯವಿಲ್ಲವಾದ್ದರಿಂದ ಹೊಸದಾಗಿ ನಯಗೊಳಿಸಿದ ಕಲ್ಲುಗಳನ್ನು ಉಪಯೋಗಿಸಿ 75 ಮೀಟರ್‌ಗಳವರೆಗೆ ಕಂಬಗಳ ಜೋಡಣೆ ಕೆಲಸವು ಪೂರ್ಣಗೊಂಡಿದ್ದು, ಬೀಮ್ ಗಳನ್ನು ಜೋಡಿಸುವ ಕೆಲಸವು ಪ್ರಗತಿಯಲ್ಲಿದ್ದ ಸಂದರ್ಭದಲ್ಲಿ ನೀರಿನ ಹರಿವು ಹೆಚ್ಚಾದ ಹಿನ್ನೆಲೆಯಲ್ಲಿ ಕಾಮಗಾರಿಯನ್ನು ಸದ್ಯಕ್ಕೆ ಸ್ಥಗಿತಗೊಳಿಸಲಾಗಿದೆ<br><br>ಈ ಕಾಮಗಾರಿಗೆ ರೂ.99.50 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದ್ದು, ರೂ.19,07,343/-ಗಳ ಅನುದಾನವನ್ನು ವೆಚ್ಚ ಮಾಡಲಾಗಿದೆ. |

ಕಡತ ಸಂಖ್ಯೆ: ಟಿಒಆರ್ 158 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 415

ಮಾನ್ಯ ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)

ವಿಷಯ : 'ಹೊಗೇನಿಕಲ್ ಪಾಲ್ಸ್‌ನ ಅಭಿವೃದ್ಧಿ'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಹನೂರು ತಾಲ್ಲೂಕಿನ 'ಹೊಗೇನಿಕಲ್ ಪಾಲ್ಸ್' ಪ್ರೇಕ್ಷಣೀಯ ಸ್ಥಳವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ "ಹೊಗೇನಿಕಲ್ ಫಾಲ್ಸ್"ನ್ನು ಪ್ರವಾಸಿ ತಾಣವನ್ನಾಗಿ ಅಭಿವೃದ್ಧಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು (ಸಂಪೂರ್ಣ ವಿವರ ನೀಡುವುದು)? | 2007-08ನೇ ಸಾಲಿನಲ್ಲಿ ಹೊಗೇನಿಕಲ್ ಜಲಪಾತದ ಬಳಿ ಪ್ರವಾಸಿ ಸೌಲಭ್ಯಗಳಾದ ಶೌಚಾಲಯ ಹಾಗೂ ಬಟ್ಟೆ ಬದಲಾವಣೆ ಕೊಠಡಿ, ಪರಗೋಲ, ಪಾರ್ಕಿಂಗ್, ವಿಶ್ರಾಂತಿ ಕುರ್ಚಿಗಳು, ನದಿಗೆ ಮೆಟ್ಟಿಲುಗಳ ನಿರ್ಮಾಣ, ಬೋರ್ ವೆಲ್, ಜನರೇಟರ್ ರೂಮ್, ವಾಚ್‌ಟವರ್, ವಾಟರ್ ಟ್ಯಾಂಕ್‌ಗಳ ಅಭಿವೃದ್ಧಿ ಕಾಮಗಾರಿಯನ್ನು ರೂ.50.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ.<br>2010-11ನೇ ಸಾಲಿನಲ್ಲಿ ಹೊಗೇನಿಕಲ್ ಜಲಪಾತದ ಬಳಿ ಪ್ರವಾಸಿ ಸೌಲಭ್ಯಗಳಾದ ಉಪಾಹಾರ ಕಟ್ಟಡ, ಎರಡು ಮೇಲು ಸೇತುವೆ ನಿರ್ಮಾಣ, ಉದ್ಯಾನವನ ತಂತಿ ಬೇಲಿ, ಮೂರು ಪರಗೋಲ ನಿರ್ಮಾಣ ಅಭಿವೃದ್ಧಿ ಕಾಮಗಾರಿಯನ್ನು ರೂ.40.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ.<br>2014-15ನೇ ಸಾಲಿನಲ್ಲಿ ಕೊಳ್ಳೇಗಾಲ ತಾಲ್ಲೂಕಿನ ಹೊಗೇನಿಕಲ್ ಜಲಪಾತದ ಬಳಿ ಪ್ರವಾಸಿ ಸೌಲಭ್ಯಗಳಾದ ಶೌಚಾಲಯ ನವೀಕರಣ, ಸ್ವಾಗತ ಕಮಾನು, ಸೆಕ್ಯೂರಿಟಿ ಕೊಠಡಿ, ಕೋರಾಕಲ್ ಪಾರ್ಕಿಂಗ್, ಕಾಂಕ್ರೀಟ್ ಸೈನೇಜ್ ಬೋರ್ಡ್ಸ್ ಅಭಿವೃದ್ಧಿ ಕಾಮಗಾರಿಗೆ ರೂ.38.02 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ. ಸದರಿ ಕಾಮಗಾರಿಗೆ ರೂ.29.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ: ಟಿಓಆರ್ 169 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 416

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಹನೂರು ಪಟ್ಟಣದ ಕ್ರೀಡಾಂಗಣದಲ್ಲಿ ಮೂಲಭೂತ ಸೌಕರ್ಯಗಳ (ಶೌಚಾಲಯ, ಕುಡಿಯುವ ನೀರು, ಇತ್ಯಾದಿ) ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಚಾಮರಾಜನಗರ ಜಿಲ್ಲೆಯ ಹನೂರು ಪಟ್ಟಣದಲ್ಲಿ 8 ಎಕರೆ ನಿವೇಶನದಲ್ಲಿ ಹೊರಾಂಗಣ ಕ್ರೀಡಾಂಗಣವನ್ನು ನಿರ್ಮಿಸಲಾಗಿದ್ದು, ಪೆವಿಲಿಯನ್ ಕಟ್ಟಡ, ತಂತಿ ಬೇಲಿ, ಕೂಡು ರಸ್ತೆ, ಬೋರ್ ವೆಲ್, ಶೌಚಾಲಯ, ನೀರು ಸರಬರಾಜು ಹಾಗೂ ವಿದ್ಯುತ್ ಸಂಪರ್ಕ ವ್ಯವಸ್ಥೆ ಕಲ್ಪಿಸಲಾಗಿದೆ. |

**ವೈಎಸ್ ಡಿ-/ಇಬಿಬಿ/91/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 419 |
| ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ನಿಂಬಣ್ಣನವರ್ ಸಿ.ಎಂ (ಕಲಘಟಗಿ) |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು. |
| ಉತ್ತರಿಸಬೇಕಾದ ದಿನಾಂಕ | : | 23/09/2020 |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಅಂಗನವಾಡಿ ಕಾರ್ಯಕರ್ತೆಯರನ್ನು ಕಂದಾಯ ಇಲಾಖೆಯ ವಿವಿಧ ಸರ್ವೆಗಳಲ್ಲಿ ಮತ್ತು ವರ್ಷದಾದ್ಯಂತ ಚುನಾವಣೆ ಗುರುತಿನ ಚೀಟಿ ಮತದಾರರ ಪಟ್ಟಿಯಲ್ಲಿ ಹೆಸರು ಸೇರ್ಪಡೆ ಮತ್ತು ರದ್ದುಗೊಳಿಸಲು ಬಿ.ಎಲ್.ಓ ಕಾರ್ಯಕ್ಕೆ ಬಳಸಿಕೊಳ್ಳುವುದರಿಂದ ಶಾಲಾ ಪೂರ್ವ ಮಕ್ಕಳ ಶಿಕ್ಷಣ ಗುಣಮಟ್ಟ ಸಂಪೂರ್ಣವಾಗಿ ಕುಸಿಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ |
| ಆ. | ಹಾಗಿದ್ದಲ್ಲಿ, ಅಂಗನವಾಡಿಯಲ್ಲಿ ಕಾರ್ಯಕರ್ತೆಯರನ್ನು ಅವೈಜ್ಞಾನಿಕವಾಗಿ ವರ್ಷಪೂರ್ತಿ ಬಿ.ಎಲ್.ಓ ಕಾರ್ಯಕ್ಕೆ ಬಳಸಿಕೊಳ್ಳದಂತೆ ಶಾಲಾ ಪೂರ್ವ ಮಕ್ಕಳ ಶಿಕ್ಷಣ ಮಟ್ಟ ಸುಧಾರಿಸಲು ಈ ಬಿ.ಎಲ್.ಓ ಕೆಲಸದಿಂದ ಮುಕ್ತಿಗೊಳಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ. | ಆದಾಗ್ಯೂ ಶಾಲಾ ಪೂರ್ವ ಮಕ್ಕಳ ಶಿಕ್ಷಣದ ಹಿತದೃಷ್ಟಿಯಿಂದ ಅಂಗನವಾಡಿ ಕಾರ್ಯಕರ್ತೆಯರನ್ನು ಶಿಶು ಅಭಿವೃದ್ಧಿ ಯೋಜನೇತರ ಕೆಲಸಗಳಿಗೆ ನಿಯೋಜಿಸಬಾರದೆಂದು ಅನೇಕ ಬಾರಿ ಜಿಲ್ಲಾಧಿಕಾರಿಗಳಿಗೆ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ತಿಳಿಸಲಾಗಿದೆ. |
| ಇ. | ಅಂಗನವಾಡಿ ಕಾರ್ಯಕರ್ತೆಯರನ್ನು ಬಿ.ಎಲ್.ಓ ಕಾರ್ಯಕ್ಕೆ ಬಳಸಿಕೊಳ್ಳಬೇಕೆಂದು ಸರ್ಕಾರದ ಆದೇಶವಿದೆಯೇ; (ಆದೇಶ ಪ್ರತಿಯನ್ನು ಒದಗಿಸುವುದು). | ಈ ಬಗ್ಗೆ ಪ್ರತ್ಯೇಕ ಆದೇಶವಿರುವುದಿಲ್ಲ. |
| ಈ | ಬಿ.ಎಲ್.ಓ ಕಾರ್ಯದಿಂದ ಅಂಗನವಾಡಿ ಕಾರ್ಯಕರ್ತೆಯರನ್ನು ಬಿಡುಗಡೆಗೊಳಿಸಿ ಆಯಾ ಗ್ರಾಮಗಳಲ್ಲಿ ವಿದ್ಯಾವಂತ ನಿರುದ್ಯೋಗ ಯುವಕರನ್ನು ಗೌರವಧನದ ಆಧಾರದ ಮೇಲೆ ನೇಮಿಸಿಕೊಳ್ಳುವಂತೆ ಕಟ್ಟುನಿಟ್ಟಿನ ಆದೇಶವನ್ನು ಯಾವ ಕಾಲಮಿತಿಯೊಳಗೆ ಮಾಡಲಾಗುವುದು? | ಅನ್ವಯಿಸುವುದಿಲ್ಲ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 172 ಐಸಿಡಿ 2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 420

ಸದಸ್ಯರ ಹೆಸರು : ಶ್ರೀ ನಿಂಬಣ್ಣನವರ್ ಸಿ.ಎಂ. (ಕಲಘಟಗಿ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಧಾರವಾಡ ಜಿಲ್ಲೆ ಕಲಘಟಗಿ ಪಟ್ಟಣದಲ್ಲಿ ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿಯಿಂದ ಹೊಸ ಬಸ್ ಘಟಕ ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಹಾಗಿದ್ದಲ್ಲಿ, ಹೊಸ ಕಟ್ಟಡ ನಿರ್ಮಾಣವಾದರೂ ಡೀಸೆಲ್ ಪಂಪ್ ಅಳವಡಿಸಲು ವಿಳಂಬವಾಗಿರುವುದಕ್ಕೆ ಕಾರಣವೇನು; | ಕಲಘಟಗಿ ಪಟ್ಟಣದಲ್ಲಿನ ಹೊಸ ಬಸ್ ಘಟಕದಲ್ಲಿ ಇಂಧನ ಶೇಖರಣೆ ಮತ್ತು ವಿತರಣೆ ಸೌಲಭ್ಯಗಳನ್ನು ಒದಗಿಸಲು No objection Certificateನ್ನು ದಿನಾಂಕ: 17-02-2020ರಂದು ಜಿಲ್ಲಾಧಿಕಾರಿಗಳು, ಧಾರವಾಡ, ಇವರಿಂದ ಹಾಗೂ ಸ್ಫೋಟಕ ಸಂಗ್ರಹದ ಬಗ್ಗೆ ಪೂರ್ವಾನುಮತಿಯನ್ನು ದಿನಾಂಕ: 04-03-2020ರಂದು PESO ಚೆನ್ನೈರವರಿಂದ ಪಡೆಯಲಾಗಿದೆ. ಆದರೆ, ಮಾರ್ಚ-2020ರ ಮಾಹೆಯಲ್ಲಿ ಕೊವಿಡ್-19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಲಾಕ್‌ಡೌನ್‌ನಿಂದಾಗಿ M/s BPCLರವರಿಂದ ಇಂಧನ ಸೌಲಭ್ಯಗಳ ನಿರ್ಮಾಣ ಕಾರ್ಯದ ಪ್ರಾರಂಭ ವಿಳಂಬವಾಗಿರುತ್ತದೆ. ಈ ಮಧ್ಯೆ M/s BPCLರವರೊಂದಿಗಿನ ಇಂಧನ ಸರಬರಾಜು ಹಾಗೂ ಸಂಗ್ರಹಣೆ/ವಿತರಣೆ ಸೌಲಭ್ಯಗಳ ನಿರ್ಮಾಣ ಕಾರ್ಯದ ಒಡಂಬಡಿಕೆಯು ದಿನಾಂಕ: 01.09.2020ರಂದು ಕೊನೆಗೊಂಡಿರುವುದರಿಂದ ಹೊಸ ಆದೇಶವನ್ನು M/s HPCLರವರಿಗೆ ನೀಡಲಾಗಿದೆ. ಪ್ರಸ್ತುತ HPCLರವರಿಂದ ಹೊಸ ಸೌಲಭ್ಯಗಳನ್ನು ಪಡೆದು ಇಂಧನ ಪಂಪ್ ನಿರ್ಮಾಣಕ್ಕೆ ತಕ್ಷಣ ಕ್ರಮ ಕೈಗೊಳ್ಳಲಾಗುತ್ತದೆ. |
| ಇ. | ನೂತನವಾಗಿ ನಿರ್ಮಾಣವಾದ ಬಸ್ ಘಟಕವನ್ನು ಯಾವಾಗ ಕಾರ್ಯಾರಂಭಗೊಳಿಸಲಾಗುವುದು? (ಮಾಹಿತಿ ನೀಡುವುದು) | ನೂತನ ಬಸ್ ಘಟಕವನ್ನು ಶೀಘ್ರದಲ್ಲಿ ಕಾರ್ಯಾರಂಭಗೊಳಿಸಲಾಗುವುದು. |

ಸಂಖ್ಯೆ: ಟಿಡಿ 143 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 426 |
| **ಸದಸ್ಯರ ಹೆಸರು** | ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್. (ದೇವನಹಳ್ಳಿ) |
| **ಉತ್ತರಿಸಬೇಕಾದ ದಿನಾಂಕ** | 23.09.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | ದೇವನಹಳ್ಳಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಗ್ರಾಮೀಣ ರಸ್ತೆಗಳು ತುಂಬಾ ಹಾಳಾಗಿರುವುದು. ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ಹೌದು |
| ಆ. | 2019–20ನೇ ಸಾಲಿನಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಮಂಜೂರಾದ ಅನುದಾನ ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಎಷ್ಟು ಕಾಮಗಾರಿಗಳಿಗೆ ತಡೆಹಿಡಿದಿರುವ ಅನುದಾನವೆಷ್ಟು; (ಪೂರ್ಣ ಮಾಹಿತಿ ನೀಡುವುದು) | ಹೌದು,<br>2018–19ನೇ ಸಾಲಿನಲ್ಲಿ ಲೆ.ಶೀ. 3054 ರಡಿ ಮಂಜೂರು ಮಾಡಲಾಗಿದ್ದ ರೂ. 500.00 ಲಕ್ಷಗಳನ್ನು ತಡೆಹಿಡಿದಿದ್ದು, ಈ ಪೈಕಿ ರೂ. 200.00 ಲಕ್ಷಗಳನ್ನು ಲೆ.ಶೀ. 5054 ರಡಿ 2019–20ನೇ ಸಾಲಿನಲ್ಲಿ ಮುಂದುವರೆಸಿದೆ. |
| ಇ. | ಹಾಗಿದ್ದಲ್ಲಿ ಯಾವಕಾಲಮಿತಿಯಲ್ಲಿ ತಡೆಹಿಡಿದಿರುವ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲಾಗುವುದು. (ಸಂಪೂರ್ಣ ಮಾಹಿತಿ ನೀಡುವುದು) | 2018–19ನೇ ಸಾಲಿನಲ್ಲಿ ಲೆ.ಶೀ. 3054 ರಡಿ ಮಂಜೂರು ಮಾಡಲಾಗಿದ್ದ ರೂ. 500.00 ಲಕ್ಷಗಳನ್ನು ತಡೆಹಿಡಿದಿದ್ದು, ಈ ಪೈಕಿ ರೂ. 200.00 ಲಕ್ಷಗಳನ್ನು ಲೆ.ಶೀ. 5054 ರಡಿ 2019–20ನೇ ಸಾಲಿನಲ್ಲಿ ಮುಂದುವರೆಸಿದೆ. ಮುಂದುವರೆಸಿರುವ ಕಾಮಗಾರಿಗಳಿಗೆ ರೂ. 40.00 ಲಕ್ಷಗಳನ್ನು ಇದುವರೆವಿಗೂ ಬಿಡುಗಡೆ ಮಾಡಲಾಗಿರುತ್ತದೆ.<br>ಉಳಿಕೆ ಅನುದಾನವನ್ನು ಆರ್ಥಿಕ ಲಭ್ಯತೆಯನ್ನಾಧರಿಸಿ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ 07/05: ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 428 |
| ಸದಸ್ಯರ ಹೆಸರು | : | ಶ್ರೀ. ಐಹೊಳೆ.ಡಿ.ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸುವ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಬೆಳಗಾವಿ ಜಿಲ್ಲೆಯ ರಾಯಭಾಗ ಮತಕ್ಷೇತ್ರದ ರಾಯಭಾಗ ಹಾಗೂ ಚಿಕ್ಕೋಡಿ ತಾಲ್ಲೂಕಿನ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೇಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು |
| ಆ | ಹಾಗಿದ್ದಲ್ಲಿ ಯಾವ ಕಾಲಮಿತಿಯಲ್ಲಿ ಈ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೇಗೇರಿಸಲಾಗುವುದು. | 2017-18 ನೇ ಸಾಲಿನಲ್ಲಿ ಚಿಕ್ಕೋಡಿ ತಾಲ್ಲೂಕಿನ ಅಕ್ಕೋಳ ಹಾಗೂ ರಾಯಬಾಗ್ ತಾಲ್ಲೂಕಿನ ಅಳಗವಾಡಿ ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೇಗೇರಿಸಲಾಗಿರುತ್ತವೆ.<br><br>2018-19ನೇ ಸಾಲಿನಲ್ಲಿ ಚಿಕ್ಕೋಡಿ ತಾಲ್ಲೂಕಿನ ವಡ್ರಾಳ ಹಾಗೂ ರಾಯಬಾಗ್ ತಾಲ್ಲೂಕಿನ ಮೇಕಳಿ ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಮೇಲ್ದರ್ಜೇಗೇರಿಸಲು ಹಾಗೂ 2019-20 ನೇ ಸಾಲಿನಲ್ಲಿ ಚಿಕ್ಕೋಡಿ ತಾಲ್ಲೂಕಿನ ಹತ್ತರವಾಟ, ಮಜಲಟ್ಟಿ ಹಾಗೂ ರಾಯಬಾಗ್ ತಾಲ್ಲೂಕಿನ ಕಂಕಣವಾಡಿ, ಚಿಂಚಲಿ ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಮೇಲ್ದರ್ಜೇಗೇರಿಸಲು ಪ್ರಸ್ತಾವನೆ ಸ್ವೀಕೃತಗೊಂಡಿದ್ದು, ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿದ್ದು, ಸಹಮತಿ ದೊರೆತ ನಂತರ ಅನ್ವತೆ ಮೇರೆಗೆ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೇಗೇರಿಸಲು ಕ್ರಮವಹಿಸಲಾಗುವುದು. |
| ಇ | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | ಅನ್ವಯಿಸುವುದಿಲ್ಲ. |

ಸಂ: ಪಸಂಮೀ ಇ-150 ಪಸಸೇ 2020

(ಪ್ರಭು. ಬಿ. ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

## ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಬಾಗ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 431

ಉತ್ತರ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ರಾಯಬಾಗ ತಾಲ್ಲೂಕಿನ ಬಿರನಾಳ ಹಾಗೂ ಇತರೆ 13 ಗ್ರಾಮಗಳ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ಪ್ರಸ್ತಾವನೆಗೆ ಸರ್ಕಾರ ಮಂಜೂರಾತಿಯನ್ನು ನೀಡಿ ಕಾಮಗಾರಿಯನ್ನು ಪ್ರಾರಂಭಿಸಿ, ಈ ಯೋಜನೆಯ ವ್ಯಾಪ್ತಿಯ ಗ್ರಾಮಗಳ ಸಾರ್ವಜನಿಕರಿಗೆ ಕುಡಿಯುವ ನೀರನ್ನು ಒದಗಿಸಲು ಎಷ್ಟು ಅಂದಾಜು ವೆಚ್ಚದಲ್ಲಿ ಕ್ರಮ ಕೈಗೊಳ್ಳುವುದು; | ದಿನಾಂಕ:01.02.2017ರಂದು ನಡೆದ SLSSC ಸಭೆಯಲ್ಲಿ ಬೆಳಗಾವಿ ಜಿಲ್ಲೆಯ ರಾಯಬಾಗ ತಾಲ್ಲೂಕಿನ ಬಿರನಾಳ ಹಾಗೂ ಇತರೆ 13 ಗ್ರಾಮಗಳ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯ ಅಂದಾಜು ಮೊತ್ತ ರೂ.4250.00ಲಕ್ಷಗಳ ವಿಸ್ತೃತ ಯೋಜನಾ ವರದಿಗೆ ಅನುಮೋದನೆ ದೊರೆತಿರುತ್ತದೆ.<br><br>ರಾಜ್ಯದ ಎಲ್ಲಾ ಗ್ರಾಮೀಣ ಪ್ರದೇಶಗಳಿಗೆ ಕುಡಿಯುವ ನೀರನ್ನು ಪೂರೈಸುವ ಸಲುವಾಗಿ ಯೋಜನೆಗಳನ್ನು ಪರಿಪೂರ್ಣಗಿ ಹಾಗೂ ಸಮರ್ಪಕವಾಗಿ ಅನುಷ್ಠಾನಗೊಳಿಸುವುದು ಅತಿ ಅವಶ್ಯಕವಾಗಿರುತ್ತದೆ. ಇದಕ್ಕಾಗಿ ಮಿತವ್ಯಯದ ಕುಡಿಯುವ ನೀರಿನ ಯೋಜನೆಗಳನ್ನು ರೂಪಿಸಬೇಕಾಗುತ್ತದೆ. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದಂತೆ, Comprehensive Planನ್ನು ವಿಭಾಗ ಕಚೇರಿಯಿಂದ ಸಿದ್ಧಪಡಿಸಲಾಗುತ್ತಿದೆ. ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಗಳನ್ನು ಇನ್ನು ಮುಂದೆ ಕರ್ನಾಟಕ ಸರ್ಕಾರದ ಮಹತ್ತರ ಯೋಜನೆಯಲ್ಲಿ ಒಂದಾದ "ಜಲಧಾರೆ" ಯೋಜನೆಯಡಿಯಲ್ಲಿ ಕೈಗೊಳ್ಳಲಾಗುವುದು. ಅನುದಾನದ ಲಭ್ಯತೆ ಅನುಸಾರ ಆಡಳಿತಾತ್ಮಕ ಅನುಮೋದನೆ ದೊರೆತ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| ಇ) | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | ಅನುದಾನದ ಲಭ್ಯತೆ ಅನುಸಾರ ಆಡಳಿತಾತ್ಮಕ ಅನುಮೋದನೆ ದೊರೆತ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು. |

ಸಂ:ಗ್ರಾಕುನೀ&ನೈಇ 17 ಗ್ರಾನೀಸ(4)2020

ಕೆ.ಎಸ್. ಈಶ್ವರಪ್ಪ

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 444

ಉತ್ತರಿಸಬೇಕಾದ ದಿನಾಂಕ : 23.09.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಲೆನಾಡು ಗಿಡ್ಡ ತಳಿಯು ವರ್ಷದಿಂದ ವರ್ಷಕ್ಕೆ ಕ್ಷೀಣಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ಹೌದು, ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಸೊರಬ ತಾಲ್ಲೂಕಿನಲ್ಲಿ ಗೋವುಗಳಲ್ಲಿ ಅತ್ಯಂತ ಶ್ರೇಷ್ಠ ತಳಿಯಾದ ಮಲೆನಾಡು ಗಿಡ್ಡ ತಳಿಯ ಸಂರಕ್ಷಣೆಯ ಮಾಡಲು ಮಲೆನಾಡು ಗಿಡ್ಡ ಸಂರಕ್ಷಣಾ ಕೇಂದ್ರವನ್ನು ತೆರೆಯುವ ಯೋಜನೆಯನ್ನು ಸರ್ಕಾರ ಹೊಂದಿದೆಯೇ: | ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಇ | ಹೊಂದಿದ್ದಲ್ಲಿ, ಪ್ರಸ್ತುತ ಆರ್ಥಿಕ ವರ್ಷದಲ್ಲಿ ಇದಕ್ಕಾಗಿ ಅನುದಾನ ಬಿಡುಗಡೆ ಮಾಡಲಾಗುವುದೇ? | -ಅನ್ವಯಿಸುವುದಿಲ್ಲ - |

ಪಸಂಮೀ ಇ-228 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 445

ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಸೊರಬ ತಾಲ್ಲೂಕಿನ ಎಲ್ಲಾ ಹೋಬಳಿಗಳಲ್ಲಿ ನೂತನ ಸುಸಜ್ಜಿತ ಬಸ್ ನಿಲ್ದಾಣ ನಿರ್ಮಾಣ ಮಾಡುವ ಯೋಜನೆಯನ್ನು ಸರ್ಕಾರ ಹಮ್ಮಿಕೊಂಡಿದೆಯೇ; | ಸೊರಬ ತಾಲ್ಲೂಕಿನ ಎಲ್ಲಾ ಹೋಬಳಿಗಳಲ್ಲಿ ಸುಸಜ್ಜಿತ ಬಸ್ ನಿಲ್ದಾಣ ನಿರ್ಮಾಣ ಮಾಡುವ ಯೋಜನೆ ಹೊಂದಿರುವುದಿಲ್ಲ. |
| ಆ. | ಹಾಗಿದ್ದಲ್ಲಿ, ಪ್ರಸ್ತುತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಪ್ರಾರಂಭಿಸಲಾಗುವುದೇ; | ಪ್ರಸ್ತುತ ಕೋವಿಡ್-19ರ ಸಾಂಕ್ರಾಮಿಕ ರೋಗದಿಂದಾಗಿ ನಿಗಮವು ಆರ್ಥಿಕ ಸಂಕಷ್ಟದಲ್ಲಿರುವ ಕಾರಣ ಹೊಸ ಕಾಮಗಾರಿಗಳನ್ನು ನಿಗಮದ ವತಿಯಿಂದ ಕೈಗೊಳ್ಳುವುದು ಕಷ್ಟಕರವಾಗಿದ್ದು, ಮುಂದಿನ ದಿನಗಳಲ್ಲಿ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ಕಾಮಗಾರಿಯನ್ನು ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುತ್ತದೆ. |
| ಇ. | ಏಕಕಾಲದಲ್ಲಿ ಎಷ್ಟು ಬಸ್ಸುಗಳು ನಿಂತು ಹೋಗುವ ರೀತಿಯಲ್ಲಿ ಬಸ್ ನಿಲ್ದಾಣವನ್ನು ನಿರ್ಮಾಣ ಮಾಡಲಾಗುವುದು; | ಬಸ್ ನಿಲ್ದಾಣ ನಿರ್ಮಾಣದ ನಕ್ಷೆಯನ್ನು ತಯಾರಿಸುವಾಗ ನಿಗಮದ ಮಾರ್ಗಸೂಚಿ ಸುತ್ತೋಲೆ ಸಂ.01/2015-16 ದಿನಾಂಕ: 06.06.2015ರಂತೆ ಒದಗಿಸಬೇಕಾದ ಸಾರಿಗೆ ಸೌಲಭ್ಯಗಳನ್ನು ಆಧರಿಸಿ ಬಸ್ಸುಗಳ ನಿಲುಗಡೆಗೆ ಸೂಕ್ತ ಸ್ಥಳಾವಕಾಶ ಒದಗಿಸಿ ಬಸ್ ನಿಲ್ದಾಣವನ್ನು ನಿರ್ಮಿಸಲು ಕ್ರಮ ಜರುಗಿಸಲಾಗುತ್ತದೆ. |
| ಈ. | ಸೊರಬ ಪಟ್ಟಣದಲ್ಲಿ ನಗರ ಸಾರಿಗೆ ವ್ಯವಸ್ಥೆಯನ್ನು ಯಾವಾಗ ಪ್ರಾರಂಭಿಸಲಾಗುವುದು? | ಸೊರಬ ಪಟ್ಟಣದಲ್ಲಿ ಜನಸಂಖ್ಯೆ ಕಡಿಮೆ ಇರುವ ಕಾರಣದಿಂದಾಗಿ ನಗರ ಸಾರಿಗೆಗಳನ್ನು ಪ್ರಾರಂಭಿಸುವ ಪ್ರಸ್ತಾವನೆ ಪ್ರಸ್ತುತ ಇರುವುದಿಲ್ಲ. |

ಸಂಖ್ಯೆ: ಟಿಡಿ 144 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 448 |
| ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ (ಸೊರಬ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಸೊರಬ ತಾಲ್ಲೂಕಿನಲ್ಲಿ ಗ್ರಾಮೀಣ ಭಾಗದ ಎಲ್ಲಾ ರಸ್ತೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಲವು ರಸ್ತೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಬಂದಿದ್ದಲ್ಲಿ, ಗ್ರಾಮೀಣ ರಸ್ತೆಗಳ ಅಭಿವೃದ್ಧಿಗೆ ಪ್ರಸ್ತುತ ಆರ್ಥಿಕ ವರ್ಷದಲ್ಲಿ ವಿಶೇಷ ಅನುದಾನವನ್ನು ಮಂಜೂರಾತಿ ಮಾಡಲಾಗುವುದೇ; | • ಪ್ರಸ್ತುತ ಸಾಲಿನಲ್ಲಿ ಸೊರಬ ತಾಲ್ಲೂಕಿಗೆ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ – ಹಂತ 3 ರಡಿ 31.12 ಕಿ.ಮೀ. ರಸ್ತೆ ಕಾಮಗಾರಿಗಳನ್ನು ರೂ. 2348.92 ಲಕ್ಷಗಳ ಮೊತ್ತದಲ್ಲಿ ಅಭಿವೃದ್ಧಿ ಪಡಿಸಲು ಕ್ರಮ ಕೈಗೊಳ್ಳಲಾಗಿದೆ.<br>• 2019–20ನೇ ಸಾಲಿನಲ್ಲಿ ಸೊರಬ ತಾಲ್ಲೂಕಿನ ವ್ಯಾಪ್ತಿಯ ರಸ್ತೆ ಕಾಮಗಾರಿಗಳನ್ನು ದುರಸ್ತಿ ಪಡಿಸಲು ಕೆಳಕಂಡಂತೆ ಅನುದಾನವನ್ನು ಮಂಜೂರು ಮಾಡಲಾಗಿದೆ. |

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಯೋಜನೆ | ಮಂಜೂರಾತಿ | ಬಿಡುಗಡೆ |
|---|---|---|---|
| 01 | 5054– ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಮಂಜೂರಾತಿ ಕಾರ್ಯಕ್ರಮ | 1000.00 | 0.00 |
| 02 | 5054– ಮಳೆ ಪರಿಹಾರ | 3121.00 | 3021.00 |

ಕಡತ ಸಂಖ್ಯೆ: ಗ್ರಾಅಪ:01/127:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 454 |
|---|---|
| ಸದಸ್ಯರ ಹೆಸರು | ಶ್ರೀ ನಿಂಙ್ಣನವರ್ ಸಿ.ಎಂ (ಕಲಘಟಗಿ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | 2019-20ನೇ ಸಾಲಿನಲ್ಲಿ ಕಲಘಟಗಿ ವಿಧಾನಸಭ ಮತ ಕ್ಷೇತ್ರ ವ್ಯಾಪ್ತಿಯಲ್ಲಿ ಅತೀ ವೃಷ್ಟಿಯಿಂದ ಉಂಟಾದ ಗ್ರಾಮೀಣ ಭಾಗದ ರಸ್ತೆ ಸುಧಾರಣೆಗಾಗಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ಅನುದಾನ ಬಿಡುಗಡೆಯಾಗಿದ್ದು, ಮತ್ತೆ ಸರ್ಕಾರ ಸದರಿ ಅನುದಾನವನ್ನು ಮರಳಿ ಪಡೆದಿರವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2019-20ನೇ ಸಾಲಿನಲ್ಲಿ ಕಲಘಟಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಉಂಟಾದ ಅತೀವೃಷ್ಠಿಯಿಂದ ಹಾಳಾದ ಗ್ರಾಮೀಣ ಭಾಗದ ರಸ್ತೆ ಸುಧಾರಣೆಗಾಗಿ ರೂ. 603.00 ಲಕ್ಷಗಳನ್ನು ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದ್ದು, ಬಿಡುಗಡೆ ಮಾಡಿರುವ ಯಾವುದೇ ಅನುದಾನವನ್ನು ಮರಳಿ ಪಡೆದಿರುವುದಿಲ್ಲ. |
| ಆ. | ಮಳೆ ಹಾನಿಯಿಂದ ಹಾಳಾದ ಗ್ರಾಮೀಣ ರಸ್ತೆಗಳ ಸುಧಾರಣೆಗೆ ಅನುದಾನ ಅತೀ ಅವಶ್ಯಕವಿದ್ದು ನೆರೆ ಹಾವಳಿಗೆ ಮೀಸಲಿರಿಸಿದ ಈ ಅನುದಾನವನ್ನು ಸರ್ಕಾರ ಮರಳಿ ಪಡೆಯಲು ಕಾರಣವೇನು; | ಮಳೆ ಹಾನಿಯಿಂದ ಹಾಳಾದ ಗ್ರಾಮೀಣ ರಸ್ತೆಗಳ ದುರಸ್ತಿಗೆ ಮೀಸಲಿಟ್ಟ ಯಾವುದೇ ಅನುದಾನವನ್ನು ಮರಳಿ ಪಡೆದಿರುವುದಿಲ್ಲ. |
| ಇ. | ಸದರಿ ಅನುದಾನವನ್ನು ಸಂಪೂರ್ಣವಾಗಿ ಯಾವಾಗ ಬಿಡುಗಡೆ ಮಾಡಲಾಗುವುದು; | ಬಿಡುಗಡೆಗೆ ಬಾಕಿಯಿರುವ ಅನುದಾನವನ್ನು ಆರ್ಥಿಕ ಲಭ್ಯತೆಯನ್ನಾಧರಿಸಿ ಬಿಡುಗಡೆ ಮಾಡಲು ಕ್ರಮ ವಹಿಸಬೇಕಿದೆ. |
| ಈ. | 2020ನೇ ಆಗಸ್ಟ್ ಮೊದಲನೇ ವಾರದಲ್ಲಿ ಮತ್ತೇ ಸುರಿದ ಮಳೆಯಿಂದಾಗಿ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳು ಸಂಪೂರ್ಣವಾಗಿ ಹಾಳಾಗಿದ್ದು, ಈ ವರ್ಷ ನೆರೆ ಹಾವಳಿಗೆ ಈ ವರ್ಷ ಎಷ್ಟು ಅನುದಾನ ಮೀಸಲಿರಿಸಲಾಗಿದೆ? (ಸಂಪೂಣ ಮಾಹಿತಿ ನೀಡುವುದು) | ಪ್ರಸ್ತುತ ಸಾಲಿನಲ್ಲಿ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ, ಕೆರೆ ಹಾಗೂ ಸೇತುವೆಗಳ ವಿವರಗಳನ್ನು ಪಡೆದು ಕ್ರೋಢೀಕರಿಸಿ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ರವರಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಅನುದಾನವನ್ನು ನಿರೀಕ್ಷಿಸಲಾಗಿದೆ. |

ಕಡತ ಸಂಖ್ಯೆ: ಗ್ರಾಅಪ:01/109:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 460

ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ನಾಗಠಾಣ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಚಡಚಣ ಪಟ್ಟಣದಲ್ಲಿ ನೂತನ ಬಸ್ ಘಟಕದ ಕಾಮಗಾರಿ ವಿಳಂಬವಾಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ನಾಗಠಾಣ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಚಡಚಣ ಪಟ್ಟಣದಲ್ಲಿ ನೂತನ ಬಸ್ ಘಟಕವನ್ನು ನಿರ್ಮಿಸುವ ಸಲುವಾಗಿ ಪಟ್ಟಣ ಪಂಚಾಯತಿ ವಾರ್ಡ್ ನಂ.09ರ ಜತ್ತ ಮತ್ತು ಸಲಗರ ರಸ್ತೆಯ ಮಧ್ಯದ ಗಾಂವಠಾಣ ಜಾಗದ 4 ಎಕರೆ ನಿವೇಶನ ಹಸ್ತಾಂತರಿಸಲು ರೂ.4.20 ಲಕ್ಷ ಮೊತ್ತವನ್ನು ಈಗಾಗಲೇ ಪಾವತಿಸಿದ್ದು, ಸದರಿ ನಿವೇಶನವನ್ನು ಸಂಸ್ಥೆಯ ಹೆಸರಿಗೆ ವರ್ಗಾಯಿಸಬೇಕಿರುತ್ತದೆ. |
| ಆ. | ಹಾಗಿದ್ದಲ್ಲಿ, ವಿಳಂಬವಾಗಿರುವುದಕ್ಕೆ ಕಾರಣಗಳೇನು; ಹಾಗೂ ಕಾಮಗಾರಿ ಪ್ರಾರಂಭಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ಒದಗಿಸುವುದು) | ನಿವೇಶನ ಹಸ್ತಾಂತರ ಪ್ರಕ್ರಿಯೆಯಲ್ಲಿ ವಿಳಂಬವಾಗಿರುವುದರಿಂದ, ಚಡಚಣ ಪಟ್ಟಣದಲ್ಲಿ ನೂತನ ಬಸ್ ಘಟಕವನ್ನು ನಿರ್ಮಿಸುವ ಕಾಮಗಾರಿ ಪ್ರಾರಂಭಿಸಲು ವಿಳಂಬವಾಗಿರುತ್ತದೆ. |
| ಇ. | ಚಡಚಣ ಬಸ್ ಘಟಕದ ನಿರ್ಮಾಣಕ್ಕೆ ಸರಕಾರ ನಿಗದಿಪಡಿಸಲಾಗಿರುವ ಅನುದಾನವೆಷ್ಟು; ಹಾಗೂ ಮುಂದಿನ ಯಾವ ಅವಧಿಯಲ್ಲಿ ಬಸ್ ಘಟಕ ನಿರ್ಮಾಣ ಕಾಮಗಾರಿಯನ್ನು ಪೂರ್ಣಗೊಳಿಸ ಲಾಗುವುದು; (ವಿವರ ನೀಡುವುದು) | ಚಡಚಣದಲ್ಲಿ ನೂತನ ಬಸ್ ಘಟಕವನ್ನು ನಿರ್ಮಿಸುವ ಕಾಮಗಾರಿಯನ್ನು ರೂ.600.00 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ಯೋಜಿಸಲಾಗಿದೆ. ಕ್ರಿಯಾ ಯೋಜನೆ ಅನುಮೋದನೆಗೊಂಡು ಅನುದಾನ ಬಿಡುಗಡೆಗೊಂಡ ನಂತರ ಕಾಮಗಾರಿ ಪ್ರಾರಂಭಿಸಲಾಗುವುದು. |
| ಈ. | ನೂತನವಾಗಿ ಆರಂಭವಾಗುವ ಚಡಚಣ ಬಸ್ ಘಟಕಕ್ಕೆ ಹೊಸ ಬಸ್ಸುಗಳನ್ನು ನೀಡಲಾಗುವುದೇ; ಈ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಳ್ಳಲಾಗುತ್ತಿದೆ? (ವಿವರ ನೀಡುವುದು) | ಪ್ರಸ್ತುತ ಕೋವಿಡ್-19ರ ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಸಂಸ್ಥೆಯು ಆರ್ಥಿಕ ಸಂಕಷ್ಟ ಎದುರುಸುತ್ತಿರುವುದರಿಂದ ಪ್ರಸಕ್ತ ಸಾಲಿನಲ್ಲಿ ಹೊಸ ಬಸ್ಸುಗಳ ಖರೀದಿಯನ್ನು ಕೈಬಿಡಲಾಗಿರುತ್ತದೆ. ಹೊಸದಾಗಿ ಬಸ್ ಘಟಕ ಆರಂಭಗೊಂಡು ಹೊಸ ಬಸ್ಸುಗಳ ಖರೀದಿ ಪ್ರಕ್ರಿಯೆಗೆ ಚಾಲನೆ ನೀಡಿದಾಗ ಅವಶ್ಯಕತೆಗನುಗುಣವಾಗಿ ಬಸ್ಸುಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುತ್ತದೆ. |

ಸಂಖ್ಯೆ: ಟಿಡಿ 145 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 464 |
| ಸದಸ್ಯರ ಹೆಸರು | : | ಶ್ರೀ. ರಾಜ್‌ಕುಮಾರ್ ಪಾಟೀಲ್ (ಸೇಡಂ) |
| ಉತ್ತರಿಸುವ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ)</td><td>ಸೇಡಂ ಮತ ಕ್ಷೇತ್ರದಲ್ಲಿ ಎಷ್ಟು ಪಶುಸಂಗೋಪನಾ ಆಸ್ಪತ್ರೆಗಳಿವೆ; (ಅಂಕಿ ಸಂಖ್ಯೆಗಳ ಸಹಿತ ಮಾಹಿತಿ ಒದಗಿಸುವುದು)</td><td>ಸೇಡಂ ಮತಕ್ಷೇತ್ರದಲ್ಲಿ ಈ ಕೆಳಕಂಡಂತೆ ಪಶು ವೈದ್ಯಕೀಯ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ.
<table>
<tr><th>ಕ್ರ. ಸಂ</th><th>ಪಾಲಿ ಕ್ಲಿನಿಕ್</th><th>ಪಶು ಆಸ್ಪತ್ರೆ</th><th>ಪಶು ಚಿಕಿತ್ಸಾಲಯ</th><th>ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರ</th><th>ಸಂಚಾರಿ ಪಶು ಚಿಕಿತ್ಸಾಲಯ</th><th>ಒಟ್ಟು</th></tr>
<tr><td>1</td><td>0</td><td>5</td><td>14</td><td>2</td><td>1</td><td>22</td></tr>
</table></td></tr>
<tr><td>ಆ)</td><td>ಇನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಶು ಆಸ್ಪತ್ರೆಗಳನ್ನು ತೆರೆಯಲು ಸರ್ಕಾರ ಉದ್ದೇಶಿಸಿದೆಯೇ;</td><td>ಪ್ರಸಕ್ತ ಸಾಲಿನಲ್ಲಿ ಹೊಸ ಪಶು ವೈದ್ಯಕೀಯ ಆಸ್ಪತ್ರೆಗಳನ್ನು ಪ್ರಾರಂಭಿಸುವ ಯಾವುದೇ ಯೋಜನೆ ಸರ್ಕಾರದ ಮುಂದಿರುವುದಿಲ್ಲ.</td></tr>
<tr><td>ಇ)</td><td>ಉದ್ದೇಶಿಸಿದಲ್ಲಿ, ಯಾವಾಗ ಪಶು ಆಸ್ಪತ್ರೆಗಳನ್ನು ತೆರೆಯಲಾಗುವುದು?</td><td>ಅನ್ವಯಿಸುವುದಿಲ್ಲ</td></tr>
</table>

ಸಂ: ಪಸಂಮೀ ಇ-147 ಪಸಸೇ 2020

(ಪ್ರಭು. ಬಿ. ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 466
ಮಾನ್ಯ ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
ವಿಷಯ : ಯಾತ್ರಿನಿವಾಸ ನಿರ್ಮಾಣ

ಉತ್ತರಿಸುವ ದಿನಾಂಕ : 23/09/2020

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2017-18ನೇ ಸಾಲಿನಲ್ಲಿ ವಿಜಯಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಗೊಳಸಾರ ಗ್ರಾಮದ ಶ್ರೀ ಪುಂಡಲಿಂಗ ದೇವಸ್ಥಾನ ಬಳಿ ರೂ.25.00 ಲಕ್ಷಗಳ ವೆಚ್ಚದಲ್ಲಿ ಯಾತ್ರಿ ನಿವಾಸದ ಕಾಮಗಾರಿಯನ್ನು ಕೈಗೊಳ್ಳಲು ಪರಿಷ್ಕೃತ ಮಂಜೂರಾತಿ ನೀಡಿ ಆದೇಶ ಹೊರಡಿಸಿದ್ದು ನಿಜವೇ; | ಹೌದು. |
| ಆ) | ಹಾಗಿದ್ದಲ್ಲಿ, ಇದುವರೆಗೂ ಸದರಿ ಸ್ಥಳದಲ್ಲಿ ಯಾತ್ರಿನಿವಾಸದ ನಿರ್ಮಾಣದ ಕಾಮಗಾರಿಯನ್ನು ಕೈಗೊಳ್ಳದಿರಲು ಕಾರಣಗಳೇನು? | ಕಾಮಗಾರಿ ಬದಲಾವಣೆಯ ಪರಿಷ್ಕೃತ ಆದೇಶವನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ವಿಜಯಪುರ ರವರಿಗೆ ದಿನಾಂಕ: 06/10/2018 ರಂದು ಕಳುಹಿಸಲಾಗಿದೆ. |
| ಇ) | ಸದರಿ ಕಾಮಗಾರಿಯನ್ನು ಕೈಗೊಳ್ಳಲು ಇದುವರೆಗೂ ಸರ್ಕಾರದ ಪರಿಷ್ಕೃತ ಮಂಜೂರಾತಿ ಆದೇಶ ಪತ್ರವು ಉಪ ನಿರ್ದೇಶಕರು, ವಿಜಯಪುರ ಇವರಿಗೆ ತಲುಪದಿರಲು ಕಾರಣಗಳೇನು; | |
| ಈ) | ಈ ಕಾಮಗಾರಿಗೆ ಪ್ರಸಕ್ತ ಸಾಲಿನ ಕ್ರಿಯಾಯೋಜನೆಯಲ್ಲಿ ಅನುದಾನವನ್ನು ಕಾಯ್ದಿರಿಸಲಾಗಿದೆಯೇ; | ಯಾತ್ರಿನಿವಾಸ ನಿರ್ಮಿಸಲು ನಿವೇಶನ ಲಭ್ಯತೆ ಮತ್ತು ಜಮೀನನ್ನು ಇಲಾಖೆಯ ಹೆಸರಿಗೆ ಹಸ್ತಾಂತರಿಸಿಕೊಂಡು ಜಿಲ್ಲಾಧಿಕಾರಿಗಳು ಆಡಳಿತಾತ್ಮಕ ಅನುಮೋದನೆ ನೀಡಿ ಕಾಮಗಾರಿಯನ್ನು ಪ್ರಾರಂಭಿಸುವುದಕ್ಕೆ ಕ್ರಮವಹಿಸಿ ಅನುದಾನ ಬಿಡುಗಡೆಗೆ ಕೋರಿಕೆ ಸಲ್ಲಿಸಿದರೆ ಅಗತ್ಯ ಅನುದಾನ ಒದಗಿಸಲು ಕ್ರಮ ವಹಿಸಲಾಗುವುದು. |
| ಉ) | ಸದರಿ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು; ಅದಕ್ಕಾಗಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು? | |

ಕಡತ ಸಂಖ್ಯೆ: ಟಿಓಆರ್ 172 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ .
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 467
ಮಾನ್ಯ ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
ವಿಷಯ : ಕಾಮಗಾರಿ ಬದಲಾವಣೆ ಪರಿಷ್ಕೃತ ಆದೇಶ
ಉತ್ತರಿಸುವ ದಿನಾಂಕ : 23/09/2020
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರವಾಸೋದ್ಯಮ ಇಲಾಖೆಯಿಂದ ವಿಜಯಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಹಿರೇಮಸಳಿ ಗ್ರಾಮದ ಶ್ರೀ ಶರಣ ಬಸವೇಶ್ವರ ದೇವಸ್ಥಾನದ ಬಳಿ (2017ನೇ), ಅರ್ಜುನಗಿ ಬಿ.ಕೆ. ಗ್ರಾಮದ ಶ್ರೀ ಪಂಚಾಕ್ಷರಿ ಮಠದ ಬಳಿ (2018ನೇ) ಹಾಗೂ ಅಥರ್ಗಾ ಗ್ರಾಮದ ಶ್ರೀ ಸಿದ್ದೇಶ್ವರ ಸ್ವಾಮೀಜಿ ಆಶ್ರಮದ ಬಳಿ (2019ನೇ) ಯಾತ್ರಿನಿವಾಸ ನಿರ್ಮಾಣ ಮಾಡಲು ಅನುದಾನ ಮಂಜೂರು ಮಾಡಿದ್ದು ನಿಜವೇ? | ಹೌದು. |
| ಆ) | ಹಾಗಿದ್ದಲ್ಲಿ, ಸದರಿ ಸ್ಥಳಗಳಲ್ಲಿ ನಿವೇಶನ ಲಭ್ಯವಿಲ್ಲದ ಕಾರಣ ಮಂಜೂರಾದ ಕಾಮಗಾರಿಗಳಿಗೆ ಬದಲಾಗಿ ಅಹಿರಸಂಗ ಗ್ರಾಮದ ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯರ ಮಠದ ಬಳಿ, ರೋಡಗಿ ಗ್ರಾಮದ ಶ್ರೀ ಶಿವಲಿಂಗೇಶ್ವರ ಮಠದ ಬಳಿ, ಅಗರಖೇಡ ಗ್ರಾಮದ ಶ್ರೀ ಪ್ರಭುಲಿಂಗೇಶ್ವರ ವಿರಕ್ತ ಮಠದ ಬಳಿ ಯಾತ್ರಿನಿವಾಸ ನಿರ್ಮಾಣ ಮಾಡಲು ಪರಿಷ್ಕೃತ ಕಾಮಗಾರಿ ಬದಲಾವಣೆ ಮಾಡಿ ಆದೇಶ ಹೊರಡಿಸುವಂತೆ ಪ್ರಸ್ತಾವನೆ ಸಲ್ಲಿಸಿರುವುದು ನಿಜವೇ; | ಪ್ರಸ್ತಾವನೆ ಸ್ವೀಕೃತವಾಗಿದ್ದು ಪರಿಶೀಲನೆಯಲ್ಲಿ ಇರುತ್ತದೆ. |
| ಇ) | ಹಾಗಿದ್ದಲ್ಲಿ, ಇದುವರೆಗೂ ಕಾಮಗಾರಿ ಬದಲಾವಣೆ ಮಾಡಿ ಆದೇಶ ಹೊರಡಿಸದಿರಲು ಕಾರಣಗಳೇನು; (ವಿವರ ನೀಡುವುದು) | ಕಾಮಗಾರಿ ಬದಲಾವಣೆ ಕೋರಿ ಮಾನ್ಯ ಶಾಸಕರು ಸಲ್ಲಿಸಿರುವ ಮನವಿಯ ಬಗ್ಗೆ ಜಿಲ್ಲಾಧಿಕಾರಿಗಳಿಂದ ಸದರಿ ಕಾಮಗಾರಿಗೆ ನಿವೇಶನದ ಲಭ್ಯತೆ ಮತ್ತು ಜಮೀನನ್ನು ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ವರದಿ ನೀಡುವಂತೆ ಪತ್ರ ಬರೆಯಲಾಗಿದ್ದು, ವರದಿ ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮ ವಹಿಸಲಾಗುವುದು. |
| ಈ) | ಪರಿಷ್ಕೃತ ಮಂಜೂರಾತಿ ಆದೇಶವನ್ನು ಯಾವಾಗ ನೀಡಲಾಗುವುದು? (ವಿವರ ನೀಡುವುದು) | |

ಕಡತ ಸಂಖ್ಯೆ: ಟಿಓಆರ್ 170 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಅಂಜಲಿ ಹೇಮಂತ್ ನಿಂಬಾಳ್ಕರ್ ಡಾ॥ (ಖಾನಾಪುರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 621

ಉತ್ತರ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಖಾನಾಪುರ ವಿಧಾನಸಭಾ ಕ್ಷೇತ್ರದ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಗಳು ಸರ್ಕಾರದ ಮಟ್ಟದಲ್ಲಿ ಅನುಮೋದನೆಗೆ ಮತ್ತು ಅನುದಾನ ಹಂಚಿಕೆಗೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆ ಖಾನಾಪೂರ ವಿಧಾನಸಭಾ ಕ್ಷೇತ್ರದ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಗಳು ಸರ್ಕಾರದ ಮಟ್ಟದಲ್ಲಿ ಅನುಮೋದನೆಗೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಪ್ರಸ್ತಾಪಿಸಲಾದ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಗಳು ಯಾವುವು; | (see table below) |

| ಕ್ರ ಸಂ. | ಯೋಜನೆಯ ಹೆಸರು | ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ |
|---|---|---|
| 1 | ಮುದೆಕೊಪ್ಪ ಹಾಗೂ ಇತರೆ 10 ಗ್ರಾಮಗಳಿಗೆ ಮಲಪ್ರಭಾ ನದಿಯಿಂದ ಶಾಶ್ವತ ಕುಡಿಯುವ ನೀರು ಯೋಜನೆ | 1575.00 |
| 2 | ನಂದಗಡ ಹಾಗೂ ಇತರೆ 25 ಗ್ರಾಮಗಳಿಗೆ ಶಾಶ್ವತ ಕುಡಿಯುವ ನೀರು ಯೋಜನೆ | 5500.00 |
| 3 | ಬೀಡಿ ಹಾಗೂ ಇತರೆ 17 ಗ್ರಾಮಗಳಿಗೆ ಶಾಶ್ವತ ಕುಡಿಯುವ ನೀರು ಯೋಜನೆ | 2900.00 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಸದರಿ ಪ್ರಸ್ತಾವನೆಗಳು ಪ್ರಸ್ತುತ ಯಾವ ಹಂತದಲ್ಲಿದೆ; | ಸದರಿ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಯ ಪ್ರಸ್ತಾವನೆಗಳ ಬದಲಾಗಿ ಒಟ್ಟಾರೆ ಜಿಲ್ಲೆಗೆ ಸಮಗ್ರ ಯೋಜನೆಯನ್ನು ತಯಾರಿಸಿ "ಜಲಧಾರೆ" ಯೋಜನೆಯಡಿಯಲ್ಲಿ ಅನುದಾನದ ಲಭ್ಯತೆಗನುಗುಣವಾಗಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ. |
| ಈ) | ಸದರಿ ಪ್ರಸ್ತಾವನೆಗಳ ಅನುಷ್ಠಾನಕ್ಕೆ ಸರ್ಕಾರವು ಕೈಗೊಂಡ ಕ್ರಮಗಳೇನು? | |

ಸಂ:ಗ್ರಾಕುನೀ&ನೈಇ 18 ಗ್ರಾನೀಸ(4) 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 629 |
| ಸದಸ್ಯರ ಹೆಸರು | : ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ) |
| ಉತ್ತರಿಸಬೇಕಾದ ದಿನಾಂಕ | : 23.09.2020 |
| ಉತ್ತರಿಸುವ ಸಚಿವರು | : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶಿಡ್ಲಘಟ್ಟ ನಗರ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಲ್ಪಸಂಖ್ಯಾತರು ವಾಸಿಸುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; | ಹೌದು |
| ಆ | ಹಾಗಿದ್ದಲ್ಲಿ, ಅಲ್ಪಸಂಖ್ಯಾತರ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದು ರಸೆ, ಚರಂಡಿ ಇಲ್ಲದೆ ತೊಂದರೆ ಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಿಕ್ಕಬಳ್ಳಾಪುರ ಜಿಲ್ಲೆ ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಅಲ್ಪಸಂಖ್ಯಾತರ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದು, ರಸ್ತೆ, ಚರಂಡಿ ಇಲ್ಲದೆ ತೊಂದರೆ ಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಪ್ರಯುಕ್ತ 2017-18ನೇ ಸಾಲಿಗೆ ಸದರಿ ವಿಧಾನಸಭಾ ಕ್ಷೇತ್ರಕ್ಕೆ ರೂ.50.00 ಲಕ್ಷಗಳು ಮತ್ತು 2018-19ನೇ ಸಾಲಿಗೆ ಒಟ್ಟು ರೂ.325.00 ಲಕ್ಷಗಳ ಅನುದಾನವು ಬಿಡುಗಡೆಯಾಗಿರುತ್ತದೆ ಹಾಗೂ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಇ | ಹಾಗಿದ್ದಲ್ಲಿ, ಈ ಕಾಲೋನಿಗಳಿಗೆ ಮೂಲಭೂತ ಸೌಲಭ್ಯಗಳಿಗೆ ಹಣ ಬಿಡುಗಡೆ ಮಾಡುವ ವಿಚಾರ ಸರ್ಕಾರದ ಗಮನದಲ್ಲಿದೆಯೇ; | ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಅಭಿವೃದ್ಧಿ ಯೋಜನೆಯಡಿ ಯಾವುದೇ ಅನುದಾನ ನಿಗಧಿ ಪಡಿಸಿರುವುದಿಲ್ಲ. |
| ಈ | ಹಾಗಿದ್ದಲ್ಲಿ, ಯಾವಾಗ ಹಣ ಬಿಡುಗಡೆ ಮಾಡಲಾಗುವುದು; ಹಣ ಬಿಡುಗಡೆ ಮಾಡಲು ಇರುವ ಮಾನದಂಡಗಳೇನು; | |

ಸಂಖ್ಯೆ: ಎಂಡಬ್ಲ್ಯೂಡಿ 99 ಎಲ್.ಎಂ.ಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಕೃಷ್ಣ ಭೈರೇಗೌಡ (ಬ್ಯಾಟರಾಯನಪುರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 698

ಉತ್ತರ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರತಿ ಹಳ್ಳಿಗೂ ಸ್ವಸ್ಥ್ಯ ಹಾಗೂ ಖಾತರಿಯಾಗಿ ಕುಡಿಯುವ ನೀರನ್ನು ನೀಡಲು ರೂಪಿಸಿದ ಜಲಧಾರೆ ಯೋಜನೆ ಆಯ-ವ್ಯಯದಲ್ಲಿ ಘೋಷಿಸಲಾಗಿದೆಯೇ ಹಾಗೂ ಇದಕ್ಕೆ ಸಂಪುಟ ಮತ್ತು ಹಣಕಾಸು ಇಲಾಖೆ ಒಪ್ಪಿಗೆ ನೀಡಿದೆಯೇ; | ಜಲಧಾರೆ ಯೋಜನೆಯ ಆಯ-ವ್ಯಯದಲ್ಲಿ ಘೋಷಿಸಲಾಗಿದೆ ಹಾಗೂ ಇದಕ್ಕೆ ಸಂಪುಟ ಮತ್ತು ಹಣಕಾಸು ಇಲಾಖೆಯಿಂದ ಒಪ್ಪಿಗೆ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಮೊದಲನೆ ಹಂತದಲ್ಲಿ ಯಾವ ಜಿಲ್ಲೆಗಳನ್ನು ಕೈಗೆತ್ತಿಕೊಳ್ಳಲು ಪ್ರಸ್ತಾಪಿಸಲಾಗಿತ್ತು; | ಜಲಧಾರೆ ಯೋಜನೆಯ ಮೊದಲನೇ ಹಂತದಲ್ಲಿ ವಿಜಯಪುರ, ಮಂಡ್ಯ, ರಾಯಚೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಸುಸ್ಥಿರ ಜಲ ಮೂಲಗಳ ಸಮಸ್ಯೆಯಿಂದಾಗಿ ಮೊದಲನೇ ಹಂತದಲ್ಲಿ ಈ ಜಿಲ್ಲೆಯನ್ನು ಪರಿಗಣಿಸಲು ಸಾಧ್ಯವಾಗಿರುವುದಿಲ್ಲ ಮುಂದುವರೆದು, ಧಾರವಾಡ ಜಿಲ್ಲೆಯನ್ನು ಮೊದಲನೇ ಹಂತದಲ್ಲಿ ಪರಿಗಣಿಸಲಾಗಿರುತ್ತದೆ. |
| ಇ) | ಜಿಲ್ಲಾವಾರು ಯೋಜನೆಗಳನ್ನು ತಯಾರಿಸಲಾಗಿದೆಯೇ; ಜಿಲ್ಲಾವಾರು ಯೋಜನೆಗಳ ವಿವರಗಳೇನು ಹಾಗೂ ಯೋಜನೆಗಳು ಯಾವ ಹಂತದಲ್ಲಿವೆ; | ಜಲಧಾರೆ ಯೋಜನೆಯಡಿ ಮೊದಲನೇ ಹಂತವಾಗಿ ವಿಜಯಪುರ, ಧಾರವಾಡ, ರಾಯಚೂರು ಜಿಲ್ಲೆಗಳಲ್ಲಿ ಹಾಗೂ ಮಂಡ್ಯ ಜಿಲ್ಲೆಯ 3 ತಾಲ್ಲೂಕುಗಳಲ್ಲಿ (ಪಾಂಡವಪುರ, ನಾಗಮಂಗಲ ಮತ್ತು ಕೆ.ಆರ್.ಪೇಟೆ) ಅನುಷ್ಠಾನ ಮಾಡಲು ಪರಿಗಣಿಸಲಾಗಿದೆ. ಯೋಜನೆಗಳ PSRಗಳು ತಯಾರಿಕ ಹಂತದಲ್ಲಿರುತ್ತದೆ. |
| ಈ) | ಹಳ್ಳಿಗಳಿಗೆ ಉತ್ತಮ ಮತ್ತು ಖಾತರಿಯಾಗಿ ಕುಡಿಯುವ ನೀರು ನೀಡುವ ಉದ್ದೇಶ ಸರ್ಕಾರಕ್ಕಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ಉದ್ದೇಶ ಅನುಷ್ಠಾನವಾಗಲಿದೆ? | ಇದೆ. ಕೇಂದ್ರ ಸರ್ಕಾರ ಘೋಷಿಸಿರುವ ಜಲಜೀವನ್ ಮಿಷನ್‌ನಡಿ ರಾಜ್ಯ ಸರ್ಕಾರದ ಯೋಜನೆಯಾದ ಮನೆ ಮನೆಗೆ ಗಂಗೆಯಿಂದ ಕಾರ್ಯಾತ್ಮಕ ನಳದ ನೀರು ಸಂಪರ್ಕವನ್ನು ನೀಡಿ ಶುಧ್ಧ ಕುಡಿಯುವ ನೀರನ್ನು 2023 ನೇ ಸಾಲಿನ ಅಂತ್ಯದೊಳಗೆ (31.03.2023) ಒದಗಿಸಲು ಉದ್ದೇಶಿಸಲಾಗಿದೆ. |

ಸಂ:ಗ್ರಾಕುನೀ&ನೈಇ 21 ಗ್ರಾನೀಸ(4) 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 703

ವಿಧಾನ ಸಭಾ ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ(ಜಯನಗರ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23/09/2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಎಂ.ಎಸ್.ಪಿ.ಸಿ. ಗಳು (ಮಹಿಳಾ ಪೂರಕ ಪೌಷ್ಟಿಕ ಆಹಾರ ತಯಾರಿಕಾ ಘಟಕ) ಸ್ವಾಯತ್ತ ಸಂಸ್ಥೆ ಎಂಬ ಹೆಸರಿನಲ್ಲಿ ಕೋಟ್ಯಾಂತರ ರೂಪಾಯಿಗಳಿಗೆ ಕಚ್ಚಾ ಆಹಾರ ಸಾಮಗ್ರಿ ಖರೀದಿಯಲ್ಲಿ ವ್ಯಾಪಕ ಭ್ರಷ್ಟಾಚಾರ ಎಸಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಆ. | ಬಂದಿದ್ದಲ್ಲಿ, ಭ್ರಷ್ಟಾಚಾರದ ಆಪಾದನೆ ಎದುರಿಸುತ್ತಿರುವವರ ವಿರುದ್ಧ ಕೈಗೊಂಡ ಕ್ರಮಗಳೇನು? | ಅನ್ವಯಿಸುವುದಿಲ್ಲ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 171 ಐಸಿಡಿ 2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 704

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಸೌಮ್ಯರೆಡ್ಡಿ (ಜಯನಗರ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23/09/2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ನಗರ ಜಿಲ್ಲೆತ ಎಂ.ಎಸ್.ಪಿ.ಸಿ (ಮಹಿಳಾ ಪೂರಕ ಪೌಷ್ಟಿಕ ಆಹಾರ ತಯಾರಿಕಾ ಘಟಕ) ರವರು ಸರಿಯಾದ ಸಮಯಕ್ಕೆ ಅಂಗನವಾಡಿಗಳಿಗೆ ಆಹಾರ ಸಾಮಾಗ್ರಿಗಳನ್ನು ಸರಬರಾಜು ಮಾಡುವಲ್ಲಿ ವಿಫಲವಾಗಿರುವುದು ನಿಜವೇ; ಹಾಗಿದ್ದಲ್ಲಿ ಬೃಹತ್ ಬೆಂಗಳೂರು ಮಹಾನಗರ ವ್ಯಾಪ್ತಿಗೆ ಸೇರಿರುವ ಅಂಗನವಾಡಿಗಳಿಗೆ ಮತ್ತೊಂದು ಎಂ.ಎಸ್.ಪಿ.ಸಿ.ಯನ್ನು ಪ್ರಾರಂಭ ಮಾಡುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ (ವಿವರ ಒದಗಿಸುವುದು)? | ಇಲ್ಲ,<br><br>ಬೆಂಗಳೂರು ನಗರ ಜಿಲ್ಲೆಯಲ್ಲಿರುವ ಎಂ.ಎಸ್.ಪಿ.ಸಿ. ಗಳು ಸರಿಯಾದ ಸಮಯಕ್ಕೆ ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುತ್ತಿವೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 170 ಐಸಿಡಿ 2020

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **705** |
| ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಸುರೇಶ ಬಿ.ಎಸ್. (ಹೆಬ್ಬಾಳ) |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು. |
| ಉತ್ತರಿಸಬೇಕಾದ ದಿನಾಂಕ | : | 23/09/2020 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಎಷ್ಟು ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ; | ಬೆಂಗಳೂರು ನಗರ – **2420** ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ – **1229** ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. |
| ಆ. | ಇವುಗಳಲ್ಲಿ ಸ್ವಂತ ಕಟ್ಟಡ ಹಾಗೂ ಬಾಡಿಗೆ ಕಟ್ಟಡಗಳಲ್ಲಿರುವ ಅಂಗನವಾಡಿ ಕೇಂದ್ರಗಳು ಎಷ್ಟು; | ಸ್ವಂತ ಹಾಗೂ ಬಾಡಿಗೆ ಕಟ್ಟಡಗಳಲ್ಲಿರುವ ಅಂಗನವಾಡಿ ಕೇಂದ್ರಗಳ ವಿವರ ಈ ಕೆಳಕಂಡಂತಿದೆ.<br><br>ಜಿಲ್ಲೆ / ಸ್ವಂತ ಕಟ್ಟಡ / ಬಾಡಿಗೆ ಕಟ್ಟಡ / ಇತರೆ ಕಟ್ಟಡ<br>ಬೆಂ.ನಗರ / 1018 / 690 / 712<br>ಬೆಂ.ಗ್ರಾ. / 972 / 121 / 136 |
| ಇ. | ಹೊಸದಾಗಿ ಅಂಗನವಾಡಿ ಕೇಂದ್ರಗಳನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ಇದ್ದಲ್ಲಿ, ವಿವರ ನೀಡುವುದು; | ಬೆಂಗಳೂರು ನಗರ ಜಿಲ್ಲೆಗೆ 2000 ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ 35 ಹೊಸ ಅಂಗನವಾಡಿ ಕೇಂದ್ರಗಳನ್ನು ತೆರೆಯಲು ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ. |
| ಈ | ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಹಾಗೂ ಸಹಾಯಕಿಯರ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; ಯಾವಾಗ ಹುದ್ದೆಗಳನ್ನು ಭರ್ತಿ ಮಾಡಲಾಗುವುದು? | ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳಲ್ಲಿ ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಕಂಡಂತಿದೆ.<br><br>ಹುದ್ದೆ / ಬೆಂ.ನಗರ / ಬೆಂ.ಗ್ರಾ<br>ಅಂಗನವಾಡಿ ಕಾರ್ಯಕರ್ತೆ / 45 / 17<br>ಅಂಗನವಾಡಿ ಸಹಾಯಕಿ / 169 / 36<br>ಒಟ್ಟು / 214 / 53<br><br>ಶೀಘ್ರದಲ್ಲೇ ಭರ್ತಿ ಮಾಡಿಕೊಳ್ಳಲು ಕ್ರಮವಹಿಸಲಾಗುವುದು. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 169 ಐಸಿಡಿ 2020

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 708

ಮಾನ್ಯ ಸದಸ್ಯರ ಹೆಸರು : ಶ್ರೀ ಸುರೇಶ ಬಿ.ಎಸ್. (ಹೆಬ್ಬಾಳ)

ವಿಷಯ : 'ರಿಫ್ರೆಷರ್ ಕೋರ್ಸ್‌ಗಳ ತರಬೇತಿ ನೀಡುವುದು'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19ನೇ ಸಾಲಿನ ಆಯ-ವ್ಯಯದಲ್ಲಿ ಮಂಡಿಸಿರುವಂತೆ ಪ್ರವಾಸೋದ್ಯಮ ವಲಯದ ಆತಿಥ್ಯ ಕ್ಷೇತ್ರದಲ್ಲಿ ಉದ್ಯೋಗಾವಕಾಶಗಳನ್ನು ಸೃಜಿಸಲು ಕೌಶಲ್ಯಾಭಿವೃದ್ಧಿ, ಪ್ರವಾಸಿ ಮಾರ್ಗದರ್ಶಿ ತರಬೇತಿ ಕಾರ್ಯಕ್ರಮ ಹಾಗೂ ಪ್ರವಾಸಿ ಟ್ಯಾಕ್ಸಿ ಚಾಲಕರಿಗೆ ರಿಫ್ರೆಷರ್ ಕೋರ್ಸ್‌ಗಳ ಮೂಲಕ ತರಬೇತಿ ನೀಡಲು ಉದ್ದೇಶಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಈ ಸೌಲಭ್ಯಗಳನ್ನು ಅನುಷ್ಠಾನಕ್ಕೆ ತರಲಾಗಿದೆಯೇ; | 2018-19ನೇ ಸಾಲಿನ ಕೌಶಲ್ಯಾಭಿವೃದ್ಧಿ ಪ್ರವಾಸಿ ಮಾರ್ಗದರ್ಶಿಗಳ ತರಬೇತಿ ಕಾರ್ಯಕ್ರಮ ಪ್ರಾರಂಭಿಸಿರುವುದಿಲ್ಲ. 2017-18ನೇ ಸಾಲಿನಲ್ಲಿ ಕೈಗೊಂಡಿರುವ ತರಬೇತಿ ಕಾರ್ಯಕ್ರಮವು ಇನ್ನೂ ಚಾಲ್ತಿಯಲ್ಲಿದೆ. |
| ಇ) | ಸದರಿ ಸೌಲಭ್ಯ ಈವರೆಗೂ ಅನುಷ್ಠಾನಕ್ಕೆ ತರದೆ ಇದ್ದಲ್ಲಿ, ಯಾವಾಗಿನಿಂದ ಜಾರಿಗೆ ತರಲಾಗುವುದು (ಸಂಪೂರ್ಣ ವರದಿ ನೀಡುವುದು)? | ಸರ್ಕಾರದ ದಿನಾಂಕ:15.03.2020ರ ಆದೇಶದಂತೆ ಪ್ರವಾಸಿ ಮಾರ್ಗದರ್ಶಿ ತರಬೇತಿ ಕಾರ್ಯಕ್ರಮ ಹಾಗೂ ಟ್ಯಾಕ್ಸಿ ಚಾಲಕರಿಗೆ ತರಬೇತಿ ನೀಡುವ ಸಂಬಂಧ ತರಬೇತಿ ಸಂಸ್ಥೆಗಳಾದ ಐ.ಹೆಚ್.ಎಂ, ಐ.ಐ.ಟಿ.ಟಿ.ಎಂ, ಎಫ್.ಸಿ.ಐ ಮತ್ತು ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮದೊಂದಿಗೆ ಸಭೆ ನಡೆಸಿ ಸದರಿ ತರಬೇತಿಗೆ ಸಂಬಂಧಿಸಿದಂತೆ ಪ್ರಸ್ತಾವನೆ ಸಲ್ಲಿಸಲು ಸೂಚಿಸಲಾಗಿದ್ದು, ಕೋವಿಡ್-19 ಕಾರಣದಿಂದಾಗಿ, ಸದರಿ ಕಾರ್ಯಕ್ರಮದ ಅನುಷ್ಠಾನ ವಿಳಂಬಗೊಂಡಿರುತ್ತದೆ. ಸಂಬಂಧಪಟ್ಟ ತರಬೇತಿ ಸಂಸ್ಥೆಗಳಿಂದ ಪ್ರಸ್ತಾವನೆ ಬಂದ ನಂತರ ಸದರಿ ಕಾರ್ಯಕ್ರಮಗಳನ್ನು 2020-21ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ಟಿಓಆರ್ 157 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 726
ಸದಸ್ಯರ ಹೆಸರು : ಶ್ರೀ ಪಾಟೀಲ್ ಹೆಚ್. ಕೆ (ಗದಗ)
ಉತ್ತರಿಸಬೇಕಾದ ದಿನಾಂಕ : 23-09-2020.
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2017ನೇ ಸಾಲಿನ ಗದಗ ಉತ್ಸವ ನಡೆಸಿರುವುದು ಸರ್ಕಾರದ ಗಮನಕ್ಕೆ ಬಂದಿದಿಯೇ? | ಗದಗ ನಗರದ ಜಿಲ್ಲಾ ಕ್ರೀಡಾಂಗಣದಲ್ಲಿ ದಿನಾಂಕ: 8, 9 ಮತ್ತು 10 ಡಿಸೆಂಬರ್ 2017ರಂದು ಗದಗ ಉತ್ಸವವನ್ನು ಏರ್ಪಡಿಸಿರುವುದು ಗಮನಕ್ಕೆ ಬಂದಿದೆ. |
| ಆ) | ಸದರಿ ಉತ್ಸವಕ್ಕೆ ಮಂಜೂರಾದ ಹಣವೆಷ್ಟು? ಹಾಗೂ ಬಿಡುಗಡೆಗೊಳಿಸಿದ ಹಣವೆಷ್ಟು? | 2017-18ನೇ ಸಾಲಿನ ಇಲಾಖೆಯ ಕ್ರಿಯಾ ಯೋಜನೆಯಲ್ಲಿ ಗದಗ ಉತ್ಸವ 2017ರ ಕಾರ್ಯಕ್ರಮಕ್ಕೆ ಅನುದಾನ ಕಲ್ಪಿಸಿರುವುದಿಲ್ಲ. |
| ಇ) | ಕಳೆದ ಮೂರು ವರ್ಷಗಳಿಂದ ಬಾಕಿ ಉಳಿದಿರುವ ಹಣವನ್ನು ಯಾವ ಕಾಲಮಿತಿಯೊಳಗೆ ಬಿಡುಗಡೆಗೊಳಿಸಲಿದೆ? | ಉದ್ಭವಿಸುವುದಿಲ್ಲ |

**ಕಸಂವಾ 67 ಕವಿಸ 2020**

**(ಸಿ.ಟಿ.ರವಿ)**
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 808

ಸದಸ್ಯರ ಹೆಸರು : ಶ್ರೀ ಪಾಟೀಲ್ .ಹೆಚ್.ಕೆ(ಗದಗ)

ಉತ್ತರಿಸಬೇಕಾದ ದಿನಾಂಕ : 23-09-2020.

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಹಿಂದಿನ ಸರ್ಕಾರದ ಅವಧಿಯಲ್ಲಿ ಗದಗ ಪಟ್ಟಣದಲ್ಲಿ ಪುಟ್ಟಯಜ್ಜ ಸ್ಮಾರಕ ಭವನ ನಿರ್ಮಾಣಕ್ಕೆ ಮಂಜೂರಾತಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | • ಹೌದು.<br>• ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 61 ಸ್ಕಾಪ್ರನಿ 2010, ದಿನಾಂಕ: 25.03.2011 ರ ಆದೇಶದಲ್ಲಿ ದಿವಂಗತ ಪಂಡಿತ್ ಪುಟ್ಟರಾಜ ಗವಾಯಿಯವರ ಸ್ಮಾರಕ ಭವನ ನಿರ್ಮಾಣವನ್ನು ರೂ. 5.00 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿದೆ. |
| 2 | ಸದರಿ ಸ್ಮಾರಕ ಭವನ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡಲಾಗಿದೆಯೇ; | • ಹೌದು.<br>• ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 61 ಸ್ಕಾಪ್ರನಿ 2010, ದಿನಾಂಕ: 06.12.2010 ರ ಸರ್ಕಾರಿ ಆದೇಶದಲ್ಲಿ ರೂ. 5.00 ಕೋಟಿಗಳ ಅನುದಾನವನ್ನು ಜಿಲ್ಲಾದಿಕಾರಿಗಳು, ಗದಗ್ ಜಿಲ್ಲೆ, ಗದಗ್ ಇವರಿಗೆ ಬಿಡುಗಡೆ ಮಾಡಿದೆ.ಕಟ್ಟಡದ ಮೊದಲನೇ ಹಂತದ ಕಾಮಗಾರಿ ಪೂರ್ಣಗೊಳಿಸಲಾಗಿದೆ. |
| 3 | ಯಾವ ಕಾಲಮಿತಿಯಲ್ಲಿ ಸದರಿ ಕಾಮಗಾರಿ ಪೂರ್ಣಗೊಳಿಸಲಾಗುವುದು? | • ಹೆಚ್ಚುವರಿಯಾಗಿ ಕೈಗೊಂಡ ಕೆಲಸಗಳ ತತ್ಪರಿಣಾಮವಾಗಿ ಸದರಿ ಕಾಮಗಾರಿಗೆ ಒಟ್ಟಾರೆ ರೂ. 624.42 ಲಕ್ಷ ವೆಚ್ಚ ಮಾಡಿರುತ್ತಾರೆ ಎಂದು ತಿಳಿಸಿ, ಹೆಚ್ಚುವರಿ ಕಾಮಗಾರಿ ನಿರ್ವಹಿಸಿದ ರೂ. 124.42 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಿದ್ದಾರೆ.<br>• ಸ್ಮಾರಕದ ಎರಡನೇ ಹಂತದ ಕಾಮಗಾರಿಗೆ ಹೆಚ್ಚುವರಿಯಾಗಿ ರೂ. 500.00 ಲಕ್ಷಗಳ ಅಂದಾಜು ವೆಚ್ಚಪಟ್ಟಿಯಲ್ಲಿ ಸ್ಮಾರಕಕ್ಕೆ ಬಿಡುಗಡೆಯಾದ ಅನುದಾನದ ಬಡ್ಡಿ ಮೊತ್ತ ರೂ. 370.00 ಲಕ್ಷಗಳನ್ನು ಉಪಯೋಗಿಸಿಕೊಳ್ಳಲು ಅನುಮತಿಸಲಾಗಿದ್ದು ಬಾಕಿ ರೂ. 130.00 ಲಕ್ಷಗಳ ಬೇಡಿಕೆ ಬಗ್ಗೆ ಪರಿಶೀಲಿಸಲು ಜಿಲ್ಲಾಧಿಕಾರಿ, ಗದಗ್ ಜಿಲ್ಲೆ, ಇವರಿಂದ ಕೋರಿರುವ ಮಾಹಿತಿ ಸ್ವೀಕೃತವಾದ ನಂತರ, ಅನುದಾನದ ಲಭ್ಯತೆಗನುಗುಣವಾಗಿ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುವುದು. |

ಕಸಂವಾ 239 ಕಸಧ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 809
ಸದಸ್ಯರ ಹೆಸರು : ಶ್ರೀ ಪಾಟೀಲ್ ಹೆಚ್.ಕೆ (ಗದಗ)
ಉತ್ತರಿಸಬೇಕಾದ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಅಲ್ಪಸಂಖ್ಯಾತರ ಸಮುದಾಯ ಭವನಗಳನ್ನು ನಿರ್ಮಿಸುವ ಪ್ರಸ್ತಾವನೆಗಳು ಸರ್ಕಾರದ ಮುಂದಿದೆಯೇ; | 2020-21ನೇ ಸಾಲಿನ ಆಯವ್ಯಯದಲ್ಲಿ (ಮುಸ್ಲಿಂ ಸಮುದಾಯ ಭವನ ನಿರ್ಮಿಸಲು) ಯಾವುದೇ ಅನುದಾನ ಒದಗಿಸಿರವುದಿಲ್ಲ |
| ಆ | ಕಳೆದ ಸಾಲಿನಲ್ಲಿ ಸರ್ಕಾರ ಅಲ್ಪಸಂಖ್ಯಾತರ ಸಮುದಾಯ ಭವನಗಳನ್ನು ನಿರ್ಮಿಸಿದ ಸಂಖ್ಯೆ ಎಷ್ಟು; ಇದಕ್ಕಾಗಿ ಬಿಡುಗಡೆಗೊಳಿಸಿದ ಅನುದಾನವೆಷ್ಟು; | 2019-20ನೇ ಸಾಲಿನಲ್ಲಿ ಶಾದಿಮಹಲ್/ ಸಮುದಾಯ ಭವನ ನಿರ್ಮಾಣಕ್ಕಾಗಿ ರೂ. 1500.00 ಲಕ್ಷಗಳ ಅನುದಾನವನ್ನು 65 ಸಂಸ್ಥೆಗಳಿಗೆ ಈಗಾಗಲೇ ಬಿಡುಗಡೆ ಮಾಡಲಾಗಿದೆ. |
| ಇ | ಗದಗ ಪಟ್ಟಣದಲ್ಲಿ ನಿರ್ಮಿಸಲು ಯೋಜಿಸಿದ "ಮದರ್ ಥೆರೆಸಾ" ಸಮುದಾಯ ಭವನ ನಿರ್ಮಾಣಕ್ಕೆ ಪರವಾನಿಗೆ ನೀಡಲಾಗಿದೆಯೇ; | ಗದಗ ಪಟ್ಟಣದ ಮದರ್ ಥೆರೆಸಾ ಕ್ಯಾತೋಲಿಕ್ ಅಸೋಸಿಯೇಷನ್ ವತಿಯಿಂದ ಸಮುದಾಯ ಭವನ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಪ್ರಸ್ತಾವನೆ ಪರಿಶೀಲನೆಯ ಹಂತದಲ್ಲಿದೆ. |
| ಈ | ನೀಡದೇ ಇದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; ಯಾವ ಕಾಲಮಿತಿಯೊಳಗೆ ಸರ್ಕಾರ ಈ ಕಾಮಗಾರಿಯನ್ನು ಪೂರ್ಣಗೊಳಿಸಲಿದೆ? | |

ಸಂಖ್ಯೆ: ಎಂಡಬ್ಲ್ಯೂಡಿ 103 ಎಲ್.ಎಂ.ಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 812
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗುಡಿಬಂಡೆ ತಾಲ್ಲೂಕು ಸೋಮೇನಹಳ್ಳಿ ಗ್ರಾಮ ಪಂಚಾಯತ್‌ನಲ್ಲಿ ಅವ್ಯವಹಾರವಾಗಿದ್ದ ಪ್ರಕರಣಕ್ಕೆ ಸಂಬಂಧಪಟ್ಟಂತೆ ದೂರು ದಾಖಲಾದ ಸಂದರ್ಭದಲ್ಲಿ ಗ್ರಾಮ ಪಂಚಾಯತ್ ಕಟ್ಟಡಕ್ಕೆ ಬೆಂಕಿ ಹಾಕಿ ಸಾಕ್ಷ್ಯ ನಾಶ ಮಾಡಿದ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಸರ್ಕಾರಿ ದಾಖಲೆ ನಾಶ ಮಾಡಿ ಸುಮಾರು 6 ರಿಂದ 7 ವರ್ಷಗಳು ಕಳೆದರೂ ಇದುವರೆವಿಗೂ ಆರೋಪಿಗಳನ್ನು ಬಂಧಿಸದಿರಲು ಕಾರಣಗಳೇನು; ಸದರಿಯವರನ್ನು ಬಂಧಿಸಲು ಎಷ್ಟು ವರ್ಷ ಕಾಲಾವಕಾಶ ಬೇಕು? (ಪೂರ್ಣ ವಿವರ ನೀಡುವುದು) | ಶ್ರೀ ಎ.ಆರ್. ಶ್ರೀನಿವಾಸ, ಪಂಚಾಯತಿ ಅಭಿವೃದ್ಧಿ ಅಧಿಕಾರಿ, ಸೋಮೇನಹಳ್ಳಿ ಗ್ರಾಮ ಪಂಚಾಯತಿ, ಗುಡಿಬಂಡೆ ತಾಲ್ಲೂಕು ಇವರು ಸೋಮೇನಹಳ್ಳಿ ಗ್ರಾಮ ಪಂಚಾಯತಿ ಕಛೇರಿಯಲ್ಲಿ ಬೆಂಕಿ ಅನಾಹುತ ಸಂಭವಿಸಿ, ಪಂಚಾಯತಿಯ ದಾಖಲಾತಿಗಳು ಸುಟ್ಟುಹೋಗಿದ್ದು, ಈ ಅಪಘಾತ ವಿದ್ಯುಚ್ಛಕ್ತಿ ಶಾರ್ಟ್ ಸರ್ಕ್ಯೂಟ್‌ನಿಂದಲೋ ಅಥವಾ ಯಾರೋ ದುಷ್ಕರ್ಮಿಗಳು ಬೆಂಕಿ ಇಟ್ಟಿದ್ದರಿಂದಲೋ ಸಂಭವಿಸಿದ್ದು, ಸ್ಥಳ ಪರಿಶೀಲನೆ ಮಾಡಿ ದುಷ್ಕರ್ಮಿಗಳನ್ನು ಪತ್ತೆ ಮಾಡಿ ಕಾನೂನು ರೀತ್ಯಾ ಕ್ರಮ ಜರುಗಿಸಬಕೇಂದು ದೂರು ನೀಡಿದ್ದು, ಅದರಂತೆ ಗುಡಿಬಂಡೆ ಪೋಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:228/2013 ದಿನಾಂಕ:12-12-2013 ರಂದು ದಾಖಲಾಗಿರುತ್ತದೆ. ಪೋಲೀಸ್ ಇಲಾಖೆಯಿಂದ "ಸಿ" ವರದಿ ನೀಡಿರುವ ದಾಖಲೆಗಳು ಲಭ್ಯವಿರುತ್ತದೆ.<br><br>ಜೆ.ಎಂ.ಎಫ್.ಸಿ. ನ್ಯಾಯಾಲಯ ಗುಡಿಬಂಡೆ ರವರು ಫಿರ್ಯಾದುದಾರರಾದ ಶ್ರೀ ಎ.ಆರ್. ಶ್ರೀನಿವಾಸ, ಪಂಚಾಯತಿ ಅಭಿವೃದ್ಧಿ ಅಧಿಕಾರಿ ರವರಿಗೆ ನೋಟೀಸ್ ನೀಡಿರುತ್ತಾರೆ. |

ಸಂ. ಗ್ರಾಅಪ 714 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 813
ಉತ್ತರ ದಿನಾಂಕ : 23.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಗ್ರಾಮೀಣ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಗುಂಜಳ್ಳಿ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯು 2018–19ನೇ ಸಾಲಿನ ಬಜೆಟ್ ಘೋಷಣೆಯಾಗಿದ್ದು, ಈವರೆಗೂ ಕಾಮಗಾರಿ ಪ್ರಾರಂಭಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಗುಂಜಳ್ಳಿ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯು 2018–19ನೇ ಸಾಲಿನ ಬಜೆಟ್‌ನಲ್ಲಿ ಘೋಷಣೆ ಆಗಿರುವುದಿಲ್ಲ.<br><br>ಆದಾಗ್ಯೂ ಸದರಿ ಯೋಜನೆಗೆ ದಿನಾಂಕ:15.10.2009ರಂದು ರೂ.583.00ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ದೊರೆತಿದ್ದು, ದಿನಾಂಕ:20.01.2011ರಂದು ರೂ.583.00ಲಕ್ಷಗಳಿಗೆ ತಾಂತ್ರಿಕ ಅನುಮೋದನೆ ದೊರೆತಿದ್ದು, ದಿನಾಂಕ:02.03.2012ರಂದು ರೂ.511.19ಲಕ್ಷಗಳಿಗೆ ಟೆಂಡರ್ ಅನುಮೋದಿಸಲಾಗಿ, ದಿನಾಂಕ:17.06.2012ರಂದು ಕಾಮಗಾರಿ ಪ್ರಾರಂಭವಾಗಿದ್ದು, ದಿನಾಂಕ:07.08.2015ರಂದು ಕಾಮಗಾರಿ ಪೂರ್ಣಗೊಂಡಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ (ಸಂಪೂರ್ಣ ವಿವರ ನೀಡುವುದು.); | ಸದರಿ ಕಾಮಗಾರಿಯು ಈಗಾಗಲೇ ದಿನಾಂಕ:07.08.2015ರಂದು ಪೂರ್ಣಗೊಂಡಿದ್ದು, ಸದರಿ ಯೋಜನೆಗೆ ಒಳಪಡುವ ಎಲ್ಲಾ 9 ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಮಾಡಲಾಗುತ್ತಿದೆ. ಹಾಗೂ ಯೋಜನೆಯು ಪ್ರಸ್ತುತ ವಾರ್ಷಿಕ ಕಾರ್ಯಾಚರಣೆ ಮತ್ತು ನಿರ್ವಹಣೆ (ಓ & ಎಮ್) ಹಂತದಲ್ಲಿರುತ್ತದೆ. |
| ಇ) | ಗುಂಜಳ್ಳಿ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯನ್ನು ಕಾರ್ಯಾರಂಭ ಮಾಡಲಾಗುವುದೇ; | |
| ಈ) | ಹಾಗಿದ್ದಲ್ಲಿ, ಸದರಿ ಯೋಜನೆಯನ್ನು ಯಾವಾಗ ಮುಕ್ತಾಯಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | |

ಸಂ:ಗ್ರಾಕುನೀ&ನೈಇ 22 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 817.

ಮಾನ್ಯ ಸದಸ್ಯರ ಹೆಸರು : ಶ್ರೀ ಅಖಂಡ ಶ್ರೀನಿವಾಸಮೂರ್ತಿ ಆರ್. (ಪುಲಿಕೇಶಿ ನಗರ).

ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಉತ್ತರಿಸುವ ದಿನಾಂಕ : 23-09-2020.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಉಪಕಾರ ಯೋಜನೆಯನ್ನು ಜಾರಿಗೆ ತರಲಾಗಿದೆಯೇ; | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದ "ಉಪಕಾರ್" ಯೋಜನೆಯು ನೂತನ ಯೋಜನೆಯಾಗಿದ್ದು, ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲು, ಅವಶ್ಯಕ ಮಾರ್ಗಸೂಚಿಗಳನ್ನು ವಿಷಯ ತಜ್ಞರೊಂದಿಗೆ ಚರ್ಚಿಸಿ, ಸಿದ್ಧಪಡಿಸಲಾಗುತ್ತಿದೆ. ಇದಲ್ಲದೇ, ಫಲಾನುಭವಿಗಳನ್ನು ಗುರುತಿಸಲು ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿಗಳಿಗೆ ಅಗತ್ಯ ಸೂಚನೆ ನೀಡಲಾಗಿದೆ. ಈ ಸಂಬಂಧ ನಿರ್ದೇಶಕರು, ಮಕ್ಕಳ ರಕ್ಷಣಾ ನಿರ್ದೇಶನಾಲಯ, ಇವರಿಂದ ಪ್ರಸ್ತಾವನೆ ಸ್ವೀಕೃತವಾದ ನಂತರ ಪರಿಶೀಲಿಸಿ, ಆದೇಶ ಹೊರಡಿಸುವ ಮೂಲಕ ಯೋಜನೆ ಜಾರಿಗೆ ತರಲಾಗುವುದು. |
| ಆ) | ಹಾಗಿದ್ದಲ್ಲಿ, ಇಲ್ಲಿಯವರೆಗೆ ಬಾಲ ಮಂದಿರದಿಂದ ಬಿಡುಗಡೆ ಹೊಂದುವ ಎಷ್ಟು ಜನ ಫಲಾನುಭವಿಗಳು ಈ ಯೋಜನೆಯ ಪ್ರಯೋಜನ ಪಡೆದುಕೊಂಡಿರುತ್ತಾರೆ; | |
| ಇ) | ಜಾರಿಯಾಗದಿದ್ದಲ್ಲಿ, ಯಾವಾಗ ಜಾರಿಗೆ ತರಲಾಗುವುದು? (ಸಂಪೂರ್ಣ ಮಾಹಿತಿ ಒದಗಿಸುವುದು) | |

(ಸಂಖ್ಯೆ: ಮಮಇ 162 ಮಭಾಬ 2020)

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 818

ಸದಸ್ಯರ ಹೆಸರು : ಶ್ರೀ ಅಖಂಡ ಶ್ರೀನಿವಾಸಮೂರ್ತಿ ಆರ್.(ಪುಲಿಕೇಶಿ ನಗರ)

ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸುವ ದಿನಾಂಕ : 23/09/2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಂಗನವಾಡಿ ಮಕ್ಕಳ ಔಷಧಿ ಖರೀದಿಯಲ್ಲಿ ಅಕ್ರಮ ನಡೆಯುತ್ತಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಅಂಗನವಾಡಿ ಕೇಂದ್ರದ ಮಕ್ಕಳಿಗೆ ಸರ್ಕಾರಿ ಸ್ವಾಮ್ಯದ ಕೆ.ಎ.ಪಿ.ಎಲ್ ಸಂಸ್ಥೆಯಿಂದ ಔಷಧಿ ಪೂರೈಕೆ ಮಾಡುತ್ತಿರುವುದನ್ನು ರದ್ದುಪಡಿಸಿ, ಖಾಸಗಿ ಕಂಪನಿಗಳಿಗೆ ನೀಡಿರುವುದು ನಿಜವೇ; ಹಾಗಿದ್ದಲ್ಲಿ ಯಾವ ಕಂಪನಿಗೆ ನೀಡಲಾಗಿದೆ; | ಖಾಸಗಿ ಕಂಪನಿಗಳಿಗೆ ನೀಡಿರುವುದಿಲ್ಲ |
| ಇ) | ಖಾಸಗಿ ಕಂಪನಿಗಳಿಗೆ ಔಷಧಿ ಪೂರೈಕೆ ಮಾಡಲು ಅನುಮತಿ ನೀಡಿದ್ದಲ್ಲಿ ಮಕ್ಕಳ ಕಾಳಜಿ ದೃಷಿಯಿಂದ ಮಾರಕವಲ್ಲವೇ? | ಅನ್ವಯಿಸುವುದಿಲ್ಲ |
| ಈ) | ಈ ರೀತಿ ಖಾಸಗಿ ಕಂಪನಿಗಳಿಗೆ ನೀಡುತ್ತಿರುವ ಸರ್ಕಾರದ ಔಚಿತ್ಯವೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಅನ್ವಯಿಸುವುದಿಲ್ಲ |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಸಂಖ್ಯೆ :ಮಮಇ 163 ಐಸಿಡಿ 2020



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 825 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 23.09.2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಂತಾಮಣಿ ತಾಲ್ಲೂಕಿನ ಅಂಬಾಜಿದುರ್ಗ ಹೋಬಳಿ, ಸೊರಪಲ್ಲಿ ಗ್ರಾಮದ ಸರ್ವೆ ನಂ.39 ರಲ್ಲಿ 10 ಎಕರೆ ಜಮೀನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಮಂಜೂರು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಚಿಂತಾಮಣಿ ತಾಲ್ಲೂಕಿನ ಅಂಬಾಜಿದುರ್ಗ ಹೋಬಳಿ, ಸೊರಪಲ್ಲಿ ಗ್ರಾಮದ ಸರ್ವೆ ನಂ.39 ರಲ್ಲಿ 10 ಎಕರೆ ಜಮೀನನ್ನು 1996ನೇ ಸಾಲಿನಲ್ಲಿ ರೂ.72,307/- ಗಳನ್ನು ಪಾವತಿಸಿ ಖರೀದಿಸಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಈ ತನಕ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಕೈಗೊಂಡಿರುವ ಕ್ರಮಗಳೇನು;(ವಿವರ ನೀಡುವುದು) | 2011-12ನೇ ಸಾಲಿನ ನೇಕಾರರ ವಿಶೇಷ ಪ್ಯಾಕೇಜ್ ವಿಶೇಷ ಘಟಕ ಯೋಜನೆ ಅನುದಾನದಡಿ ರೂ.53.00 ಲಕ್ಷ ವೆಚ್ಚದಲ್ಲಿ ಒಂದು ಸಾಮೂಹಿಕ ನೇಯ್ಗೆ ಕೇಂದ್ರ ಕಟ್ಟಡ ಹಾಗೂ ಜಮೀನಿನ ಸುತ್ತಲೂ ತಂತಿ ಬೇಲಿ ಅಳವಡಿಸುವ ಕಾರ್ಯವನ್ನು ಮೆ॥ ಕೆ.ಆರ್.ಐ.ಡಿ.ಎಲ್ ಚಿಕ್ಕಬಳ್ಳಾಪುರ ಇವರಿಗೆ ಕಾಮಗಾರಿಯನ್ನು ವಹಿಸಲಾಗಿದೆ. |
| ಇ) | ಈವರೆಗೆ ಅಲ್ಲಿನ ಕಾಮಗಾರಿಗೆ ಬಿಡುಗಡೆ ಮಾಡಿದ ಅನುದಾನ ಮತ್ತು ಖರ್ಚು ಮಾಡಿದ ಮೊತ್ತವೆಷ್ಟು?(ಪೂರ್ಣ ವಿವರ ನೀಡುವುದು) | ಸದರಿ ಜಮೀನಿನಲ್ಲಿ ಒಂದು ಸಾಮೂಹಿಕ ನೇಯ್ಗೆ ಕೇಂದ್ರ ಕಟ್ಟಡ ಹಾಗೂ ಜಮೀನಿನ ಸುತ್ತಲೂ ತಂತಿ ಬೇಲಿಯನ್ನು ಅಳವಡಿಸುವ ಕಾರ್ಯವನ್ನು ರೂ.53.00 ಲಕ್ಷಗಳ ವೆಚ್ಚದಲ್ಲಿ ಕಾಮಗಾರಿಯನ್ನು ಕೈಗೊಳ್ಳಲು ಮೇ॥ ಕೆ.ಆರ್.ಐ.ಡಿ.ಎಲ್ ಚಿಕ್ಕಬಳ್ಳಾಪುರ ಇವರಿಗೆ ಆದೇಶ ನೀಡಲಾಗಿದ್ದು, ಇದುವರೆಗೆ 39.75 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಪ್ರಸ್ತುತ ಸಾಮೂಹಿಕ ನೇಯ್ಗೆ ಕೇಂದ್ರ ಕಟ್ಟಡದ ನಿರ್ಮಾಣ ಕಾರ್ಯವು ಸಂಪೂರ್ಣಗೊಂಡಿದ್ದು, ಉಳಿದಂತೆ ತಂತಿ ಬೇಲಿ ಅಳವಡಿಸುವ ಕಾರ್ಯವು ಇನ್ನೂ ಪೂರ್ಣಗೊಂಡಿರುವುದಿಲ್ಲ. |

ಸಂಖ್ಯೆ: CI 211 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 907
ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)
ಉತ್ತರಿಸಬೇಕಾದ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಿತ್ತೂರು ವಿಧಾನಸಭಾ ಕ್ಷೇತ್ರದ ಅಲ್ಪಸಂಖ್ಯಾತರ ಕಾಲೋನಿಗಳ ಅಭಿವೃದ್ಧಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆ ಸಲ್ಲಿಸಿರುವುದು ಯಾವ ಹಂತದಲ್ಲಿದೆ; | ಮಾನ್ಯ ಮುಖ್ಯ ಮಂತ್ರಿಗಳ ಅಲ್ಪಸಂಖ್ಯಾತರ ಅಭಿವೃದ್ಧಿ ಯೋಜನೆಯಡಿ ಕಿತ್ತೂರು ವಿಧಾನ ಸಭಾ ಕ್ಷೇತ್ರಕ್ಕೆ ಈ ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲಾಗಿದ್ದು, ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿರುತ್ತದೆ. (ಕೆಳಗಿನ ಕೋಷ್ಟಕ ನೋಡಿ) 2020-21ನೇ ಸಾಲಿನಲ್ಲಿ ಕಿತ್ತೂರು ವಿಧಾನ ಸಭಾ ಕ್ಷೇತ್ರದ ಅಲ್ಪಸಂಖ್ಯಾತರ ಕಾಲೋನಿ ಅಭಿವೃದ್ಧಿಗಾಗಿ ಯಾವುದೇ ಪ್ರಸ್ತಾವನೆ ಸ್ವೀಕರಿಸಿರುವುದಿಲ್ಲ. |
| ಆ | ಸದರಿ ಕಾಲೋನಿಗಳ ಅಭಿವೃದ್ಧಿಗೆ ಅನುದಾನ ಯಾವ ಕಾಲಮಿತಿಯಲ್ಲಿ ಬಿಡುಗಡೆ ಮಾಡಲಾಗುವುದು? | 2020-21ನೇ ಸಾಲಿನಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಅಭಿವೃದ್ಧಿ ಯೋಜನೆಯಡಿ ಯಾವುದೇ ಅನುದಾನ ನಿಗಧಿ ಪಡಿಸಿರುವುದಿಲ್ಲ. |

| ಕ್ರಮ ಸಂಖ್ಯೆ | ವರ್ಷ | ಬಿಡುಗಡೆ ಮಾಡಿದ ಅನುದಾನ (ರೂ.ಲಕ್ಷಗಳಲ್ಲಿ) | ಬಿಡುಗಡೆ ಮಾಡಿದ ದಿನಾಂಕ |
|---|---|---|---|
| 1 | 2017-18 | 50.00 | 23.08.2017 |
| 2 | 2017-18 | 100.00 | 05.03.2018 |
| 3 | 2018-19 | 25.00 | 05.11.2018 |
| | ಒಟ್ಟು | 175.00 | |

ಸಂಖ್ಯೆ: ಎಂಡಬ್ಲ್ಯೂಡಿ 102 ಎಲ್.ಎಂ.ಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 908 |
| ಸದಸ್ಯರ ಹೆಸರು | : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ |
| ಉತ್ತರಿಸುವ ದಿನಾಂಕ | : 23.09.2020 |
| ಉತ್ತರಿಸುವವರು | : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರ ಇಲಾಖಾ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಕಿತ್ತೂರು 08 ವರ್ಷಗಳ ಹಿಂದೆಯೇ ತಾಲ್ಲೂಕೆಂದು ರಚನೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ಕಿತ್ತೂರು ತಾಲ್ಲೂಕು ಕೇಂದ್ರದಲ್ಲಿ "ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ ಸ್ಥಾಪನೆಯ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಕಿತ್ತೂರು ತಾಲ್ಲೂಕಿನಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯನ್ನು ಸೃಜಿಸಲು ಕೇಂದ್ರ ಸರ್ಕಾರದ ಅನುಮೋದನೆಯ ಅಗತ್ಯವಿದ್ದು, ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. |
| ಇ) | ಯಾವ ಕಾಲಮಿತಿಯಲ್ಲಿ ಈ ಕಛೇರಿ ಆರಂಭಿಸಲಾಗುವುದು; (ವಿಳಂಬಕ್ಕೆ ಕಾರಣವೇನು) | ಕೇಂದ್ರ ಸರ್ಕಾರದ ಮಂಜೂರಾತಿ ದೊರೆತ ಕೂಡಲೇ ಕಿತ್ತೂರು ತಾಲ್ಲೂಕಿನಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯನ್ನು ಸ್ಥಾಪಿಸಲು ಕ್ರಮವಹಿಸಲಾಗುವುದು. |
| ಈ) | ಕಛೇರಿ ಆರಂಭಿಸಲು ವಿಳಂಬವಾಗುತ್ತಿರುವುದಕ್ಕೆ ಕಾರಣವೇನು? | |

ಸಂ. ಮಮಇ 244 ಎಸ್‌ಜೆಡಿ 2020

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖಾ ಸಚಿವರು.

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ರಾಮಚಂದ್ರ ಎಸ್.ವಿ. (ಜಗಳೂರು)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 910

ಉತ್ತರ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಪ್ರದೇಶದಲ್ಲಿ ನಿರ್ಮಾಣಗೊಳ್ಳುವ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಗ್ರಾಮ ಪಂಚಾಯಿತಿಗೆ ಹಸ್ತಾಂತರಗೊಳಿಸಿದ ಕಾರಣ ಸಣ್ಣ ಪುಟ್ಟ ಬಿಡಿ ಭಾಗಗಳ ತೊಂದರೆಯಿಂದ ತಿಂಗಳುಗಟ್ಟಲೆ ದುರಸ್ತಿ ಕಾರ್ಯ ವಿಳಂಬಗೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಬಿಡಿಭಾಗಗಳ ನಿರ್ವಹಣೆಗಾಗಿ ಪ್ರತ್ಯೇಕ ಲೆಕ್ಕ ಶೀರ್ಷಿಕೆಯಡಿ ಕನಿಷ್ಠ ಅನುದಾನ ನಿಗಧಿಗೊಳಿಸಲಾಗುವುದೇ; | ಸಣ್ಣ ಪುಟ್ಟ ಬಿಡಿ ಭಾಗಗಳ ನಿರ್ವಹಣೆಗಾಗಿ ಟಾಸ್ಕ್‌ಫೋರ್ಸ್ ಅನುದಾನ, ಅಧ್ಯಕ್ಷರ ವಿವೇಚನಾ ಅನುದಾನ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುದಾನದಡಿ ಆದ್ಯತೆ ಮೇರೆಗೆ ಘಟಕಗಳ ದುರಸ್ಥಿ ಕಾರ್ಯಕ್ಕೆ ಅನುದಾನ ನೀಡಲಾಗುವುದು. ಗ್ರಾಮ ಪಂಚಾಯಿತಿಗಳು 15ನೇ ಹಣಕಾಸಿನ ಆಯೋಗದಲ್ಲಿ ಲಭ್ಯವಿರುವ ಅನುದಾನ ಅಥವಾ ಗ್ರಾಮ ಪಂಚಾಯಿತಿ ಅನುದಾನವನ್ನು ಸಹ ಬಳಸಬಹುದಾಗಿರುತ್ತದೆ ಹಾಗೂ ಗ್ರಾ.ಕು.ನೀ & ನೈ ಇಲಾಖೆಯಿಂದ ಗ್ರಾಮ ಮಂಚಾಯಿತಿಗೆ ಹಸ್ತಾಂತರಿಸಲಾದ ಶುದ್ಧ ಕುಡಿಯುವ ನೀರಿನ ಘಟಕಗಳ ನಿರ್ವಹಣೆಗಾಗಿ ಪ್ರತಿ ಘಟಕಕ್ಕೆ ತಿಂಗಳಿಗೆ ರೂ.3,000.00 ಗಳಂತೆ ಅನುದಾನವನ್ನು ಕೋರಿಕೆಯಂತೆ ಬಿಡುಗಡೆ ಮಾಡಲಾಗುವುದು. |
| ಇ) | ಜಗಳೂರು ವಿಧಾನಸಭಾ ಕ್ಷೇತ್ರದಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಲು ಎಷ್ಟು ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. | ದಾವಣಗೆರೆ ಜಿಲ್ಲೆಯ ಜಗಳೂರು ವಿಧಾನ ಸಭಾ ಕ್ಷೇತ್ರದಲ್ಲಿ ಈವರಗೆ ಒಟ್ಟು 120 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ವಿವಿಧ ಇಲಾಖೆಗಳಿಂದ ಸ್ಥಾಪಿಸಲಾಗಿದೆ. ಇವುಗಳಿಗೆ ರೂ.697.04 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. |

ಸಂ:ಗ್ರಾಕುನೀ&ನೈಇ 24 ಗ್ರಾನೀಸ(4) 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 911 |
| ಸದಸ್ಯರ ಹೆಸರು | ಶ್ರೀ ಕುಮಾರಸ್ವಾಮಿ ಎಂ.ಪಿ (ಮೂಡಿಗೆರೆ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಮೂಡಿಗೆರೆ ವಿಧಾನಸಭಾ ಕ್ಷೇತ್ರದಲ್ಲಿ ಅತಿಯಾದ ಮಳೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ರಸ್ತೆಗಳು, ಸೇತುವೆಗಳು ನಷ್ಟವಾಗಿದೆ ಎಂದು ಸರ್ಕಾರದ ಗಮನಕ್ಕೆ ಬಂದಿದೆ; | ಹೌದು.<br>ಮೂಡಿಗೆರೆ ವಿಧಾನಸಭಾ ಕ್ಷೇತ್ರದಲ್ಲಿ ಅತಿಯಾದ ಮಳೆಯಿಂದ ಹಾಳಾದ ರಸ್ತೆ ಮತ್ತು ಸೇತುವೆಗಳ ವಿವರಗಳು ಕೆಳಕಂಡಂತಿವೆ |

| ಕ್ರ.ಸಂ. | ತಾಲ್ಲೂಕು | ರಸ್ತೆಗಳು | | | ಸೇತುವೆಗಳು | |
|---|---|---|---|---|---|---|
| | | ಸಂಖ್ಯೆ | ಕಿ.ಮೀ. | ಅಂದಾಜು ನಷ್ಟ (ರೂ. ಲಕ್ಷಗಳಲ್ಲಿ) | ಸಂಖ್ಯೆ | ಅಂದಾಜು ನಷ್ಟ (ರೂ. ಲಕ್ಷಗಳಲ್ಲಿ) |
| 01 | ಚಿಕ್ಕಮಗಳೂರು (ಮೂಡಿಗೆರೆ ವಿಧಾನಸಭಾ ಕ್ಷೇತ್ರ) | 93 | 82.90 | 817.50 | 8 | 75.00 |
| 02 | ಮೂಡಿಗೆರೆ (ಮೂಡಿಗೆರೆ ವಿಧಾನಸಭಾ ಕ್ಷೇತ್ರ) | 302 | 618.99 | 2100.00 | 42 | 811.00 |
| | ಒಟ್ಟು | **395** | **701.89** | **2917.50** | **50** | **886.00** |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಆ. | ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಮೂಡಿಗೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮಳೆಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆ ಕಾಮಗಾರಿಗಳನ್ನು ಮೂರು ಸಂಸ್ಥೆಗಳ ಮೂಲಕ ಅನುಷ್ಠಾನ ಮಾಡಲಾಗುತ್ತಿದ್ದು, ವಿವರಗಳು ಕೆಳಕಂಡಂತಿವೆ: |
| ಇ. | ಸದರಿ ರಸ್ತೆಗಳ ದುರಸ್ಥಿಗಾಗಿ ಯಾವಾಗ ಕ್ರಮ ಕೈಗೊಳ್ಳಲಾಗುವುದು; | |

| ಅನುಷ್ಠಾನ ಸಂಸ್ಥೆ | ಪೂರ್ಣಗೊಂಡ ಕಾಮಗಾರಿಗಳ ಸಂಖ್ಯೆ | ಪ್ರಗತಿಯಲ್ಲಿರುವ ಕಾಮಗಾರಿಗಳ ಸಂಖ್ಯೆ | ಒಟು ಕಾಮಗಾರಿಗಳ ಸಂಖ್ಯೆ | ಅನುದಾನ ಬಿಡುಗಡೆ (ರೂ. ಲಕ್ಷಗಳಲ್ಲಿ) |
|---|---|---|---|---|
| ಪಿಆರ್‌ಇಡಿ | 213 | 208 | 426 | 481.25 |
| ಕೆಆರ್‌ಆರ್‌ಡಿಎ | 6 | 2 | 8 | 635.00 |
| ಕೆಆರ್‌ಐಡಿಎಲ್ | 20 | 1 | 21 | 415.00 |
| ಒಟ್ಟು | **239** | **211** | **455** | **1531.25** |

ಕಡತ ಸಂಖ್ಯೆ: ಗ್ರಾಅಪಅಧಿ07/14:ಆರ್‌ಆರ್‌ಸಿ:2020

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 912

ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕೋವಿಡ್-19 ಸಂಕಷ್ಟದಲ್ಲಿ ಟ್ಯಾಕ್ಸಿ ಡ್ರೈವರ್, ಆಟೋ ಡ್ರೈವರ್‌ಗಳಿಗೆ ಸಹಾಯಧನಕ್ಕಾಗಿ ಘೋಷಿಸಿದ ರೂ.5000/- ಗಳನ್ನು ಇಲ್ಲಿವರೆಗೆ ಎಷ್ಟು ಜನರ ಖಾತೆಗೆ ಜಮಾ ಮಾಡಲಾಗಿದೆ? | ರಾಜ್ಯದಲ್ಲಿ ಕೋವಿಡ್-19 ಲಾಕ್‌ಡೌನ್ ಸಂಕಷ್ಟದಲ್ಲಿ ಟ್ಯಾಕ್ಸಿ ಡ್ರೈವರ್ ಮತ್ತು ಆಟೋ ಡ್ರೈವರ್‌ಗಳಿಗೆ ಸಹಾಯಧನವಾಗಿ ಘೋಷಿಸಿದ ರೂ.**5000/-** ಗಳನ್ನು ಇಲ್ಲಿಯವರೆಗೆ **2,15,155** ಫಲಾನುಭವಿಗಳ ಖಾತೆಗೆ ಜಮಾ ಮಾಡಲಾಗಿದೆ. |
| (ಆ) | ರಾಜ್ಯದಲ್ಲಿ ಸಹಾಯ ಧನಕ್ಕಾಗಿ ಎಷ್ಟು ಜನ ಅರ್ಜಿಯನ್ನು ಸಲ್ಲಿಸಿರುತ್ತಾರೆ, ಇದರಲ್ಲಿ ಜಮಖಂಡಿ ಮತ ಕ್ಷೇತ್ರದಲ್ಲಿ ಎಷ್ಟು ಜನರಿಗೆ ಜಮಾ ಮಾಡಲಾಗಿದೆ, ಎಷ್ಟು ಬಾಕಿ ಇದೆ? | ರಾಜ್ಯದಲ್ಲಿ ಪರಿಹಾರ ಧನವನ್ನು ಕೋರಿ ಸೇವಾಸಿಂಧು ವೆಬ್ ಪೋರ್ಟಲ್ ಮೂಲಕ **2,45,844** ಅರ್ಜಿಗಳು ಸ್ವೀಕೃತವಾಗಿರುತ್ತವೆ.<br>ಬಾಗಲಕೋಟೆ ಜಿಲ್ಲೆಯ ಜಮಖಂಡಿ ಮತ ಕ್ಷೇತ್ರದಲ್ಲಿ ಪರಿಹಾರ ಧನವನ್ನು ಕೋರಿ ಒಟ್ಟು **326** ಫಲಾನುಭವಿಗಳ ಅರ್ಜಿಗಳು ಸ್ವೀಕೃತವಾಗಿದ್ದು, ಅದರಲ್ಲಿ **287** ಫಲಾನುಭವಿಗಳ ಅರ್ಜಿಗಳಿಗೆ ರೂ.**5000/-**ಗಳಂತೆ ಖಾತೆಗೆ ಜಮಾ ಮಾಡಲಾಗಿದೆ ಹಾಗೂ **39** ಪರಿಹಾರ ಧನ ಕೋರಿ ಸಲ್ಲಿಸಿರುವ ಅರ್ಜಿಗಳು ಬಾಕಿ ಇದ್ದು ಕಾರ್ಯಗತಿಯಲ್ಲಿರುತ್ತವೆ. |
| (ಇ) | ಸಹಾಯ ಧನಕ್ಕೆ ಚಾಲಕರಿಂದ ಆನ್‌ಲೈನ್ ಮೂಲಕ ಅರ್ಜಿ ಆಹ್ವಾನಿಸಲಾಗಿದ್ದು, ತಾಂತ್ರಿಕ ದೋಷದ ಹಿನ್ನೆಲೆಯಲ್ಲಿ ಅರ್ಜಿಗಳು ಸ್ವೀಕೃತಗೊಳ್ಳದೇ ಸರ್ಕಾರದ ಸಹಾಯ ಧನವನ್ನು ಪಡೆಯಲಾಗದ ಟ್ಯಾಕ್ಸಿ ಡ್ರೈವರ್, ಆಟೋ ಡ್ರೈವರ್‌ಗಳಿಗೆ ಪರ್ಯಾಯ ವ್ಯವಸ್ಥೆ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಕೋವಿಡ್-19 ಲಾಕ್‌ಡೌನ್ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು ತಮ್ಮ ಆದಾಯವನ್ನು ಕಳೆದು ಕೊಂಡಿರುವುದರಿಂದ, ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಒಮ್ಮೆ ರೂ.5,000/-ಗಳ ಪರಿಹಾರ ಧನವನ್ನು ಘೋಷಿಸಲಾಗಿದ್ದು, ಈ ಸಂಬಂಧವಾಗಿ ಸೇವಾಸಿಂಧು ವೆಬ್ ಪೋರ್ಟಲ್ ಮೂಲಕ ಫಲಾನುಭವಿಗಳ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ:22-05-2020 ರಿಂದ ವ್ಯವಸ್ಥೆಯನ್ನು ಮಾಡಲಾಗಿದ್ದು, ದಿನಾಂಕ:31-07-2020 ರವರೆಗೆ ಅರ್ಜಿ ಸಲ್ಲಿಸಲು ಸುದೀರ್ಘ ಕಾಲಾವಕಾಶ ನೀಡಲಾಗಿರುತ್ತದೆ. ಆದುದರಿಂದ, ಆಟೋರಿಕ್ಷಾ ಮತ್ತು ಟ್ಯಾಕ್ಸಿ ಡ್ರೈವರ್‌ಗಳಿಗೆ ಪರಿಹಾರ ನೀಡುವ ಬಗ್ಗೆ ಯಾವುದೇ ಪರ್ಯಾಯ ವ್ಯವಸ್ಥೆ ಪರಿಶೀಲನೆಯಲ್ಲಿರುವುದಿಲ್ಲ. |

ಟಿಡಿ 67 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 914

ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮುಖಂಡಿ)

ಉತ್ತರಿಸುವವರು: : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸುವ ದಿನಾಂಕ : 23/09/2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಂಗನವಾಡಿ ಮಕ್ಕಳ ಔಷಧಿ ಖರೀದಿಯಲ್ಲಿ ಅಕ್ರಮ ನಡೆಯುತ್ತಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಅಂಗನವಾಡಿ ಕೇಂದ್ರದ ಮಕ್ಕಳಿಗೆ ಸರ್ಕಾರಿ ಸ್ವಾಮ್ಯದ ಕೆ.ಎ.ಪಿ.ಎಲ್ ಸಂಸ್ಥೆಯಿಂದ ಔಷಧಿ ಪೂರೈಕೆ ಮಾಡುತ್ತಿರುವುದನ್ನು ರದ್ದುಪಡಿಸಿ ಖಾಸಗಿ ಕಂಪನಿಯವರಿಗೆ ನೀಡಿರುವುದು ನಿಜವೇ; ಖಾಸಗಿ ಕಂಪನಿಯವರಿಗೆ ನೀಡಿದ್ದಲ್ಲಿ ಯಾವ ಕಂಪನಿಗೆ ನೀಡಲಾಗಿದೆ; | ಖಾಸಗಿ ಕಂಪನಿಗಳಿಗೆ ನೀಡಿರುವುದಿಲ್ಲ |
| ಇ) | ಖಾಸಗಿ ಕಂಪನಿಗಳಿಗೆ ಔಷಧಿ ಪೂರೈಕೆ ಮಾಡಲು ಅನುಮತಿ ನೀಡಿದ್ದಲ್ಲಿ ಮಕ್ಕಳ ಕಾಳಜಿ ದೃಷಿಯಿಂದ ಮಾರಕವಲ್ಲವೇ; | ಅನ್ವಯಿಸುವುದಿಲ್ಲ |
| ಈ) | ಈ ರೀತಿ ಖಾಸ ಕಂಪನಿಗಳಿಗೆ ನೀಡುತ್ತಿರುವ ಸರ್ಕಾರದ ಔಚಿತ್ಯವೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಅನ್ವಯಿಸುವುದಿಲ್ಲ |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಸಂಖ್ಯೆ :ಮಮಇ 164 ಐಸಿಡಿ 2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 915

ಸದಸ್ಯರ ಹೆಸರು : ಶ್ರೀ ಪಾಟೀಲ್ ಎಂ.ವೈ (ಅಫ್ಜಲ್‌ಪುರ್)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಅಫಜಲಪೂರ ತಾಲ್ಲೂಕಿನ ದೇವಲ ಗಾಣಗಾಪುರ ಹಾಗೂ ಕರಜಗಿ ಗ್ರಾಮವು ಬಹುದೊಡ್ಡ ಗ್ರಾಮಗಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ. | ದೇವಲ ಗಾಣಗಾಪುರ ಕ್ಷೇತ್ರವು ಯಾತ್ರಾ ಸ್ಥಳವಾಗಿದ್ದು, ಶ್ರೀದತ್ತ ಮಹಾರಾಜರ ದರ್ಶನಕ್ಕಾಗಿ ಹೊರ ರಾಜ್ಯಗಳಿಂದ ಪ್ರತಿ ಸಾವಿರಾರು ಭಕ್ತರು ಆಗಮಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ. | ಹಾಗಿದ್ದಲ್ಲಿ, ಜನರಿಗೆ ಅನುಕೂಲವಾಗುವಂತೆ ಹೊಸ ಬಸ್ ನಿಲ್ದಾಣ ಮತ್ತು ಮಿನಿ ಬಸ್ ಡಿಪೋವನ್ನು ಯಾವಾಗ ಮಂಜೂರು ಮಾಡಲಾಗುವುದು; | ದೇವಲ ಗಾಣಗಾಪುರದಲ್ಲಿ ಸುಮಾರು ರೂ.1.70 ಕೋಟಿ ವೆಚ್ಚದಲ್ಲಿ ಈಗಾಗಲೇ ಹೊಸ ಬಸ್ ನಿಲ್ದಾಣವನ್ನು ನಿರ್ಮಿಸಿ, ದಿನಾಂಕ: 25.07.2015ರಂದು ಉದ್ಘಾಟನೆಗೊಂಡು, ಸಾರ್ವಜನಿಕ ಸೇವೆಗೆ ಮುಕ್ತಪಡಿಸಲಾಗಿದೆ ಹಾಗೂ ಮಿನಿ ಬಸ್ ಡಿಪೋ ನಿರ್ಮಾಣಕ್ಕಾಗಿ ಹೆಚ್ಚುವರಿ ನಿವೇಶನ ಹಂಚಿಕೆ ಮಾಡುವಂತೆ ತಾಲ್ಲೂಕು ದಂಡಾಧಿಕಾರಿಗಳಿಗೆ ಪ್ರಸ್ತಾವನೆ ಸಲಿಸಿದ್ದು, ನಿವೇಶನ ಹಂಚಿಕೆ ನಂತರ ಮಿನಿ ಬಸ್ ಡಿಪೋ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗುತ್ತದೆ. |
| ಈ. | ಅಫಜಲಪೂರ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿನ ಜನರಿಗೆ ಅನುಕೂಲವಾಗುವಂತೆ ಯಾವಾಗ ಬಸ್ ನಿಲ್ದಾಣವನ್ನು ಮಂಜೂರು ಮಾಡಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದು? (ಮಾಹಿತಿ ನೀಡುವುದು) | ಕರಜಗಿ ಗ್ರಾಮದಲ್ಲಿ ಈಗಾಗಲೇ ಜಿಲ್ಲಾ ಪಂಚಾಯತ್ ವತಿಯಿಂದ ಬಸ್ ನಿಲ್ದಾಣ ನಿರ್ಮಿಸಿ ಸಂಸ್ಥೆಗೆ ಹಸ್ತಾಂತರಿಸಲಾಗಿದೆ. ಪ್ರಸ್ತುತ ಸದರಿ ಬಸ್ ನಿಲ್ದಾಣದಿಂದ 54 ಸಾರಿಗೆ ಸರತಿಗಳು ಕಾರ್ಯಾಚರಣೆಯಲ್ಲಿರುತ್ತವೆ. ಆದ್ದರಿಂದ, ಸದ್ಯಕ್ಕೆ ಮತ್ತೊಂದು ಹೊಸ ಬಸ್ ನಿಲ್ದಾಣ ನಿರ್ಮಿಸುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ: ಟಿಡಿ 147 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಪಾಟೀಲ್ ಎಂ. ವೈ. (ಅಫ್ಜಲ್‌ಪುರ್)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 916
ಉತ್ತರ ದಿನಾಂಕ : 23.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಅಫಜಲಪೂರ ತಾಲೂಕಿನಲ್ಲಿ ದೇವಲಗಾಣಗಾಪೂರ ಗ್ರಾಮಕ್ಕೆ ಕುಡಿಯುವ ನೀರಿನ ಅಭಾವವಿದ್ದು ಜಲಮಂಡಲದಿಂದ ಸಮರ್ಪಕವಾಗಿ ನೀರು ದೊರಕದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಅಫಜಲಪೂರ ತಾಲೂಕಿನಲ್ಲಿ ದೇವಲಗಾಣಗಾಪೂರ ಗ್ರಾಮಕ್ಕೆ ದೇವಲಗಣಗಾಪುರ ಮತ್ತು ಇತರೆ 4 ಗ್ರಾಮಗಳ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಯಿಂದ ಹಾಗೂ 1 SVS (Single Village Scheme) ಯೋಜನೆಯಿಂದ ಕುಡಿಯುವ ನೀರನ್ನು ಒದಗಿಸಲಾಗುತ್ತಿದ್ದು, ಕುಡಿಯುವ ನೀರಿನ ಅಭಾವ ಕಂಡುಬಂದಿರುವುದಿಲ್ಲ. |
| ಆ. | ಕುಡಿಯುವ ನೀರಿಗಾಗಿ ಮತ್ತು ಬೆಳೆಗಳಿಗೆ ಭೀಮಾ ನದಿಗೆ ಬ್ಯಾರೇಜನ್ನು ನಿರ್ಮಿಸಿದ್ದು ಈ ಯೋಜನೆಯು ಕಳಪೆ ಮಟ್ಟದಾಗಿದ್ದರಿಂದ ನೀರು ಸೋರಿಕೆಯಾಗಿ ಜನರಿಗೆ ಕುಡಿಯುವ ನೀರು ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಅಫಜಲೂರ ತಾಲ್ಲೂಕಿನ ದೇವಲ ಗಾಣಗಾಪೂರ ಗ್ರಾಮದ ಹತ್ತಿರ ಭೀಮಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್‌ನ್ನು ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು 2009ನೇ ಸಾಲಿನಲ್ಲಿ ನಿರ್ಮಿಸಲಾಗಿರುತ್ತದೆ.<br><br>ಈ ಯೋಜನೆಯಿಂದ ಬ್ಯಾರೇಜ್‌ನ ಹತ್ತಿರದ ಗ್ರಾಮಗಳಿಗೆ ಕುಡಿಯುವ ನೀರನ್ನು ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಿಂದ ಪೂರೈಸಲಾಗುತ್ತಿದೆ. ಪ್ರತಿ ವರ್ಷ ಗೇಟ್‌ಗಳನ್ನು ಅಳವಡಿಸಿ 22 ಕಿ.ಮೀ.ವರೆಗೆ ನೀರನ್ನು ನಿಲ್ಲಿಸಲಾಗುತ್ತಿದೆ. ಇದರಿಂದ ಬ್ಯಾರೇಜ್‌ನ ಎಡ ಭಾಗದಲ್ಲಿ ಅಫಜಪೂರ ತಾಲ್ಲೂಕಿನ ಹಾಗೂ ಬಲಭಾಗದಲ್ಲಿ ಜೇವರಗಿ ತಾಲ್ಲೂಕಿನ ಗ್ರಾಮಗಳಿಗೆ ಕುಡಿಯುವ ನೀರಿಗಾಗಿ ಹಾಗೂ ರೈತರ ಬೆಳೆಗಳಿಗೆ ಅನುಕೂಲ ಮಾಡಿಕೊಡಲಾಗುತ್ತಿದೆ.<br><br>ಆದರೆ ಬ್ಯಾರೇಜ್‌ನ ಕೆಳಭಾಗದ ರೈತರು ನೀರಾವರಿ ಉದ್ದೇಶದಿಂದ ಬ್ಯಾರೇಜ್‌ನ ಕೆಳಭಾಗದಲ್ಲಿ ನೀರು ಹರಿದು ಹೋಗುವಂತೆ ಮಾಡುತ್ತಿರುವುದರಿಂದ ನೀರು ಪೋಲಾಗಿ ಕುಡಿಯುವ ನೀರು ಸಿಗದಂತೆ ಆಗುತ್ತಿರುವುದನ್ನು ಗಮನಿಸಲಾಗಿದೆ. |
| ಇ. | ಹಾಗಿದ್ದಲ್ಲಿ ಈ ಬ್ಯಾರೇಜಿಗೆ ಪೂರ್ಣ ಪ್ರಮಾಣದ ನೀರು ನಿಲ್ಲಿಸಲು ಯಾವಾಗ ಹೈಡ್ರೋಲಿಕ್ ಗೇಟ್‌ಗಳನ್ನು ಅಳವಡಿಸಲಾಗುವುದು ಹಾಗೂ ಕಳೆಪೆ ಕಾಮಗಾರಿ ನಿರ್ವಹಿಸಿದ ಗುತ್ತಿಗೆದಾರರನ್ನು ಕಪ್ಪು ಪಟ್ಟಿಗೆ ಸೇರಿಸುವ ಚಿಂತನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು) | ಸದರಿ ಬ್ಯಾರೇಜ್‌ಗೆ ಹೈಡ್ರಾಲಿಕ್ ಗೇಟ್‌ಗಳನ್ನು ಅಳವಡಿಸಲು ರೂ.3670.00ಲಕ್ಷ ತಗಲಬಹುದೆಂದು ಅಂದಾಜಿಸಲಾಗಿದ್ದು, ಅನುದಾನದ ಲಭ್ಯತೆಯನ್ನು ಆಧರಿಸಿ ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲಾಗುವುದು. ಮೇಲೆ ವಿವರಿಸಿದ ಕಾರಣಗಳಿಂದ ಗುತ್ತಿಗೆದಾರರಿಗೆ ಕಪ್ಪು ಪಟ್ಟಿಗೆ ಸೇರಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂ:ಗ್ರಾಕುನೀ&ನೈಇ 25 ಗ್ರಾನೀಸ(4) 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 919

ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಒಟ್ಟು ಎಷ್ಟು ಅಂಗನವಾಡಿ ಕೇಂದ್ರಗಳು ಸ್ವಂತ ಕಟ್ಟಡಗಳಿಲ್ಲದೇ ಬಾಡಿಗೆ ಕಟ್ಟಡಗಳಲ್ಲಿ ನಿರ್ವಹಿಸುತ್ತಿವೆ; | ರಾಜ್ಯದಲ್ಲಿ 11811 ಕೇಂದ್ರಗಳು ಸ್ವಂತ ಕಟ್ಟಡಗಳಿಲ್ಲದೇ ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. |
| ಆ. | ಹಾಗಿದ್ದಲ್ಲಿ, ಸ್ವಂತ ಅಂಗನವಾಡಿ ಕಟ್ಟಡಗಳನ್ನು ನಿರ್ಮಾಣ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸ್ವಂತ ಅಂಗನವಾಡಿ ಕಟ್ಟಡಗಳನ್ನು ಅನುದಾನ ಲಭ್ಯತೆ ಹಾಗು ನಿವೇಶನ ಲಭ್ಯತೆಗನುಗುಣವಾಗಿ ವಿಶೇಷ ಅಭಿವೃದ್ಧಿ ಯೋಜನೆ, ನರೇಗಾ ಒಗ್ಗೂಡಿಸುವಿಕೆ ಯೋಜನೆ, ಆರ್.ಐ.ಡಿ.ಎಫ್.-ನಬಾರ್ಡ್ ಸಹಯೋಗದೊಂದಿಗೆ, ತಾಲ್ಲೂಕು-ಜಿಲ್ಲಾ ಪಂಚಾಯತ್ ಯೋಜನೆಗಳಡಿ ಹಂತ ಹಂತವಾಗಿ ನಿರ್ಮಾಣ ಮಾಡಲು ಕ್ರಮವಹಿಸಲಾಗುತ್ತಿದೆ. |
| ಇ. | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಸ್ವಂತ ಕಟ್ಟಡಗಳಿಲ್ಲದೇ ಬಾಡಿಗೆ ಕಟ್ಟಡಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳು ಯಾವುವು? (ವಿವರ ನೀಡುವುದು) | ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕೊಪ್ಪ ತಾಲ್ಲೂಕಿನ ಸೋಮೇಶ್ವರಖಾನ್ ಮತ್ತು ದೊರ್ಗಲ್ ಈ 02 ಅಂಗನವಾಡಿ ಕೇಂದ್ರಗಳು ಮಾತ್ರ ಬಾಡಿಗೆ ಕಟ್ಟಡಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 179 ಐಸಿಡಿ 2020

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 920

ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಇದುವರೆವಿಗೂ ಎಷ್ಟು ಕೆಎಸ್‌ಆರ್‌ಟಿಸಿ ಡಿಪೋಗಳನ್ನು ಮಂಜೂರು ಮಾಡಲಾಗಿದೆ; | ಶೃಂಗೇರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕ.ರಾ.ರ.ಸಾ.ನಿಗಮದ ಯಾವುದೇ ಬಸ್ ಡಿಪೋಗಳು ಮಂಜೂರಾಗಿರುವುದಿಲ್ಲ. |
| ಆ. | ಶೃಂಗೇರಿ ತಾಲ್ಲೂಕಿನ ಮೆಣಸೆ ಗ್ರಾಮದಲ್ಲಿ 5-00 ಎಕರೆ ಜಮೀನನ್ನು ಕೆಎಸ್‌ಆರ್‌ಟಿಸಿ ಡಿಪೋಗಾಗಿ ಅನುಮೋದನೆ ನೀಡಿದ್ದರೂ ಸಹ ಕಾಮಗಾರಿ ಅನುಷ್ಠಾನಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶೃಂಗೇರಿ ತಾಲ್ಲೂಕಿನ ಮೆಣಸೆ ಗ್ರಾಮದಲ್ಲಿ 5-00 ಎಕರೆ ಜಮೀನನ್ನು ಕೆಎಸ್‌ಆರ್‌ಟಿಸಿ ಡಿಪೋಗಾಗಿ ಪಡೆಯಲಾಗಿರುತ್ತದೆ.<br>ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ನಿಗಮವು ಆರ್ಥಿಕ ಸಂಕಷ್ಟದಲ್ಲಿದ್ದು, ಹೊಸದಾಗಿ ಯಾವುದೇ ಕಾಮಗಾರಿ ಕೆಲಸಗಳನ್ನು ನಿಗಮದ ವತಿಯಿಂದ ಕೈಗೊಳ್ಳುವುದು ಕಷ್ಟಕರವಾಗಿದೆ. ಮುಂದಿನ ದಿನಗಳಲ್ಲಿ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |
| ಇ. | ಸದರಿ ಹೊಸ ಡಿಪೋ ಕಾಮಗಾರಿಗೆ ತಗಲುವ ಅಂದಾಜು ಮೊತ್ತವೆಷ್ಟು ಹಾಗೂ ಮಂಜೂರಾಗಿರುವ ಅನುದಾನವೆಷ್ಟು; | ಬಸ್ ಘಟಕ ನಿರ್ಮಾಣದ ಬಗ್ಗೆ ಕ.ರಾ.ರ.ಸಾ.ನಿಗಮದಿಂದ ಹೊರಡಿಸಲಾಗಿರುವ ಸುತ್ತೋಲೆ ಸಂ.01/2015-16, ದಿನಾಂಕ: 06.06.2015ರಲ್ಲಿನ ಮಾರ್ಗಸೂಚಿ ಪ್ರಕಾರ ಅಗತ್ಯ ಸಾರಿಗೆ ಸೌಕರ್ಯಗಳನ್ನು ಆಧರಿಸಿ ಅಂದಾಜು ವೆಚ್ಚವನ್ನು ತಯಾರಿಸಿ ನಂತರ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲಾಗುವುದು. |
| ಈ. | ಸದರಿ ನೆನಗುದಿಗೆ ಬಿದ್ದಿರುವ ಕಾಮಗಾರಿಯನ್ನು ಯಾವಾಗ ಪ್ರಾರಂಭಗೊಳಿಸಲಾಗುತ್ತದೆ? | ಕ.ರಾ.ರ.ಸಾ.ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ಮುಂದಿನ ದಿನಗಳಲ್ಲಿ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |

ಸಂಖ್ಯೆ: ಟಿಡಿ 148 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1017

ಉತ್ತರಿಸಬೇಕಾದ ದಿನಾಂಕ : 23.09.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯ ಸರ್ಕಾರದ ವತಿಯಿಂದ ಜಾನುವಾರುಗಳಿಗೆ (ಕುರಿ, ಹಸು, ಎಮ್ಮೆ) ವಿಮೆಗಳನ್ನು ಮಾಡಿಸಲಾಗುತ್ತಿದ್ದು, ವನ್ಯಮೃಗಗಳ ದಾಳಿಯಿಂದಾಗಿ ಜಾನುವಾರುಗಳು ಮೃತಪಟ್ಟ ವೇಳೆ ಸದರಿ ವಿಮೆಗಳನ್ನು ಪಾವತಿಸಲು ನಿರಾಕರಿಸುತ್ತಿರುವುದರಿಂದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಸಾಮಾನ್ಯವಾಗಿ ವನ್ಯಮೃಗಗಳ ದಾಳಿಯಿಂದ ಮೃತಪಟ್ಟ ಸಂದರ್ಭದಲ್ಲಿ ಅರಣ್ಯ ಇಲಾಖೆ ವತಿಯಿಂದ ಜಾನುವಾರು ಮಾಲೀಕರಿಗೆ ಪರಿಹಾರವನ್ನು ನೀಡಲಾಗುತ್ತದೆ. ಅಂತಹ ಸಂದರ್ಭಗಳಲ್ಲಿ ವಿಮಾ ಸಂಸ್ಥೆವತಿಯಿಂದ ಮರಣ ಹೊಂದಿದ ಜಾನುವಾರು ಮಾಲೀಕರಿಗೆ ವಿಮಾ ಮೊತ್ತವನ್ನು ನೀಡಲು ಅವಕಾಶವಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಕೆಲವು ವಿಭಿನ್ನ ಪ್ರಕರಣಗಳಲ್ಲಿ ಅತ್ತ ಅರಣ್ಯ ಇಲಾಖೆಯಿಂದ ಇತ್ತ ವಿಮಾ ಕಂಪನಿಗಳಿಂದಲೂ ವಿಮಾ ಹಣ ನೀಡಲು ನಿರಾಕರಿಸುತ್ತಿದ್ದು, ಸರ್ಕಾರ ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು? | 2017–18ನೇ ಸಾಲಿನಿಂದ 2019–20ನೇ ಸಾಲಿನವರೆಗೆ ವಿಮೆಗೊಳಪಡದ ಜಾನುವಾರುಗಳು ಆಕಸ್ಮಿಕ ಮರಣ ಹೊಂದಿದ ಸಂದರ್ಭದಲ್ಲಿ ಸಾಮಾನ್ಯ ವರ್ಗದವರನ್ನು ಹೊರತುಪಡಿಸಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜಾನುವಾರು ಮಾಲೀಕರಿಗೆ ಗರಿಷ್ಠ ರೂ.10,000/– ಗಳ ಪರಿಹಾಧನವನ್ನು ನೀಡಲಾಗಿದೆ. |

ಪಸಂಮೀ ಇ–231 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು.

## ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ರಂಗನಾಥ್ ಹೆಚ್.ಡಿ ಡಾ॥ (ಕುಣಿಗಲ್)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1032

ಉತ್ತರ ದಿನಾಂಕ : 23.09.2020

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಪ್ರಧಾನ ಮಂತ್ರಿಗಳ ಜಲ ಜೀವನ್ ಮಿಷನ್ ಯೋಜನೆಗೆ ಕೇಂದ್ರ ಸರ್ಕಾರವು ಈಗಾಗಲೇ 2020-21ನೇ ಸಾಲಿಗೆ ರೂ.1,189 ಕೋಟಿಗಳ ಅನುದಾನವನ್ನು ನೀಡಿದ್ದು, ಈವರೆವಿಗೂ ಈ ಯೋಜನೆಯು ಕುಣಿಗಲ್ ತಾಲ್ಲೂಕಿನಲ್ಲಿ ಜಾರಿಯಾಗಿಲ್ಲದಿರುವುದು ನಿಜವೇ; ಹಾಗಿದ್ದಲ್ಲಿ, ಕಾರಣವೇನು?</td><td>ಕರ್ನಾಟಕದಲ್ಲಿ ಜಲ ಜೀವನ್ ಮಿಷನ್ ಯೋಜನೆಯನ್ನು 3 ವರ್ಷಗಳಲ್ಲಿ ಅಂದರೆ 2020-21, 2021-22 ಮತ್ತು 2022-23ನೇ ಸಾಲುಗಳಲ್ಲಿ ಪೂರ್ಣವಾಗಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ. ಜಲಜೀವನ್ ಮಿಷನ್ ಯೋಜನೆಯಡಿ ಮೊದಲ ಹಂತದಲ್ಲಿ ಕನಿಷ್ಠ 55 LPCD ಹಾಗೂ ಗುಣಮಟ್ಟವುಳ್ಳ ಸುಸ್ಥಿರ ಜಲಮೂಲಗಳನ್ನು ಹೊಂದಿರುವ ಗ್ರಾಮಗಳನ್ನು ಪರಿಗಣಿಸಲು ಮಾರ್ಗಸೂಚಿಯಲ್ಲಿ ತಿಳಿಸಲಾಗಿರುತ್ತದೆ.<br>ಸುಸ್ಥಿರ ಜಲಮೂಲ ಲಭ್ಯವಿಲ್ಲದ ಕಾರಣ ಕುಣಿಗಲ್ ತಾಲ್ಲೂಕು 2020-21ನೇ ಸಾಲಿನಲ್ಲಿ ಜಲಜೀವನ್ ಮಿಷನ್ ಅಡಿಯಲ್ಲಿ ಪರಿಗಣಿಸಿರುವುದಿಲ್ಲ.</td></tr>
<tr><td>ಆ)</td><td>ಈ ಯೋಜನೆಯನ್ನು ಜಾರಿಗೊಳಿಸಲು ಇನ್ನೂ ಸರ್ವೆ ಕಾರ್ಯವು ಪ್ರಾರಂಭವಾಗಿಲ್ಲವೇಕೆ; ಅನುದಾನವಿದ್ದರೂ ಈ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಿಲ್ಲವೇಕೆ; (ಪಂಚಾಯತ್ ವಾರು ಮಾಹಿತಿ ನೀಡುವುದು)</td><td>ಸುಸ್ಥಿರ ಜಲಮೂಲಗಳು ಇಲ್ಲದ ಕಾರಣ ಸರ್ವೆ ಕಾರ್ಯವು ಕೈಗೊಂಡಿರುವುದಿಲ್ಲ.</td></tr>
<tr><td>ಇ)</td><td>ಗ್ರಾಮೀಣ ಸ್ವಚ್ಛತೆಗೆ ವಿಶೇಷ ಒತ್ತು ನೀಡುವ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರದ ಸ್ವಚ್ಛ ಭಾರತ ಮಿಷನ್ (ಗ್ರಾಮೀಣ) ಈ ಯೋಜನೆಯಲ್ಲಿ ಸಾಕಷ್ಟು ಹಣ (ಅನುದಾನ) ವಿದ್ದು ಇದನ್ನು ಕುಣಿಗಲ್ ತಾಲ್ಲೂಕಿನ ಯಾವ ಗ್ರಾಮಗಳಲ್ಲಿ ಅನುಷ್ಠಾನ ಮಾಡಲಾಗಿದೆ; (ಮಾಹಿತಿ ನೀಡುವುದು)</td><td>
<table>
<tr><th>ಕ್ರ. ಸಂ.</th><th>ಯೋಜನೆಗಳು</th><th>ಗುರಿ</th><th>ಪ್ರಗತಿ</th></tr>
<tr><td>1</td><td>ವೈಯಕ್ತಿಕ ಶೌಚಾಲಯ 36 ಗ್ರಾಮ ಪಂಚಾಯಿತಿಗಳಲ್ಲಿಯೂ ಅನುಷ್ಠಾನಗೊಳಿಸಲಾಗಿದೆ</td><td>2126</td><td>2067</td></tr>
<tr><td>2.</td><td>ಅಂಗನವಾಡಿ ಶೌಚಾಲಯ</td><td>60</td><td>60</td></tr>
<tr><td>3.</td><td>ಶಾಲಾ ಶೌಚಾಲಯ</td><td>02</td><td>02</td></tr>
<tr><td>4.</td><td>ಸಮುದಾಯ ಶೌಚಾಲಯ</td><td>10</td><td>03</td></tr>
<tr><td>5</td><td>ಘನ & ದ್ರವ ತ್ಯಾಜ್ಯ (ಹೇರೂರು, ಉಜ್ಜನಿ, ನಿಡಸಾಲೆ, ಸಂತೆಮಾವತ್ತೂರು, ಯಲಿಯೂರು ಮತ್ತು ಯಡಿಯೂರು) (ಉಳಿದ 30 ಗ್ರಾ.ಪಂ.ಗಳ ಕ್ರಿಯಾ ಯೋಜನೆಯನ್ನು ರಾಜ್ಯ ಕಛೇರಿಗೆ ಅನುಮೋದನೆಗೆ ಸಲ್ಲಿಸಿದೆ)</td><td>36</td><td>06</td></tr>
</table>
</td></tr>
<tr><td>ಈ)</td><td>ಈವರೆವಿಗೂ ಸ್ವಚ್ಛ ಭಾರತ ಮಿಷನ್ ಯೋಜನೆಗೆ ಕುಣಿಗಲ್ ತಾಲ್ಲೂಕಿನಾದ್ಯಂತ ಎಷ್ಟು ಕಾರ್ಯಕ್ರಮಗಳಿಗೆ ಎಷ್ಟು ಅನುದಾನವನ್ನು ವ್ಯಯ ಮಾಡಲಾಗಿದೆ; ಕಾರ್ಯಕ್ರಮ ಅನುಷ್ಠಾನಗೊಳಿಸಿಲ್ಲದಿದ್ದರೇ ಇದಕ್ಕೆ ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು)</td><td>
<table>
<tr><th>ಕ್ರ. ಸಂ.</th><th>ಯೋಜನೆಗಳು</th><th>ವ್ಯಯ ಮಾಡಲಾದ ಅನದಾನ</th></tr>
<tr><td>1</td><td>ವೈಯಕ್ತಿಕ ಶೌಚಾಲಯ</td><td>245.10 ಲಕ್ಷ</td></tr>
<tr><td>2.</td><td>ಅಂಗನವಾಡಿ ಶೌಚಾಲಯ</td><td>10.39 ಲಕ್ಷ</td></tr>
<tr><td>3.</td><td>ಶಾಲಾ ಶೌಚಾಲಯ</td><td>4.00 ಲಕ್ಷ</td></tr>
<tr><td>4.</td><td>ಸಮುದಾಯ ಶೌಚಾಲಯ</td><td>9.00 ಲಕ್ಷ</td></tr>
<tr><td>5.</td><td>ಘನ & ದ್ರವ ತ್ಯಾಜ್ಯ</td><td>49.32 ಲಕ್ಷ</td></tr>
</table>
</td></tr>
</table>

ಸಂ:ಗ್ರಾಕುನೀ&ನೈಇ 28 ಗ್ರಾನೀಸ(4) 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1033

ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಉತ್ತರಿಸಬೇಕಾದ ದಿನಾಂಕ : 23-09-2020.

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ತುಮಕೂರಿನ ಶ್ರೀ ಸಿದ್ಧಗಂಗಾ ಮಠದ ಡಾ. ಶಿವಕುಮಾರ ಸ್ವಾಮೀಜಿಯವರ ಹಾಗೂ ಶ್ರೀ ಆದಿಚುಂಚನಗಿರಿಯ ಡಾ. ಬಾಲಗಂಗಾಧರ ಮಹಾಸ್ವಾಮಿಗಳ ಹುಟ್ಟೂರನ್ನು ಸಾಂಸ್ಕೃತಿಕ ಪಾರಂಪರಿಕ ಕೇಂದ್ರಗಳನ್ನಾಗಿ ಮಾಡುತ್ತಿರುವ ಸಂಗತಿ ನಿಜವೇ; | ಹೌದು. |
| 2 | ಅದೇ ಮಾದರಿಯಲ್ಲಿ ನಾಗನೂರು-ಬೆಳಗಾವಿ ಶ್ರೀ ರುದ್ರಾಕ್ಷಿಮಠದ ಪೂಜ್ಯ ಡಾ. ಶಿವಬಸವ ಸ್ವಾಮಿಗಳ ಹುಟ್ಟೂರಾದ ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಭೂ ಅರಳಿಕಟ್ಟೆ ಗ್ರಾಮವನ್ನು ಸಹ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸಾಂಸ್ಕೃತಿಕ ಪಾರಂಪರಿಕ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸುವ ಸಲುವಾಗಿ ವಿಧಾನಸಭಾ ಸದಸ್ಯರು ಸರ್ಕಾರಕ್ಕೆ ಪತ್ರ ಬರೆದ ಸಂಗತಿ ನಿಜವೇ; | ಹೌದು |
| 3 | ಪೂಜ್ಯ ನಾಗನೂರು ಡಾ. ಶಿವಬಸವ ಸ್ವಾಮಿಗಳು ಹಾಗೂ ಹಾನಗಲ್ ಸದಾಶಿವ ಮಹಾಸ್ವಾಮಿಗಳು ಶಿರಾ ಕ್ಷೇತ್ರಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಗೋಶಾಲೆಗಳನ್ನು ತೆರೆಯುವಲ್ಲಿ ಅನೇಕ ಸಾಮಾಜಿಕ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಕೊರಿಕೆಗಳನ್ನು ಗೌರವಿಸಿ ಇವರ ಹುಟ್ಟೂರುಗಳನ್ನು ಅಭಿವೃದ್ಧಿಪಡಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳುತ್ತದೆ? (ವಿವರಗಳೊಂದಿಗೆ ಮಾಹಿತಿ ನೀಡುವುದು) | ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

ಕಸಂಮಾ 242 ಕಸಧ 2020

(ಸಿ.ಟಿ.ರವಿ)

ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1035

ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ವಾ.ಕ.ರ.ಸಾರಿಗೆ ಸಂಸ್ಥೆಯ ಬೆಳಗಾವಿ ವಿಭಾಗಕ್ಕೆ ಸೇರಿದ ಎಷ್ಟು ಘಟಕಗಳಿರುತ್ತವೆ; | ವಾ.ಕ.ರ.ಸಾರಿಗೆ ಸಂಸ್ಥೆಯ ಬೆಳಗಾವಿ ವಿಭಾಗದ ವ್ಯಾಪ್ತಿಯಲ್ಲಿ ಈ ಕೆಳಕಂಡ ಒಟ್ಟು 07 ಘಟಕಗಳಿರುತ್ತವೆ:<br>ಬೆಳಗಾವಿ-1, ಬೆಳಗಾವಿ-2, ಬೆಳಗಾವಿ-3, ಬೆಳಗಾವಿ-4, ರಾಮದುರ್ಗ, ಖಾನಾಪೂರ & ಬೈಲಹೊಂಗಲ |
| ಆ. | ಬೆಳಗಾವಿ ಜಿಲ್ಲೆ ಬೈಲಹೊಂಗಲ ನಗರವು ಕಂದಾಯ, ಪೊಲೀಸ್ ಹಾಗೂ ವಾಣಿಜ್ಯ ಇಲಾಖೆಗಳ ಕೇಂದ್ರ ಸ್ಥಾನವಾಗಿದ್ದು, ಬೈಲಹೊಂಗಲ ಘಟಕದಿಂದ ಪ್ರತಿನಿತ್ಯ ಸಾವಿರಾರು ಜನರು ಸಾರಿಗೆ ಬಸ್ ಮೂಲಕ ಸಂಚರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಇ. | ಬಸ್ ನಿಲ್ದಾಣದಲ್ಲಿ ರಸ್ತೆ ಕಾಂಕ್ರೀಟ್ ಇಲ್ಲದೇ ಇರುವುದರಿಂದ ಸಾರ್ವಜನಿಕರಿಗೆ ತುಂಬಾ ತೊಂದರೆಯಾಗುತ್ತಿರುವುದು ನಿಜವೇ; | ಬಸ್ ನಿಲ್ದಾಣದಲ್ಲಿ ರಸ್ತೆ ಕಾಂಕ್ರೀಟ್ ಇಲ್ಲದೇ ಇರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುತ್ತದೆ. |
| ಈ. | ಸದರಿ ನಿಲ್ದಾಣದಲ್ಲಿ ಕಾಂಕ್ರೀಟ್ ರಸ್ತೆ ಮಾಡಲು ಬೇಕಾಗುವ ಮೊತ್ತ ಎಷ್ಟು; | ಬಸ್ ನಿಲ್ದಾಣದಲ್ಲಿ ಕಾಂಕ್ರೀಟ್ ರಸ್ತೆ ಮಾಡಲು ಅಂದಾಜು ರೂ.150.00 ಲಕ್ಷಗಳ ಅವಶ್ಯಕತೆ ಇರುತ್ತದೆ. |
| ಉ. | ಸಾರ್ವಜನಿಕರ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರಕ್ಕೆ ಅನುಕೂಲವಾಗಲು ಬೈಲಹೊಂಗಲ ಬಸ್ ನಿಲ್ದಾಣದಲ್ಲಿ ಕಾಂಕ್ರೀಟ್ ರಸ್ತೆ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದೇ? | ನೂತನ ಬಸ್ ನಿಲ್ದಾಣದ ನಿರ್ಮಾಣ ಕಾರ್ಯ ಪ್ರಗತಿಯಲಿದ್ದು, ಸದರಿ ಕಾಮಗಾರಿ ಪೂರ್ಣಗೊಂಡ ನಂತರ ಕಾಂಕ್ರೀಟ್ ರಸ್ತೆ ನಿರ್ಮಾಣ ಮಾಡಲು ಮುಂದಿನ ಆರ್ಥಿಕ ವರ್ಷದ ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಗುವುದು. |

ಸಂಖ್ಯೆ: ಟಿಡಿ 149 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1039 |
| ಸದಸ್ಯರ ಹೆಸರು | : | ಶ್ರೀ ರಾಮದಾಸ್ ಎಸ್.ಎ.(ಕೃಷ್ಣರಾಜ) |
| ಉತ್ತರಿಸಬೇಕಾದ ದಿನಾಂಕ | : | 23-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು. |

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ.</td><td>ರಾಜ್ಯದಲ್ಲಿರುವ ಚರ್ಚ್‌ಗಳ ಸಂಖ್ಯೆ ಎಷ್ಟು; ಈ ಚರ್ಚ್‌ಗಳಿಂದ ಬರುತ್ತಿರುವ ಭಕ್ತ ಕಾಣಿಕೆಯ ಹಣ ಎಷ್ಟು; ಸರ್ಕಾರ ಪ್ರತಿ ವರ್ಷ ಈ ಚರ್ಚ್‌ಗಳ ಅಭಿವೃದ್ಧಿಗಾಗಿ ನೀಡುತ್ತಿರುವ ಹಣವೆಷ್ಟು?</td><td>ರಾಜ್ಯದಲ್ಲಿ ಅಂದಾಜು 2582 ಚರ್ಚ್‌ಗಳಿರುತ್ತವೆ. ಸದರಿ ಚರ್ಚ್‌ಗಳಿಂದ ಭಕ್ತರ ಕಾಣಿಕೆಯ ಹಣದ ಮಾಹಿತಿ ಲಭ್ಯವಿರುವುದಿಲ್ಲ.<br><br>ಚರ್ಚ್‌ಗಳ ಅಭಿವೃದ್ದಿಗಾಗಿ ಹಾಗೂ ಇತರೆ ಕಾರ್ಯಕ್ರಮಗಳಿಗೆ ಕ್ರೈಸ್ತರ ಅಭಿವೃದ್ಧಿ ಯೋಜನೆಯಡಿ ಸರ್ಕಾರದಿಂದ ಈ ಕೆಳಕಂಡಂತೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><table><tr><th>ಕ್ರ.ಸಂ</th><th>ವರ್ಷ</th><th>ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ)</th></tr><tr><td>1</td><td>2019-20</td><td>6750.00</td></tr><tr><td>2</td><td>2020-21</td><td>5500.00</td></tr></table></td></tr>
<tr><td>ಆ.</td><td>ಚರ್ಚ್‌ಗಳಿಂದ ಬರುವ ಆದಾಯವನ್ನು ಸರ್ಕಾರ ತನ್ನ ನಿಯಂತ್ರಣಕ್ಕೆ ಪಡೆಯುತ್ತಿದೆಯೇ; ಇಲ್ಲದಿದ್ದಲ್ಲಿ, ಹಿಂದೂ ದೇವಸ್ಥಾನಗಳ ಆದಾಯವನ್ನು ಸರ್ಕಾರ ವಿವಿಧ ಉದ್ದೇಶಗಳಿಗೆ ಬಳಕೆ ಮಾಡಿಕೊಳ್ಳುವ ರೀತಿ ಚರ್ಚ್‌ಗಳಿಂದ ಬರುವ ಆದಾಯವನ್ನು ಬಳಕೆ ಮಾಡಿಕೊಳ್ಳುವ ಕುರಿತು ಸರ್ಕಾರದ ನಿಲುವೇನು?</td><td>-ಇಲ್ಲ-</td></tr>
</table>

ಸಂಖ್ಯೆ: **MWD 104 LMQ 2020**

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1040

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಿ. ಪಾಟೀಲ್ (ಬಸವನ ಬಾಗೇವಾಡಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ಕ್ರೀಡಾ ಇಲಾಖೆಯ ಹೆಸರಿಗೆ ಜಮೀನು ಖಾತಾ ಬದಲಾವಣೆಯಾಗಿರುತ್ತದೆಯೇ;<br><br>ಇಲಾಖೆಯಿಂದ ತಾಲ್ಲೂಕು ಕ್ರೀಡಾಂಗಣ ನಿರ್ಮಿಸಲು ಪ್ರಸ್ತಾವನೆ ಸರ್ಕಾರಕ್ಕೆ ಬಂದಿದೆಯೇ; | ಹೌದು.<br><br>ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ದಿನಾಂಕ: 18-02-2020 ರಂದು ತಕ್ಕಳಕಿ ಗ್ರಾಮದ ಸರ್ವೆ ನಂ-147 ರಲ್ಲಿ 6 ಎಕರೆ ಜಮೀನು ಮಂಜೂರಾಗಿದ್ದು, ಇಲಾಖೆಯ ಹೆಸರಿಗೆ ಖಾತೆ ಆಗಿರುತ್ತದೆ.<br><br>ಇಲ್ಲ.<br><br>ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ವಿವರವಾದ ಅಂದಾಜು ಪಟ್ಟಿಯನ್ನು ತಯಾರಿಸಿ, ಸಲ್ಲಿಸಲು ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ, ವಿಜಯಪುರ ಇವರಿಗೆ ದಿನಾಂಕ: 01-06-2020 ರಂದು ಕೋರಲಾಗಿದ್ದು, ಸದರಿಯವರು ಅಂದಾಜು ಪಟ್ಟಿ ಸಲ್ಲಿಸಬೇಕಾಗಿದೆ. |
| ಆ) | ಹಾಗಿದ್ದಲ್ಲಿ, ಬಸವನ ಬಾಗೇವಾಡಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ಅನುದಾನ ಒದಗಿಸಲು ಸರ್ಕಾರ ಏನು ಕ್ರಮ ಕೈಗೊಂಡಿರುತ್ತದೆ? | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ವೈಎಸ್ ಡಿ-/ಇಬಿಬಿ/94/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

6



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1041

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ) | ವಿಜಯಪುರ ಜಿಲ್ಲೆಯ ಕೊಲ್ಹಾರ ಪುನರ್ ವಸತಿ ಕೇಂದ್ರದಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ಕೈಮಗ್ಗ ಮತ್ತು ಜವಳಿ ಇಲಾಖೆಯ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಕಟ್ಟಡ ನಿರ್ಮಿಸಿ ಕೊಡಲಾಗಿದೆಯೇ; | ವಿಜಯಪುರ ಜಿಲ್ಲೆಯ ಕೊಲ್ಹಾರ ಪುನರ್ ವಸತಿ ಕೇಂದ್ರದಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಯಾವುದೇ ಕಟ್ಟಡವನ್ನು ನಿರ್ಮಿಸಿಕೊಟ್ಟಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಕಟ್ಟಡ ನಿರ್ವಹಣೆಯನ್ನು ಕೈಮಗ್ಗ ಅಭಿವೃದ್ಧಿ ನಿಗಮವು ನೋಡಿಕೊಳ್ಳುತ್ತಿದೆಯೇ; | ಅನ್ವಯಿಸುವುದಿಲ್ಲ |
| ಇ) | ಕಟ್ಟಡವನ್ನು ನಿಗಮದಿಂದ ಉಪಯೋಗಿಸಲಾರದೇ ಇರುವ ಕಾರಣ ಬೇರೆ ವ್ಯಕ್ತಿಗಳು ಪರಭಾರೆ ಮಾಡುತ್ತಿರುವ ಸಂಗತಿಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನ್ವಯಿಸುವುದಿಲ್ಲ |
| ಈ) | ಹಾಗಿದ್ದಲ್ಲಿ, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಈ ಬಗ್ಗೆ ಏನು ಕ್ರಮ ಕೈಗೊಂಡಿದೆ? | ಅನ್ವಯಿಸುವುದಿಲ್ಲ |

ಸಂಖ್ಯೆ: CI 210 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ – 1042

ಉತ್ತರಿಸಬೇಕಾದ ದಿನಾಂಕ – 23-09-2020

ಸದಸ್ಯರ ಹೆಸರು – ಶ್ರೀ.ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ)

ಉತ್ತರಿಸುವ ಸಚಿವರು – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ವಿಜಯಪುರ ಜಿಲ್ಲೆಯ ಬಸವನಬಾಗೇವಾಡಿ ವಿಧಾನಸಭಾ ಮತಕ್ಷೇತ್ರಗಳಲ್ಲಿ ಅಲ್ಪಸಂಖ್ಯಾತರ ಕಾಲೋನಿಗಳ ಅಭಿವೃದ್ಧಿಗೆ ಸರ್ಕಾರ ಮಂಜೂರು ಮಾಡಿರುವ ಅನುದಾನವೆಷ್ಟು; | ಕಳೆದ ಮೂರು ವರ್ಷಗಳಲ್ಲಿ ವಿಜಯಪುರ ಜಿಲ್ಲೆಯ ಬಸವನಬಾಗೇವಾಡಿ ವಿಧಾನಸಭಾ ಮತಕ್ಷೇತ್ರದಲ್ಲಿ ಅಲ್ಪಸಂಖ್ಯಾತರ ಕಾಲೋನಿಗಳ ಅಭಿವೃದ್ಧಿಗೆ ಸರ್ಕಾರ ಮಂಜೂರು ಮಾಡಿರುವ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತದೆ.<br>**ವರ್ಷ** / **ಬಿಡುಗಡೆ ಮಾಡಲಾದ ಅನುದಾನ (ರೂ.ಲಕ್ಷಗಳಲ್ಲಿ)**<br>2017–18 : 150.00<br>2018–19 : 625.00<br>2019–20 : 200.00 |
| ಆ) | ಮಂಜೂರಾದ ಅನುದಾನದಲ್ಲಿ ಕೈಗೊಂಡಿರುವ ಅಭಿವೃದ್ಧಿ ಕಾಮಗಾರಿಗಳು ಯಾವುವು? | ಮಂಜೂರಾದ ಅನುದಾನದಲ್ಲಿ ಕೈಗೊಂಡಿರುವ ಅಭಿವೃದ್ಧಿ ಕಾಮಗಾರಿಗಳು ಈ ಕೆಳಕಂಡಂತಿರುತ್ತದೆ.<br>1. ರಸ್ತೆ ಮತ್ತು ಚರಂಡಿ.<br>2. ಶುದ್ಧ ಕುಡಿಯುವ ಘಟಕ.<br>3. ಕೊಳವೆ ಬಾವಿ ಕೊರೆಯುವುದು ಹಾಗೂ ಪೈಪ್‌ಲೈನ್ ಅಳವಡಿಸುವುದು.<br>4. 4. ಸಾಮೂಹಿಕ ಶೌಚಾಲಯಗಳ ನಿರ್ಮಾಣ |

ಸಂಖ್ಯೆ:MWD 90 LMQ 2020

**(ಶ್ರೀಮಂತ ಬಾಳಸಾಹೇಬ ಪಾಟೀಲ್)**
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1054
ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್ (ನರಸಿಂಹರಾಜ)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.
ಉತ್ತರಿಸಬೇಕಾದ ದಿನಾಂಕ : 23-09-2020

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ರಾಜ್ಯದಲ್ಲಿ ಅಂಗನವಾಡಿ ಕೇಂದ್ರ ನಡೆಸಲು ಕಟ್ಟಡಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಸ್ವಂತ ಕಟ್ಟಡಗಳ ಕೊರತೆ ಇರುತ್ತದೆ</td></tr>
<tr><td>ಆ.</td><td>ಕಳೆದ ಸಾಲಿನಲ್ಲಿ ಕಟ್ಟಡಗಳ ನಿರ್ಮಾಣಕ್ಕೆ ಬಿಡುಗಡೆಯಾದ ಅನುದಾನವೆಷ್ಟು;</td><td>ಕಳೆದ ಸಾಲಿನಲ್ಲಿ ಈ ಕೆಳಕಂಡಂತೆ ಅನುದಾನ ಬಿಡುಗಡೆಯಾಗಿದೆ.
<table>
<tr><th>ಕ್ರ. ಸಂ.</th><th>ಯೋಜನೆ</th><th>ಬಿಡುಗಡೆಯಾದ ಅನುದಾನ (ರೂ. ಲಕ್ಷಗಳಲ್ಲಿ)</th><th>ಕಟ್ಟಡಗಳ ಸಂಖ್ಯೆ</th></tr>
<tr><td>1</td><td>ವಿಶೇಷ ಅಭಿವೃದ್ಧಿ ಯೋಜನೆ</td><td>3597.50</td><td>206</td></tr>
<tr><td>2</td><td>ನರೇಗಾ ಒಗ್ಗೂಡಿಸುವಿಕೆ</td><td>375.00</td><td>75</td></tr>
<tr><td colspan="2">ಒಟ್ಟು</td><td>3972.50</td><td>281</td></tr>
</table></td></tr>
<tr><td>ಇ.</td><td>ಈ ಅನುದಾನದಲ್ಲಿ ಎಷ್ಟು ಕಟ್ಟಡಗಳು ನಿರ್ಮಾಣವಾಗಿವೆ?</td><td>4 ಕಟ್ಟಡಗಳು ಪೂರ್ಣವಾಗಿದ್ದು, 277 ಕಟ್ಟಡಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿವೆ.</td></tr>
</table>

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 165 ಐಸಿಡಿ 2020

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1061 |
| ಸದಸ್ಯರ ಹೆಸರು | : | ಶ್ರೀ ಎಸ್.ಎನ್.ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು. |
| ಉತ್ತರಿಸುವ ದಿನಾಂಕ | : | 23.09.2020 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಮಹಿಳೆಯರ ಸಬಲೀಕರಣಕ್ಕಾಗಿ ಸ್ತ್ರೀಶಕ್ತಿ ಸಂಘಗಳಿಗೆ ಆವರ್ತಕ ನಿಧಿಯನ್ನು 5,000ರೂಗಳಿಂದ ರೂ.25,000 ರೂಗಳ ವರೆಗೆ ಹೆಚ್ಚಿಸಿದ್ದು, ಇದರ ಸದುಪಯೋಗವನ್ನು ಸುಮಾರು 1.31 ಲಕ್ಷ ಗುಂಪುಗಳು ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ,<br><br>2013-14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸ್ತ್ರೀಶಕ್ತಿ ಗುಂಪುಗಳಿಗೆ ನೀಡುತಿರುವ ಸುತ್ತುನಿಧಿಯ ಮಿತಿಯನ್ನು ರೂ. 5,000/- ದಿಂದ ರೂ.25,000/-ಕ್ಕೆ ಹೆಚ್ಚಿಸಲು ಘೋಷಿಸಲಾಗಿದ್ದು, ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಮಮಇ/129/ಮಮಅ/2013, ದಿನಾಂಕ:03.09.2013ರಲ್ಲಿ ಈ ಯೋಜನೆಯನ್ನು 2014-15ನೇ ಸಾಲಿನಿಂದ ಜಾರಿಗೊಳಿಸಿ 2017-18ನೇ ಸಾಲಿಗೆ ಪೂರ್ಣಗೊಳಿಸತಕ್ಕದೆಂದು ಆದೇಶಿಸಲಾಗಿದೆ. ಅದರನ್ವಯ ಪ್ರತಿ ಸ್ತ್ರೀಶಕ್ತಿ ಗುಂಪಿಗೆ ತಲಾ 25,000/-ಗಳಂತೆ 132320 ಗುಂಪುಗಳಿಗೆ ಸುತ್ತುನಿಧಿಯನ್ನು ಹಂತಹಂತವಾಗಿ ನೀಡಲಾಗಿದೆ. |
| ಆ) | ಈ ಕಾರ್ಯಕ್ರಮವನ್ನು ಮುಂದುವರೆಸಿಕೊಂಡು ಯೋಜನೆಯನ್ನು ಇನ್ನೂ ವಿಸ್ತರಿಸಿ ಸ್ತ್ರೀಶಕ್ತಿ ಸಂಘಗಳಿಗೆ ಉತ್ತೇಜನ ನೀಡುತ್ತಿದೆಯೇ; ಅಥವಾ ಈ ಕಾರ್ಯಕ್ರಮವನ್ನು ರದ್ದುಪಡಿಸಲಾಗಿದೆಯೇ; ರದ್ದುಪಡಿಸಿದಲ್ಲಿ ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು) | ಈ ಯೋಜನೆಯು 2017-18ನೇ ಸಾಲಿನವರೆಗೆ ಮಾತ್ರ ಅನ್ವಯಿಸುತ್ತದೆ. ಆದ್ದರಿಂದ ವಿಸ್ತರಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 181 ಐಸಿಡಿ 2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1062

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಎಸ್.ಎನ್.ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

ಉತ್ತರಿಸುವ ದಿನಾಂಕ : 23.09.2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನ ಆಯವ್ಯಯದಲ್ಲಿ ಸ್ತ್ರೀಶಕ್ತಿ ಸ್ವಸಹಾಯ ಸಂಘಗಳು ತಯಾರಿಸಿದ ಉತ್ಪನ್ನಗಳನ್ನು ಸರ್ಕಾರದ ಇಲಾಖೆಗಳಲ್ಲಿ ಅವಶ್ಯಕತೆಗನುಸಾರ ಖರೀದಿ ಮಾಡಲಾಗುವುದೆಂದು ಘೋಷಣೆ ಮಾಡಿದಂತೆ ಇದುವರೆಗೂ ಎಷ್ಟು ಇಲಾಖೆಗಳಲ್ಲಿ ಖರೀದಿ ಪ್ರಕ್ರಿಯೆ ಚಾಲ್ತಿಯಲ್ಲಿದೆ; | ಸ್ತ್ರೀಶಕ್ತಿ ಗುಂಪುಗಳು ಉತ್ಪಾದಿಸುವ ವಸ್ತು/ಉತ್ಪನ್ನಗಳ ವಿವರ ಹಾಗೂ ಬ್ರಾಡಿಂಗ್ ಮತ್ತು ಲೇಬಲಿಂಗ್, ನಿಗದಿಪಡಿಸಿರುವ ದರ, ಗುಣಮಟ್ಟ ಇತ್ಯಾದಿ ವಿವರಗಳನ್ನು ಪಡೆಯಲು ಕ್ರಮವಹಿಸಲಾಗುತ್ತಿದೆ. ಅವುಗಳು ಸ್ವೀಕೃತವಾದ ನಂತರ ಸೂಕ್ತ ಸರ್ಕಾರಿ ಆದೇಶ ಹೊರಡಿಸಲಾಗುವುದು. |
| ಆ) | ಇದುವರೆಗೂ ಖರೀದಿ ಮಾಡದಿದ್ದಲ್ಲಿ ಕಾರಣಗಳೇನು; | |
| ಇ) | ಖರೀದಿ ಪ್ರಕ್ರಿಯೆ ಯಾವಾಗ ಪ್ರಾರಂಭಿಸಲಾಗುವುದು? (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಜಿಲ್ಲೆಗಳಿಂದ ಸಂಪೂರ್ಣ ಮಾಹಿತಿ ಪಡೆಯಲು ಕ್ರಮವಹಿಸಲಾಗುತ್ತಿದ್ದು, ಖರೀದಿ ಮಾರ್ಗಸೂಚಿಗಳೊಂದಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ ವಿವಿದ ಇಲಾಖೆಗಳಿಗೆ ಖರೀದಿ ಪ್ರಕ್ರಿಯೆಗೆ ಕ್ರಮವಹಿಸಲಾಗುವುದು. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 97 ಮಮಲ 2020

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1063

ಸದಸ್ಯರ ಹೆಸರು : ಶ್ರೀ ಎಸ್.ಎನ್ ನಾರಾಯಣಸ್ವಾಮಿ ಕೆ.ಎಂ (ಬಂಗಾರಪೇಟೆ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ರಾಜ್ಯದಲ್ಲಿ 2019ರಲ್ಲಿ ಸಂಭವಿಸಿದ ನೆರೆಹಾವಳಿ ಯಿಂದ ಹಾನಿಗೊಂಡಿರುವ 842 ಅಂಗನವಾಡಿ ಕೇಂದ್ರಗಳ ಪುನರ್ ನಿರ್ಮಾಣವನ್ನು 138 ಕೋಟಿ ರೂ.ಗಳ ವೆಚ್ಚದಲ್ಲಿ ಕೈಗೊಳ್ಳಲಾಗುವುದೆಂದು ಘೋಷಿಸಿದ್ದು ಕಾರ್ಯಗತವಾಗಿದೆಯೇ; | 2019-20ನೇ ಸಾಲಿನಲ್ಲಿ ಮಳೆಹಾನಿಯಿಂದ ಶಿಥಿಲಗೊಂಡ 842 ಅಂಗನವಾಡಿ ಕಟ್ಟಡಗಳನ್ನು ನಬಾರ್ಡ್ ಸಹಯೋಗದೊಂದಿಗೆ ಆರ್.ಐ.ಡಿ.ಎಫ್-25 ಟ್ರಂಚ್ ರಡಿಯಲ್ಲಿ ರೂ. 13788.00 ಲಕ್ಷಗಳ ವೆಚ್ಚದಲ್ಲಿ ಪುನರ್ ನಿರ್ಮಾಣ ಮಾಡಲು ದಿನಾಂಕ:11.03.2020ರಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.<br><br>2020-21ನೇ ಸಾಲಿನ ಆಯವ್ಯಯದಲ್ಲಿ ಸದರಿ ಯೋಜನೆಗೆ ರೂ.5000.00 ಲಕ್ಷ ಅನುದಾನ ಒದಗಿಸಲಾಗಿದ್ದು, ಕಟ್ಟಡ ನಿರ್ಮಾಣ ಮಾಡಲು ಲೋಕೋಪಯೋಗಿ ಇಲಾಖೆಗೆ ವಹಿಸಲಾಗಿರುತ್ತದೆ. |
| ಆ. | ಹಾಗಿದ್ದಲ್ಲಿ, ಇದುವರೆವಿಗೂ ಎಷ್ಟು ಅಂಗನವಾಡಿ ಕೇಂದ್ರಗಳ ಪುನರ್ ನಿರ್ಮಾಣ ಕಾರ್ಯ ಮುಕ್ತಾಯವಾಗಿದೆ; | ಲೋಕೋಪಯೋಗಿ ಇಲಾಖೆಯಲ್ಲಿ ಟೆಂಡರ್ ಪ್ರಕ್ರಿಯೆಯ ಹಂತದಲ್ಲಿದೆ. |
| ಇ. | ಅಂಗನವಾಡಿ ಕೇಂದ್ರಗಳ ಪುನರ್ ನಿರ್ಮಾಣ ಕೈಗೊಳ್ಳದಿದ್ದಲ್ಲಿ ಯಾವಾಗ ಕೈಗೊಳ್ಳಲಾಗುವ್ಯದು; | ಟೆಂಡರ್ ಪ್ರಕ್ರಿಯೆ ಅಂತಿಮಗೊಂಡ ನಂತರ ಅಂಗನವಾಡಿ ಕಟ್ಟಡಗಳ ಪುನರ್ ನಿರ್ಮಾಣಕ್ಕೆ ಕ್ರಮವಹಿಸಲಾಗುವುದು. |
| ಈ | ಇದನ್ನು ಪೂರ್ಣಗೊಳಿಸಲು ಇನ್ನು ಎಷ್ಟು ಕಾಲಾವಕಾಶ ಬೇಕಾಗುತ್ತದೆ? (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಅನುದಾನ ಲಭ್ಯತೆಗನುಗುಣವಾಗಿ ಕಟ್ಟಡಗಳನ್ನು ಹಂತ ಹಂತವಾಗಿ ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 167 ಐಸಿಡಿ 2020

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1064
ಸದಸ್ಯರ ಹೆಸರು : ಶ್ರೀ ಸಂಜೀವ್ ಮಠಂದೂರ್ (ಪುತ್ತೂರು)
ಉತ್ತರಿಸಬೇಕಾದ ದಿನಾಂಕ : 23-09-2020.
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಜ್ಞಾನಪೀಠ ಪುರಸ್ಕೃತ ಕವಿ, ಸಾಹಿತಿ, ಯಕ್ಷಗಾನ ಪ್ರವೀಣ, ಡಾ. ಶಿವರಾಮ ಕಾರಂತರ ಪುತ್ತೂರಿನ ಶಿವರಾಮ ಕಾರಂತ ಬಾಲವನವನ್ನು ಅಭಿವೃದ್ಧಿ ಪಡಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಸಕ್ತ ಸಾಲಿನಲ್ಲಿ ಯಾವ ಯೋಜನೆಯನ್ನು ಹಮ್ಮಿಕೊಂಡಿದೆ? (ಮಾಹಿತಿ ಒದಗಿಸಿವುದು) | • ಜ್ಞಾನಪೀಠ ಪುರಸ್ಕೃತ ಕವಿ , ಯಕ್ಷಗಾನ ಪ್ರವೀಣ, ಡಾ\|\| ಶಿವರಾಮ ಕಾರಂತ ಪುತ್ತೂರಿನ ಶಿವರಾಮ ಕಾರಂತ ಬಾಲವನವನು ಅಭಿವೃದ್ಧಿಪಡಿಸಲು ಕನ್ನಡ ಸಂಸ್ಕೃತಿ ಇಲಾಖೆಯು ಪ್ರಸಕ್ತ ಸಾಲಿನಲ್ಲಿ ಕಾಮಗಾರಿಗೆ ಸಂಬಂಧಿಸಿದಂತೆ ಡಾ\|\| ಕಾರಂತ ಮನೆ ಮತ್ತು ಮ್ಯೂಸಿಯಂ ನ ಕಾರ್ಯಗಳು ಮುಗಿದಿದ್ದು, ಸುಸ್ಥಿತಿಯಲ್ಲಿದೆ ಹಾಗೂ ಸಾರ್ವಜನಿಕರಿಗೆ ಅವ ಕಲ್ಪಿಸಲಾಗಿದೆ.<br><br>• ಗ್ರಂಥಾಲಯ ಕಟ್ಟಡ ಎರಡು ಮಹಡಿಗಳಿದ್ದು ಗ್ರಂಥಾಲಯದ ದುರಸ್ತಿಗಾಗಿ ಹಾಗೂ ಹಿಂದೆ ಇ ಮಾದರಿಯಲ್ಲಿ ಪುನಶ್ಚೇತನಗೊಳಿಸಲು ಕಾಮಗಾರಿಯನ್ನು ಪ್ರಾರಂಭಿಸಬೇಕಾಗಿದೆ. ಹಾ ಇನ್ಟ್ಯಾಕ್ ಸಂಸ್ಥೆಯು ನೀಡಿರುವ ಮಾಸ್ಟರ್ ಪ್ಲಾ ರಂತೆ ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳಬೇಕಾಗಿದೆ. |

ಕಸಂಪಾ 68 ಕವಿಸ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ರಘುಮೂರ್ತಿ ಟಿ. (ಚಳ್ಳಕೆರೆ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1070

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೋವಿಡ್-19 ಪೂರ್ವದಲ್ಲಿ ಗಾರ್ಮೆಂಟ್ ಫ್ಯಾಕ್ಟರಿಗಳು ಎಷ್ಟು ಸಂಖ್ಯೆಯಲ್ಲಿ ಚಾಲನೆಯಲ್ಲಿದ್ದವು; | ರಾಜ್ಯದಲ್ಲಿ ಕೋವಿಡ್-19 ಪೂರ್ವದಲ್ಲಿ 974 ಗಾರ್ಮೆಂಟ್ ಫ್ಯಾಕ್ಟರಿಗಳು ಚಾಲನೆಯಲ್ಲಿದ್ದವು. |
| ಆ) | ಕೋವಿಡ್-19ರಲ್ಲಿ ಎಷ್ಟು ಗಾರ್ಮೆಂಟ್ ಫ್ಯಾಕ್ಟರಿಗಳು ಮುಚ್ಚಲ್ಪಟ್ಟವು; | 40 ಗಾರ್ಮೆಂಟ್ ಫ್ಯಾಕ್ಟರಿಗಳು ಮುಚ್ಚಲ್ಪಟ್ಟಿವೆ. |
| ಇ) | ಕೋವಿಡ್-19 ನಂತರ ಮುಚ್ಚಿರುವ ಗಾರ್ಮೆಂಟ್ಸ್‌ಗಳಲ್ಲಿ ಎಷ್ಟು ನೌಕರರು ಇದ್ದರು, ಅವರಿಗೆ ಸರ್ಕಾರ ನೀಡಿರುವ ಸಹಾಯ ಧನವೆಷ್ಟು; | ಕೋವಿಡ್-19 ನಂತರ ಮುಚ್ಚಿರುವ 40 ಗಾರ್ಮೆಂಟ್ಸ್‌ಗಳಲ್ಲಿ 12,961 ನೌಕರರು ಇದ್ದರು. ಅವರಿಗೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಮುಖಾಂತರ ಸರ್ಕಾರ ಯಾವುದೇ ಧನ ಸಹಾಯ ನೀಡಿರುವುದಿಲ್ಲ. |
| ಈ) | ಕೋವಿಡ್-19 ಪ್ರಾರಂಭವಾದಾಗಿನಿಂದ ಉಣ್ಣೆ ಉತ್ಪಾದನೆ ಕುಂಠಿತಗೊಂಡು ಉತ್ಪಾದನೆ ಮಾಡುವ ನೇಕಾರರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಉ) | ಬಂದಿದ್ದಲ್ಲಿ, ಉಣ್ಣೆ ಉತ್ಪಾದಕರಿಗೆ ಸರ್ಕಾರದಿಂದ ಸಹಾಯಧನ ನೀಡಲು ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ವಾಕೈ 47 JAKY 2020. ದಿನಾಂಕ:16.05.2020 ರನ್ವಯ ಕೋವಿಡ್-19 ಮಹಾಮಾರಿ ಹಾಗೂ ಆರ್ಥಿಕ ಹಿನ್ನಡೆಯಿಂದ ಸಂಕಷ್ಟದಲ್ಲಿರುವ ಕೈಮಗ್ಗ ನೇಕಾರರಿಗೆ "ನೇಕಾರ ಸಮ್ಮಾನ್" ಯೋಜನೆಯಡಿ ಪ್ರತಿ ವರ್ಷ ಪ್ರತಿ ಕೈಮಗ್ಗ ನೇಕಾರರಿಗೆ ರೂ.2,000/- ಗಳ ಆರ್ಥಿಕ ನೆರವು ನೀಡಲಾಗುತ್ತಿದ್ದು, ಉಣ್ಣೆ ಉತ್ಪಾದನೆ ಚಟುವಟಿಕೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ನೇಕಾರರಿಗೂ ಸಹ ಈ ಯೋಜನೆ ಅನ್ವಯಿಸುತ್ತದೆ. |

ಸಂಖ್ಯೆ: CI 213 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1071
ಸದಸ್ಯರ ಹೆಸರು : ಶ್ರೀ ರಘುಮೂರ್ತಿ ಟಿ. (ಚಳ್ಳಕೆರೆ)
ಉತ್ತರಿಸಬೇಕಾದ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಅಲ್ಪಸಂಖ್ಯಾತರ ವಾಸಿಸುವ ಕಾಲೋನಿಗಳಲ್ಲಿ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ಎಷ್ಟು ಮೊತ್ತ ಬಿಡುಗಡೆ ಮಾಡಲಾಗಿದೆ; (ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು). | ಕಳೆದ ಮೂರು ವರ್ಷಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಅಲ್ಪಸಂಖ್ಯಾತರು ವಾಸಿಸುವ ಕಾಲೋನಿಗಳಲ್ಲಿ ಕೈಗೊಂಡ ಕಾಮಗಾರಿಗಳು 1. ಸಿ.ಸಿ ರಸ್ತೆ ಮತ್ತು ಚರಂಡಿ ನಿರ್ಮಾಣ, 2. ಶುದ್ಧಕುಡಿಯುವ ನೀರಿನ ಘಟಕ, 3. ಸಾಮೂಹಿಕ ಶೌಚಾಲಯಗಳಿಗೆ ಒಟ್ಟು ರೂ.2550 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಕ್ಷೇತ್ರವಾರು ವಿವರಗಳು ಈ ಕೆಳಕಂಡಂತಿರುತ್ತದೆ: (ಕೆಳಗಿನ ಕೋಷ್ಟಕ) |

| ಕ್ರಮ ಸಂಖ್ಯೆ | ಕ್ಷೇತ್ರ | 2017-18 | 2018-19 | 2019-20 | ಒಟ್ಟು |
|---|---|---|---|---|---|
| 1 | ಚಿತ್ರದುರ್ಗ | 50.00 | 625.00 | - | 675.00 |
| 2 | ಚಳ್ಳಕೆರೆ | 50.00 | 325.00 | - | 375.00 |
| 3 | ಮೊಳಕಾಲ್ಮೂರು | 50.00 | 325.00 | - | 375.00 |
| 4 | ಹೊಸದುರ್ಗ | 150.00 | 25.00 | - | 175.00 |
| 5 | ಹೊಳ್ಳಕೆರೆ | 150.00 | 25.00 | - | 175.00 |
| 6 | ಹಿರಿಯೂರು | 250.00 | 525.00 | - | 775.00 |
| | ಒಟ್ಟು | 700.00 | 1850.00 | - | 2550.00 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ | ಪ್ರಸ್ತುತ ಕೈಗೊಂಡಿರುವ ಕಾಮಗಾರಿಗಳ ಸಂಖ್ಯೆ ಎಷ್ಟು; | ಯಾವುದು ಇಲ್ಲ. |
| ಇ | ಪ್ರಾರಂಭಗೊಂಡಿರುವ ಕಾಮಗಾರಿಯಲ್ಲಿ ಎಷ್ಟು ಕಾಮಗಾರಿಗಳು ಪೂರ್ಣಗೊಂಡಿರುತ್ತವೆ ಮತ್ತು ಪೂರ್ಣಗೊಳ್ಳದಿರುವ ಕಾಮಗಾರಿಗಳ ಸಂಖ್ಯೆ ಎಷ್ಟು; ಅಪೂರ್ಣಗೊಂಡಿರುವ ಕಾಮಗಾರಿಗಳು ಯಾವಾಗ ಪೂರ್ಣಗೊಳಿಸಲಾಗುವುದು? (ಸಂಪೂರ್ಣ ಮಾಹತಿ ನೀಡುವುದು). | ಕಾಮಗಾರಿಗಳ ವಿವರ ಈ ಕೆಳಕಂಡಂತಿದೆ (ಕೆಳಗಿನ ಕೋಷ್ಟಕ). ಅನುದಾನದ ಕೊರತೆಯಿಂದ 28 ಕಾಮಗಾರಿಗಳನ್ನು ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ. |

| | | |
|---|---|---|
| 1 | ಪ್ರಾರಂಭಗೊಂಡಿರುವ ಕಾಮಗಾರಿಗಳಲ್ಲಿ ಪೂರ್ಣಗೊಂಡಿರುವ ಕಾಮಗಾರಿಗಳು | 263 |
| 2 | ಪೂರ್ಣಗೊಳ್ಳದಿರುವ ಕಾಮಗಾರಿಗಳು | 28 |
| | ಒಟ್ಟು | 291 |

ಸಂಖ್ಯೆ: ಎಂಡಬ್ಲ್ಯೂಡಿ 98 ಎಲ್.ಎ.ಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಕರ್ನಾಟಕ ವಿಧಾನಸಭೆ

15ನೇ ವಿಧಾನಸಭೆ

7ನೇ ಅಧಿವೇಶನ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1083 |
| ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) |
| ಉತ್ತರಿಸುವ ದಿನಾಂಕ | : | 23-09-2020 |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೂಪಿಸಿರುವ ಹೊಸ ತಾಲ್ಲೂಕುಗಳಲ್ಲಿ ತಾಲ್ಲೂಕು ಪಂಚಾಯತಿಯ ಕಟ್ಟಡ, ಸಿಬ್ಬಂದಿ ವಾಹನ ಹಾಗೂ ಕಛೇರಿ ನಿರ್ವಹಣೆಗಾಗಿ ವಿಶೇಷ ಅನುದಾನ ಮಂಜೂರು ಮಾಡಲಾಗಿದೆಯೆ; (ತಾಲ್ಲೂಕು ಪಂಚಾಯತಿವಾರು ವಿವರ ನೀಡುವುದು) | ತಾಲ್ಲೂಕು ಪಂಚಾಯತ್‌ಗೆ ನೇಮಕ ಮಾಡಿರುವ EO ಮತ್ತು ಸರ್ಕಾರಿ ನೌಕರರಿಗೆ ಸಂಬಳ ಪಾವತಿಸಲು ಜಿಲ್ಲಾ ಪಂಚಾಯತ್‌ಗೆ ಅನುದಾನ ಬಿಡುಗಡೆ ಮಾಡಲಾಗಿದೆ. ಸರ್ಕಾರದ ಆದೇಶದ ಪ್ರತಿ ಲಗತ್ತಿಸಿದೆ. |
| ಆ) | ಮೈಸೂರು ಜಿಲ್ಲೆ ಹೆಗ್ಗಡದೇವನ ಕೋಟೆ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಸರಗೂರು ಹೊಸ ತಾಲ್ಲೂಕಿನ ತಾಲ್ಲೂಕು ಪಂಚಾಯತಿಯು ಹಳೆಯ ಹಂಚಿನ ಕಟ್ಟಡದಲ್ಲಿ ಪ್ರಾರಂಭವಾಗಿದ್ದು, ಹೊಸ ಕಟ್ಟಡವಿಲ್ಲದೇ, ಸಿಬ್ಬಂದಿಗಳಿಗೆ ವಾಹನ ಸೌಲಭ್ಯವಿಲ್ಲದೇ ಹಾಗೂ ಇತರೆ ಸೌಕರ್ಯಗಳಿಲ್ಲದೇ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರವು ಕೈಗೊಂಡ ಕ್ರಮಗಳೇನು; | ಬಂದಿರುವುದಿಲ್ಲ. |
| ಇ) | ಸರಗೂರು ತಾಲ್ಲೂಕು ಪಂಚಾಯತಿಯ ಹೊಸ ಕಟ್ಟಡ ನಿರ್ಮಾಣ ಹಾಗೂ ಇತರೆ ಸೌಕರ್ಯಗಳಿಗೆ ಅನುದಾನ ಮಂಜೂರು ಮಾಡುವಲ್ಲಿ ಸರ್ಕಾರದ ನಿಲುವೇನು? | ಸ್ಥಳ ಗುರುತಿಸಿ, ವಿವರವಾದ ಪ್ರಸ್ತಾವನೆ ಸಲ್ಲಿಸಿದ್ದಲ್ಲಿ ಕಟ್ಟಡ ಮಂಜೂರಾತಿಗೆ ಅನುದಾನ ಬಿಡುಗಡೆ ಮಾಡಲಾಗುವುದು. |

ಸಂಖ್ಯೆ:ಗ್ರಾಅಪಂರಾ 417 ಜಿಪಸ 2020

(ಕೆ.ಎಸ್.ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1085
ಸದಸ್ಯರ ಹೆಸರು : ಶ್ರೀ ಎಂ. ಶ್ರೀನಿವಾಸ್ (ಮಂಡ್ಯ)
ಉತ್ತರಿಸಬೇಕಾದ ದಿನಾಂಕ : 23-09-2020.
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1. | ಮಂಡ್ಯ ನಗರದಲ್ಲಿರುವ ನಾಲ್ವಡಿ ಕೃಷ್ಣರಾಜೇಂದ್ರ ಕಲಾಮಂದಿರವು ದುಃಸ್ಥಿತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| 2. | ಹಾಗಿದ್ದಲ್ಲಿ, ದುಃಸ್ಥಿತಿಯಲ್ಲಿರುವ ಕಲಾಮಂದಿರದ ಪುನಃಶ್ಚೇತನ ಕಾಮಗಾರಿ ಯಾವಾಗ ಪ್ರಾರಂಭಗೊಳ್ಳುವುದು? | ಮಂಡ್ಯ ನಗರದಲ್ಲಿರುವ ನಾಲ್ವಡಿ ಕೃಷ್ಣರಾಜೇಂದ್ರ ಕಲಾಮಂದಿರಕ್ಕೆ 2019-20 ನೇ ಸಾಲಿನಲ್ಲಿ ದುರಸ್ತಿ ಕಾಮಗಾರಿಗಾಗಿ ರೂ.25.00 ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ, ಮಂಡ್ಯ ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಪ್ರಸ್ತುತ ಈ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಕಸಂಪಾ 75 ಕವಿಸ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1086 |
| ಸದಸ್ಯರ ಹೆಸರು | ಶ್ರೀನಿವಾಸ. ಎಂ (ಮಂಡ್ಯ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | 2018–19ನೇ ಸಾಲಿನಲ್ಲಿ ಮಂಡ್ಯ ವಿಧಾನಸಭಾ ಕ್ಷೇತ್ರಕ್ಕೆ 3054 ಲೆಕ್ಕ ಶೀರ್ಷಿಕೆಯಡಿ ಮಂಜೂರಾಗಿದ್ದ ರೂ.10.00 ಕೋಟಿಗಳ ಕಾಮಗಾರಿ ಪ್ರಾರಂಭವಾಗಿದ್ದು, ಈ ಪೈಕಿ ರೂ.5.82 ಕೋಟಿಗಳ ಕಾಮಗಾರಿಗೆ ಅನುಮೋದನೆ ನೀಡಿ ಉಳಿದವುಗಳನ್ನು ತಡೆಹಿಡಿದಿರಲು ಕಾರಣವೇನು; | 2018–19ನೇ ಸಾಲಿನಲ್ಲಿ ಮಂಡ್ಯ ವಿಧಾನಸಭಾ ಕ್ಷೇತ್ರಕ್ಕೆ 3054 ಲೆಕ್ಕ ಶೀರ್ಷಿಕೆಯಡಿ ಮಂಜೂರಾಗಿದ್ದ ರೂ.10.00 ಕೋಟಿಗಳ ಪೈಕಿ ರೂ.5.81 ಕೋಟಿಗಳ ಮೊತ್ತದ ಕಾಮಗಾರಿಗಳ ಪ್ರಗತಿಯನ್ನಾಧರಿಸಿ ಮುಂದುವರೆಸಲಾಗಿದೆ ಹಾಗೂ ಅನುದಾನದ ಲಭ್ಯತೆಯನ್ನಾಧರಿಸಿ ಕೆಲವೊಂದು ಕ್ಷೇತ್ರದ ಕಾಮಗಾರಿಗಳನ್ನು ತಡೆಹಿಡಿದು ಯಥಾಸ್ಥಿತಿಯಲ್ಲಿ ಮುಂದುವರೆಸಿದೆ. |
| ಆ. | ಇನ್ನುಳಿದ ಕಾಮಗಾರಿಗಳಿಗೆ ಅನುದಾನ ಬಿಡುಗಡೆಗೊಳಿಸಲು ಯಾವಾಗ ಅನುಮೋದನೆ ನೀಡಲಾಗುವುದು; | ತಡೆಹಿದಿರುವ ಕಾಮಗಾರಿಗಳನ್ನು ಆರ್ಥಿಕ ಲಭ್ಯತೆಯನ್ನಾಧರಿಸಿ ಮುಂದುವರೆಸಲು ಕ್ರಮ ಕೈಗೊಳ್ಳಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ07/24:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1087
ಉತ್ತರಿಸಬೇಕಾದ ದಿನಾಂಕ : 23.09.2020
ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ನಗರದಲ್ಲಿರುವ ಸರ್.ಎಂ. ವಿಶ್ವೇಶ್ವರಯ್ಯ ಹೊರಾಂಗಣ ಕ್ರೀಡಾಂಗಣವು ಪ್ರೇಕ್ಷಕರು ಕುಳಿತು ಕೊಳ್ಳುವ ಮೆಟ್ಟಿಲುಗಳು ಸರಿ ಇಲ್ಲದೇ ಹಾಗೂ ಮೇಲ್ಛಾವಣಿಯಿಲ್ಲದೇ ದುಸ್ಥಿತಿಯಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಈ ಜಿಲ್ಲಾ ಕೇಂದ್ರದ ಕ್ರೀಡಾಂಗಣದ ಅಭಿವೃದ್ಧಿ ಕಾಮಗಾರಿಯನ್ನು ಪ್ರಾರಂಭವಾಗುವುದು; ಕೈಗೆತ್ತಿಕೊಳ್ಳಲಾಗುವುದು? | ಮಂಡ್ಯ ಜಿಲ್ಲಾ ಕ್ರೀಡಾಂಗಣದ ಪೆವಿಲಿಯನ್ ವೀಕ್ಷಕರ ಗ್ಯಾಲರಿಯ ಸೀಟಿಂಗ್ ದುರಸ್ಥಿ, ಕ್ರೀಡಾಂಗಣದ ಸುತ್ತಲೂ ಚೈನ್ ಲಿಂಕ್ ಫೆನ್ಸಿಂಗ್, 400ಮೀ. ಅಥ್ಲೆಟಿಕ್ ಮಡ್ ಟ್ರ್ಯಾಕ್ ಪುನರ್ ನಿರ್ಮಾಣ, ಸಾರ್ವಜನಿಕರ ಶೌಚಾಲಯ ನಿರ್ಮಾಣ, ವಾಕಿಂಗ್ ಪಾತ್ ವೇ ಹಾಗೂ ಇನ್ನಿತರೆ ಅಭಿವೃದ್ಧಿ ಕಾಮಗಾರಿಗಳನ್ನು ರೂ 100.00 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ವೈಎಸ್ ಡಿ/ಇಪಿಇ/ 42/2019; ದಿನಾಂಕ: 03.12.2019ರಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ದಿನಾಂಕ: 10.03.2020ರಂದು ನಿರ್ಮಿತಿ ಕೇಂದ್ರ, ಮಂಡ್ಯ ಇವರಿಗೆ ಕಾಮಗಾರಿ ವಹಿಸಿ ಆದೇಶ ಹೊರಡಿಸಲಾಗಿರುತ್ತದೆ. ನಿರ್ಮಾಣ ಸಂಸ್ಥೆಗೆ ಈಗಾಗಲೇ ಮೊದಲನೇ ಕಂತಿನ ಅನುದಾನ ರೂ 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಕಾಮಗಾರಿಯನ್ನು ಶೀಘ್ರವಾಗಿ ಆರಂಭಿಸಲಾಗುವುದು. |

**ವೈಎಸ್ ಡಿ-/ಇಬಿಬಿ/93/2020**

**(ಸಿ. ಟಿ. ರವಿ)**
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

**ಕರ್ನಾಟಕ ವಿಧಾನ ಸಭೆ**

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1088 |
| **ಸದಸ್ಯರ ಹೆಸರು** | ಶ್ರೀ ಹೆಚ್.ಡಿ. ರೇವಣ್ಣ (ಹೊಳೆನರಸೀಪುರ) |
| **ಉತ್ತರಿಸಬೇಕಾದ ದಿನಾಂಕ** | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಹೊಳೆನರಸಿಪುರ ವಿಧಾನಸಬಾ ಕ್ಷೇತ್ರದಲ್ಲಿ 2020-21ನೇ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದ ಬಹುತೇಕ ಗ್ರಾಮೀಣ ರಸ್ತೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದ ಹಾನಿಗೊಳಗಾದ ಗ್ರಾಮೀಣ ಪ್ರದೇಶದ ವಿವರಗಳನ್ನು ವಿಪತ್ತು ನಿರ್ವಹಣೆ, ಕಂದಾಯ ಇಲಾಖೆರವರು ಕೋರಿರುವ ನಮೂನೆಯಲ್ಲಿ ವಿವರಗಳನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಮತ್ತು ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಿಂದ ಪಡೆದು ವಿಪತ್ತು ನಿರ್ವಹಣೆ, ಕಂದಾಯ ಇಲಾಖೆ ಇವರಿಗೆ ಸಲ್ಲಿಸಿ, ಅನುದಾನ ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. |
| ಆ. | ತಾಲ್ಲೂಕಿನ ಎರಡು ಬದಿಯಲ್ಲಿ ಹೇಮಾವತಿ ನಧಿ ಅಹಿಯುತ್ತಿದ್ದು, ಹಲವು ಗ್ರಾಮೀಣ ರಸ್ತೆಗಳು ಮುಳುಗಡೆಗೊಂಡು ಸಂಪೂರ್ಣ ಹಾಳಾಗಿರುವ ರಸ್ತೆಗಳನ್ನು ಮರು ಸ್ಥಾಪಿಸಲು ಯಾವ ಕ್ರಮ ತೆಗೆದುಕೊಳ್ಳಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | |
| ಇ. | ಸದರಿ ಕ್ಷೇತ್ರದಲ್ಲಿನ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಉದ್ಯಮವನ್ನೇ ಅವನಂಭಿಸಿದ್ದು, ರೈತರು ಬೆಳೆದ ದವಸ ದಾನ್ಯವನ್ನು ಮಾರುಕಟ್ಟೆಗೆ ಕೊಂಡೊಯ್ಯಲು ಗ್ರಾಮೀಣ ರಸ್ತೆಗಳು ಬಹು ಮುಖ್ಯವಾದುದರಿಂದ, ಗ್ರಾಮೀಣ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಹೆಚ್ಚು ಅನುದಾನ ಒದಗಿಸುವುದು ಅವಶ್ಯಕ ವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಅನುದಾನ ಒದಗಿಸಲು ತೆಗೆದುಕೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br><br>ಮಳೆಯಿಂದ ಹಾನಿಗೊಳಗಾದ ಗ್ರಾಮೀಣ ಪ್ರದೇಶಗಳ ರಸ್ತೆ ಕಾಮಗಾರಿಗಳನ್ನು ದುರಸ್ತಿ ಪಡಿಸಲು ಅನುದಾನವನ್ನು ಮಂಜೂರು ಮಾಡುವಂತೆ ವಿಪತ್ತು ನಿರ್ವಹಣೆ, ಕಂದಾಯ ಇಲಾಖೆಗೆ ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಅನುದಾನ ಮಂಜೂರು ಮಾಡಿದ್ದಲ್ಲಿ ಆದ್ಯತೆಯ ಮೇರೆಗೆ ಈ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮಳೆಯಿಂದ ಹಾನಿಗೊಳಗಾದ ರಸ್ತೆ ಕಾಮಗಾರಿಗಳನ್ನು ದುರಸ್ತಿ ಪಡಿಸಲು ಅನುದಾನ ಮಂಜೂರು ಮಾಡಲು ಕ್ರಮ ಕೈಗೊಳ್ಳಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ:01/130:ಆರ್‌ಆರ್‌ಸಿ:2020

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1093
ಸದಸ್ಯರ ಹೆಸರು : ಶ್ರೀ ಶಿವಶಂಕರ ರೆಡ್ಡಿ ಎನ್.ಹೆಚ್. (ಗೌರಿಬಿದನೂರು)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗೌರಿಬಿದನೂರು ತಾಲ್ಲೂಕು ಅಲ್ಲಿಪುರ ಗ್ರಾಮ ಪಂಚಾಯಿತಿಯಲ್ಲಿ 10.000 ಜನ ಸಂಖ್ಯೆಯಿರುವುದು ಸರ್ಕಾರದ ಗಮನಕ್ಕೆ ಇದೆಯೇ; | ಗೌರಿಬಿದನೂರು ತಾಲೂಕು, ಅಲ್ಲಿಪುರ ಗ್ರಾಮ ಪಂಚಾಯತಿಯು 2011 ರ ಜನಗಣತಿಯ ಅನುಸಾರ 10,923 ಜನಸಂಖ್ಯೆ ಹೊಂದಿರುವುದು ಸರ್ಕಾರದ ಗಮನದಲ್ಲಿದೆ. |
| (ಆ) | ಹಾಗಾದರೆ ಈ ಗ್ರಾಮ ಪಂಚಾಯಿತಿಯನ್ನು ಇನ್ನೂ ಅಭಿವೃದ್ಧಿಪಡಿಸಲು ಮೇಲ್ದರ್ಜೆಗೇರಿಸಿ ಪಟ್ಟಣ ಪಂಚಾಯಿತಿಯನ್ನಾಗಿ ಮಾಡಲು ಸರ್ಕಾರ ಕ್ರಮವಹಿಸುವುದೇ? (ವಿವರ ನೀಡುವುದು) | ಗೌರಿಬಿದನೂರು ತಾಲೂಕು, ಅಲ್ಲಿಪುರ ಗ್ರಾಮ ಪಂಚಾಯತಿಯು 2011 ರ ಜನಗಣತಿಯ ಅನುಸಾರ 10,923 ಜನಸಂಖ್ಯೆ ಹೊಂದಿದ್ದು, ಪಟ್ಟಣ ಪಂಚಾಯತಿಯನ್ನಾಗಿ ಮೇಲ್ದರ್ಜೆಗೇರಿಸಲು ಚಿಕ್ಕಬಳ್ಳಾಪುರ ಜಿಲ್ಲಾಧಿಕಾರಿಯವರಿಂದ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. ದಿನಾಂಕ:19/03/2015 ರಂದು ನಡೆದ ಸಚಿವ ಸಂಪುಟ ಸಭೆಯ ತೀರ್ಮಾನದಂತೆ 2011 ರ ಜನಗಣತಿಯನ್ವಯ 15,000 ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿರುವ ಗ್ರಾಮ ಪಂಚಾಯತಿಗಳನ್ನು ಮಾತ್ರ ಪಟ್ಟಣ ಪಂಚಾಯತಿಗಳನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮ ವಹಿಸಲಾಗುತ್ತಿದೆ ಎಂದು ನಗರಾಭಿವೃದ್ಧಿ ಇಲಾಖೆಯು ತಿಳಿಸಿರುತ್ತದೆ. |

ಸಂ. ಗ್ರಾಅಪ 709 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.
ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1094

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಶಿವಶಂಕರರೆಡ್ಡಿ ಎನ್.ಹೆಚ್ (ಗೌರಿಬಿದನೂರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಗೌರಿಬಿದನೂರು ತಾಲ್ಲೂಕಿನಲ್ಲಿ ಎಷ್ಟು ಅಂಗನವಾಡಿ ಕೇಂದ್ರಗಳಿವೆ; | ಗೌರಿಬಿದನೂರು ತಾಲ್ಲೂಕಿನಲ್ಲಿ 351 ಅಂಗನವಾಡಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ. |
| ಆ. | ಹೊಸದಾಗಿ ಅಂಗನವಾಡಿ ಕೇಂದ್ರಗಳನ್ನು ಪ್ರಾರಂಭಿಸಲು ಪ್ರಸ್ತಾವನೆಗಳು ಬಂದಿವೆಯೇ; | ಪ್ರಸ್ತಾವನೆಗಳು ಬಂದಿರುವುದಿಲ್ಲ. |
| ಇ. | ಬಂದಿದ್ದರೆ, ಅವು ಯಾವುವು (ಮಾಹಿತಿ ನೀಡುವುದು) | -ಅನ್ವಯಿಸುವುದಿಲ್ಲ- |
| ಈ | ಎಷ್ಟು ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯಕರ್ತೆಯರ ಹುದ್ದೆಗಳು ಖಾಲಿ ಇವೆ ಅವುಗಳನ್ನು ತುಂಬಲು ಕ್ರಮವಹಿಸಲಾಗುವುದೇ; | 06 ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳು ಖಾಲಿ ಇದ್ದು, ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. |
| ಉ | ಇದುವರೆವಿಗೂ ಎಷ್ಟು ಸ್ತ್ರೀಶಕ್ತಿ ಸಂಘಗಳಿಗೆ ಸಹಾಯಧನ ಒದಗಿಸಲಾಗಿದೆ; ಹಾಗೂ ಬಾಕಿ ಎಷ್ಟು ಸಂಘಗಳಿಗೆ ಬೇಡಿಕೆ ಇದೆ? (ವಿವರ ನೀಡುವುದು) | ಗೌರಿಬಿದನೂರು ತಾಲ್ಲೂಕಿನಲ್ಲಿ ಒಟ್ಟು 1257 ಸ್ತ್ರೀಶಕ್ತಿ ಸಂಘಗಳಿದ್ದು, ಅವುಗಳಲ್ಲಿ 1208 ಸ್ತ್ರೀಶಕ್ತಿ ಸಂಘಗಳಿಗೆ ಹಂತ ಹಂತವಾಗಿ ಸುತ್ತುನಿಧಿ ಒದಗಿಸಲಾಗಿದೆ. 49 ಸ್ತ್ರೀಶಕ್ತಿ ಸಂಘಗಳಿಗೆ ಸುತ್ತುನಿಧಿ ನೀಡಲು ಬಾಕಿ ಇರುತ್ತದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 168 ಐಸಿಡಿ 2020

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ವೆಂಕಟರಾವ್ ನಾಡಗೌಡ (ಸಿಂಧನೂರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1095

ಉತ್ತರಿಸಬೇಕಾದ ದಿನಾಂಕ : 23.09.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ನಗರದಲ್ಲಿರುವ ಸರ್ಕಾರಿ ಪಶುವೈದ್ಯಕೀಯ ಕಾಲೇಜಿಗೆ ಮೂಲಭೂತ ಸೌಕರ್ಯಗಳಾದ ಕಾಮಗಾರಿಗಳಾದ ಹಾಸನದ ಪಶುವೈದ್ಯಕೀಯ ಕಾಲೇಜಿನ ಆವರಣದಲ್ಲಿ ಬಾಲಕಿಯರ ವಸತಿ ನಿಲಯದ 2ನೇ ಮಹಡಿ ನಿರ್ಮಾಣ, ಆಡಿಟೋರಿಯಂ ಕಟ್ಟಡ ನಿರ್ಮಾಣ, ಸಂಪರ್ಕ ರಸ್ತೆಗಳು, ಬಿ ಮತ್ತು ಸಿ ಮಾದರಿ ವಸತಿ ಗೃಹಗಳ ನಿರ್ಮಾಣ, ಜಾನುವಾರು ಶವಾಗಾರ ಕಟ್ಟಡ ನಿರ್ಮಾಣ, ಜಾನುವಾರು ಆಸ್ಪತ್ರೆ ಕಟ್ಟಡ ನಿರ್ಮಾಣ ಹಾಗೂ ಶೆಡ್‌ಗಳ ನಿರ್ಮಾಣ ಕಾಮಗಾರಿಗಳಿಗಾಗಿ ರೂ.23.00 ಕೋಟಿಗಳ ಮೊತ್ತದ ಅಂದಾಜಿನ ಪ್ರಸ್ತಾವನೆಯನ್ನು ಮುಖ್ಯ ಇಂಜನಿಯರ್, ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನಾ ಇಲಾಖೆ, ಬೆಂಗಳೂರು ರವರಿಗೆ ಪತ್ರ ಸಂಖ್ಯೆ : ಮು.ಇಂ/ಸಂಕದ/ಮೇಘ/ ೩೦1/ 2018-19 ದಿನಾಂಕ:11-9-2018 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿ ಅನುದಾನವನ್ನು ಬಿಡುಗಡೆಗೊಳಿಸಲು ಕೋರಿರುವ ಪ್ರಸ್ತಾವನೆಯಂತೆ ಅವಶ್ಯಕ ಅನುದಾನವನ್ನು ಬಿಡುಗಡೆಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ವ್ಯಾಪ್ತಿಗೊಳಪಡುವ ಹಾಸನದ ಪಶುವೈದ್ಯಕೀಯ ಕಾಲೇಜಿಗೆ ಮೂಲಭೂತ ಸೌಕರ್ಯಗಳಾದ ಬಾಲಕಿಯರ ವಸತಿ ನಿಲಯದ 2ನೇ ಮಹಡಿ ನಿರ್ಮಾಣ, ಆಡಿಟೋರಿಯಂ ಕಟ್ಟಡ ನಿರ್ಮಾಣ, ಸಂಪರ್ಕ ರಸ್ತೆಗಳು ಬಿ ಮತ್ತು ಸಿ ಮಾದರಿ ವಸತಿ ಗೃಹಗಳ ನಿರ್ಮಾಣ, ಜಾನುವಾರು ಶವಾಗಾರ ಕಟ್ಟಡ ನಿರ್ಮಾಣ, ಜಾನುವಾರು ಆಸ್ಪತ್ರೆ ಕಟ್ಟಡ ನಿರ್ಮಾಣ ಹಾಗೂ ಶೆಡ್‌ಗಳ ನಿರ್ಮಾಣ ಕಾಮಗಾರಿಗಳಿಗಾಗಿ ಮುಖ್ಯ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರು ರೂ. 23.00 ಕೋಟಿಗಳ ಮೊತ್ತದ ಅಂದಾಜಿನ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು ಪರಿಶೀಲಿಸಲಾಗುತ್ತಿದ್ದು, ಈ ಕುರಿತು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ.<br>ಸದರಿ ಪ್ರಸ್ತಾವನೆಗೆ ಸಂಬಂಧಿಸಿದಂತೆ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿ/ದಾಖಲೆಗಳನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇಲ್ಲಿಂದ ಪಡೆಯಲು ಕ್ರಮವಹಿಸಲಾಗುತ್ತಿದೆ. |
| ಆ | ಹಾಸನ ತಾಲ್ಲೂಕಿನ ಸರ್ಕಾರಿ ಪಶುವೈದ್ಯಕೀಯ ಕಾಲೇಜಿನ ಹಂತ-4ರ ಕಾಮಗಾರಿಗಳಿಗಾಗಿ ರೂ.23.00 ಕೋಟಿಗಳ ಅನುದಾನವನ್ನು ಬಿಡುಗಡೆಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; ಹಾಗಿದ್ದಲ್ಲಿ ಯಾವ ಕಾಲಮಿತಿಯೊಳಗೆ ಅನುದಾನವನ್ನು ಬಿಡುಗಡೆಗೊಳಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು). | ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಈ ಕುರಿತು ಆದ್ಯತೆಯ ಮೇರೆಗೆ ಕ್ರಮಕೈಗೊಳ್ಳಲಾಗುವುದು. |

ಪಸಂಮೀ ಇ-230 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | – 1105 |
| ಉತ್ತರಿಸಬೇಕಾದ ದಿನಾಂಕ | – 23-09-2020 |
| ಸದಸ್ಯರ ಹೆಸರು | – ಶ್ರೀ. ಅಶ್ವಿನ್ ಕುಮಾರ್ ಎಂ. (ಟಿ.ನರಸೀಪುರ) |
| ಉತ್ತರಿಸುವ ಸಚಿವರು | – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು. |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ 03 ವರ್ಷಗಳಿಂದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯಗಳಿಗಾಗಿ ಸರ್ಕಾರದಿಂದ ನೀಡಿರುವ ಅನುದಾನವೆಷ್ಟು;</td><td>ಕಳೆದ 03 ವರ್ಷಗಳಿಂದ ಅಲ್ಪಸಂಖ್ಯಾತ ಕಲ್ಯಾಣ ಇಲಾಖೆಯಿಂದ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯಗಳಿಗಾಗಿ ಸರ್ಕಾರದಿಂದ ನೀಡಿರುವ ಅನುದಾದ ವಿವರಗಳು ಈ ಕೆಳಕಂಡಂತಿರುತ್ತದೆ.
<table>
<tr><th>ವರ್ಷ</th><th>ಬಿಡುಗಡೆ ಮಾಡಿರುವ ಅನುದಾನ (ರೂ.ಕೋಟಿಗಳಲ್ಲಿ)</th></tr>
<tr><td>2017-18</td><td>400.00</td></tr>
<tr><td>2018-19</td><td>692.91</td></tr>
<tr><td>2019-20</td><td>102.18</td></tr>
</table></td></tr>
<tr><td>ಆ)</td><td>ಕಳೆದ 03 ವರ್ಷಗಳಿಂದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯಗಳಿಗಾಗಿ ನೀಡಿರುವ ಅನುದಾನದಲ್ಲಿ ಖರ್ಚಾದ ಅನುದಾನವೆಷ್ಟು;</td><td>ಕಳೆದ 03 ವರ್ಷಗಳಿಂದ ಅಲ್ಪಸಂಖ್ಯಾತ ಕಲ್ಯಾಣ ಇಲಾಖೆಯಿಂದ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯಗಳಿಗಾಗಿ ನೀಡಿರುವ ಅನುದಾನದಲ್ಲಿ ಖರ್ಚಾದ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತದೆ.
<table>
<tr><th>ವರ್ಷ</th><th>ಖರ್ಚಾದ ಅನುದಾನ (ರೂ. ಕೋಟಿಗಳಲ್ಲಿ)</th></tr>
<tr><td>2017-18</td><td>361.00</td></tr>
<tr><td>2018-19</td><td>365.73</td></tr>
<tr><td>2019-20</td><td>353.05</td></tr>
</table></td></tr>
<tr><td>ಇ)</td><td>ಇಲಾಖೆಯಿಂದ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯಗಳಿಗಾಗಿ ರಾಜ್ಯ ಸರ್ಕಾರದಿಂದ ನೀಡಿರುವ ಅನುದಾನದಲ್ಲಿ ಕೈಗೊಳ್ಳಲಾಗಿರುವ ಕಾಮಗಾರಿಗಳು ಯಾವುವು? (ಕಾಮಗಾರಿಗಳವಾರು, ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು)</td><td>ಅಲ್ಪಸಂಖ್ಯಾತ ಕಲ್ಯಾಣ ಇಲಾಖೆಯಿಂದ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯಗಳಿಗಾಗಿ ರಾಜ್ಯ ಸರ್ಕಾರದಿಂದ ನೀಡಿರುವ ಅನುದಾನದಲ್ಲಿ ಕೈಗೊಳ್ಳಲಾಗಿರುವ ಕಾಮಗಾರಿಗಳು ಈ ಕೆಳಕಂಡಂತಿರುತ್ತದೆ.<br>1. ರಸ್ತೆ ಮತ್ತು ಚರಂಡಿ/ಒಳ ಚರಂಡಿ ನಿರ್ವಹಣೆ.<br>2. ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸುವುದು.<br>3. ಅಗತ್ಯವಿದ್ದಲ್ಲಿ ಕೊಳವೆ ಬಾವಿ ಕೊರೆಯುವುದು.<br>4. ಅಗತ್ಯವಿದ್ದಲ್ಲಿ ಸಾಮೂಹಿಕ ಶೌಚಾಲಯಗಳ ನಿರ್ಮಾಣ (ನಿರ್ಮಾಣದ ನಂತರ ನಿರ್ವಹಣೆ ಸ್ಥಳೀಯ ಸಂಸ್ಥೆಗಳ ಸುಪರ್ದಿಗೆ ನೀಡುವುದು.)</td></tr>
</table>

ಸಂಖ್ಯೆ:MWD 95 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1110

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ದಕ್ಷಿಣ ಕ್ಷೇತ್ರದಲ್ಲಿರುವ ಸರ್ಕಾರಿ ಕ್ರೀಡಾಂಗಣಗಳ ಸಂಖ್ಯೆ ಎಷ್ಟು (ವಿವರವಾದ ಮಾಹಿತಿಯನ್ನು ಒದಗಿಸುವುದು); | ಬೀದರ್ ದಕ್ಷಿಣ ಕ್ಷೇತ್ರದಲ್ಲಿ ಕರ್ನಾಟಕ ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಕ್ರೀಡಾಂಗಣ ಇದೆ. ಸದರಿ ಕ್ರೀಡಾಂಗಣದಲ್ಲಿ 400ಮೀ. ಅಥ್ಲೆಟಿಕ್ ಟ್ರ್ಯಾಕ್, ವಿವಿಧ ಕ್ರೀಡಾ ಅಂಕಣಗಳ ಸೌಲಭ್ಯ ಕಲ್ಪಿಸಲಾಗಿದೆ. ಮನ್ನಳ್ಳಿ ಗ್ರಾಮದ ಮಂಡಲ ಕ್ರೀಡಾಂಗಣದಲ್ಲಿ ಪ್ರಾದೇಶಿಕ ಯುವ ಕೇಂದ್ರ ಇದೆ. |
| ಆ) | ಈ ಕ್ಷೇತ್ರದಲ್ಲಿರುವ ಕ್ರೀಡಾಂಗಣಗಳನ್ನು ಅಭಿವೃದ್ಧಿಪಡಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವ ಕ್ರೀಡಾಂಗಣವನ್ನು ಅಭಿವೃದ್ಧಿಪಡಿಸಲಾಗುವುದು (ಮಾಹಿತಿ ಒದಗಿಸುವುದು); | ಬೀದರ್ ದಕ್ಷಿಣ ಮತಕ್ಷೇತ್ರದಲ್ಲಿ ಯಾವುದೇ ಕ್ರೀಡಾಂಗಣ ಅಭಿವೃದ್ಧಿಪಡಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |
| ಇ) | ಸದರಿ ಕ್ಷೇತ್ರದಲ್ಲಿ ಹೊಸ ಕ್ರೀಡಾಂಗಣಗಳನ್ನು ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಬೀದರ್ ದಕ್ಷಿಣ ಮತಕ್ಷೇತ್ರದಲ್ಲಿ ಯಾವುದೇ ಹೊಸ ಕ್ರೀಡಾಂಗಣ ನಿರ್ಮಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಹೊಸ ಕ್ರೀಡಾಂಗಣವನ್ನು ಯಾವ ಸ್ಥಳದಲ್ಲಿ ನಿರ್ಮಿಸಲು ಉದ್ದೇಶಿಸಲಾಗಿದೆ ಹಾಗೂ ಸದರಿ ಕ್ರೀಡಾಂಗಣಗಳಲ್ಲಿ ಯಾವ ಕ್ರೀಡೆಗಳಿಗೆ ಅವಕಾಶ ಕಲ್ಪಿಸಲಾಗುವುದು; | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಉ) | ಸದರಿ ಕ್ಷೇತ್ರದ ವಿವಿಧ ಗ್ರಾಮಗಳಲ್ಲಿ ವ್ಯಾಯಾಮ ಶಾಲೆಗಳನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ ಯಾವ ಗ್ರಾಮಗಳಲ್ಲಿ ವ್ಯಾಯಾಮ ಶಾಲೆಗಳನ್ನು ತೆರೆಯಲು ಉದ್ದೇಶಿಸಲಾಗಿದೆ? | ಗ್ರಾಮ ಮಟ್ಟದಲ್ಲಿ ವ್ಯಾಯಾಮ ಶಾಲೆಗಳನ್ನು ತೆರೆಯುವ ಯಾವುದೇ ಕಾರ್ಯಕ್ರಮ ಪ್ರಸ್ತುತ ಇರುವುದಿಲ್ಲ. |

ವೈಎಸ್ ಡಿ-/ಇಬಿಬಿ/88/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1111

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಧಾರವಾಡ ತಾಲ್ಲೂಕಿನಲ್ಲಿ ಕ್ರೀಡೆಗಳನ್ನು ಉತ್ತೇಜಿಸಲು ಗ್ರಾಮೀಣ ಭಾಗದಲ್ಲಿ ಕ್ರೀಡಾ ಸಂಕೀರ್ಣ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ. | ಇಲ್ಲ. |
| 2 | ಹಾಗಿದ್ದಲ್ಲಿ ಕ್ರೀಡಾ ಸಂಕೀರ್ಣ ನಿರ್ಮಾಣ ಮಾಡಲು ಯಾವುದಾದರೂ ಸ್ಥಳ ಗುರುತಿಸಲಾಗಿದೆಯೇ. | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| 3 | ಗುರುತಿಸಲಾಗಿದ್ದರೆ, ಈ ಕಾಮಗಾರಿಗೆ ಪ್ರಸಕ್ತ ಸಾಲಿನಲ್ಲಿ ಮೀಸಲಿಟ್ಟ ಹಾಗೂ ಬಿಡುಗಡೆಯಾದ ಅನುದಾನವೆಷ್ಟು? | |

ವೈಎಸ್ ಡಿ-/ಇಬಿಬಿ/87/2020

(ಸಿ. ಟಿ. ರವಿ)
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1115 |
| ಸದಸ್ಯರ ಹೆಸರು | : | ಶ್ರೀ. ಶಿವಕುಮಾರ್.ಡಿ.ಕೆ (ಕನಕಪುರ) |
| ಉತ್ತರಿಸುವ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಹೊಸದಾಗಿ ಪಶುವೈದ್ಯಕೀಯ ಆಸ್ಪತ್ರೆಗಳನ್ನು ಪ್ರಾರಂಭಿಸುವ ಯೋಜನೆ ಸರ್ಕಾರದ ಮುಂದಿದೆಯೇ; | ಪ್ರಸಕ್ತ ಸಾಲಿನಲ್ಲಿ ಹೊಸ ಪಶುವೈದ್ಯಕೀಯ ಆಸ್ಪತ್ರೆಗಳನ್ನು ಪ್ರಾರಂಭಿಸುವ ಯಾವುದೇ ಯೋಜನೆ ಸರ್ಕಾರದ ಮುಂದಿರುವುದಿಲ್ಲ. |
| ಆ) | ಇದ್ದಲ್ಲಿ, ಯಾವಾಗ ಪ್ರಾರಂಭ ಮಾಡಲಾಗುವುದು ಹಾಗೂ ಯಾವ ಸ್ಥಳಗಳಲ್ಲಿ ಪ್ರಾರಂಭಿಸಲಾಗುವುದು (ಸಂಪೂರ್ಣ ವಿವರ ನೀಡುವುದು)? | ಅನ್ವಯಿಸುವುದಿಲ್ಲ. |

ಸಂ: ಪಸಂಮೀ ಇ-145 ಪಸಸೇ 2020

(ಪ್ರಭು. ಬಿ ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1123
ಸದಸ್ಯರ ಹೆಸರು : ಶ್ರೀ ಶರಣಬಸಪ್ಪ ಗೌಡ ದರ್ಶನಾಪುರ್ (ಶಹಾಪುರ)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಎಷ್ಟು ಗ್ರಾಮ ಪಂಚಾಯಿತಿಗಳಿಗೆ ಆಡಳಿತ ಸಮಿತಿ ಸದಸ್ಯರನ್ನು ನೇಮಿಸಲಾಗಿದೆ. | ರಾಜ್ಯದ ಗ್ರಾಮ ಪಂಚಾಯಿತಿಗಳಿಗೆ ಆಡಳಿತ ಸಮಿತಿ ಸದಸ್ಯರನ್ನು ನೇಮಿಸಿರುವುದಿಲ್ಲ. |
| (ಆ) | ಸದರಿ ಆಡಳಿತ ಸಮಿತಿ ಸದಸ್ಯರನ್ನು ಯಾವ ಆಧಾರದಲ್ಲಿ ನೇಮಿಸಲಾಗಿದೆ? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಸಂ. ಗ್ರಾಅಪ 707 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ



ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1126

ಮಾನ್ಯ ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್. (ಚಾಮರಾಜ)

ವಿಷಯ : 'ಯಾತ್ರಿ ನಿವಾಸಗಳು'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜ ವಿಧಾನಸಭಾ ಕ್ಷೇತ್ರದಲ್ಲಿ ಪ್ರವಾಸೋದ್ಯಮ ಇಲಾಖಾ ಅಡಿಯಲ್ಲಿ ಎಷ್ಟು ಯಾತ್ರಿ ನಿವಾಸಗಳಿವೆ; (ವಿವರ ಒದಗಿಸುವುದು) | ಚಾಮರಾಜ ವಿಧಾನಸಭಾ ಕ್ಷೇತ್ರದಲ್ಲಿ ಪ್ರವಾಸೋದ್ಯಮ ಇಲಾಖಾ ಅಡಿಯಲ್ಲಿ ಯಾವುದೇ ಯಾತ್ರಿ ನಿವಾಸಗಳು ಇರುವುದಿಲ್ಲ. |
| ಆ) | ಇಂತಹ, ಯಾತ್ರಿ ನಿವಾಸಗಳ ಅಭಿವೃದ್ಧಿಗೆ ಕಳೆದ 3 ವರ್ಷಗಳಲ್ಲಿ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; (ವಿವರ ಒದಗಿಸುವುದು) | ಅನ್ವಯಿಸುವುದಿಲ್ಲ. |
| ಇ) | ಚಾಮರಾಜ ವಿಧಾನಸಭಾ ಕ್ಷೇತ್ರದಲ್ಲಿ ಇಲಾಖಾ ವತಿಯಿಂದ ಹೊಸದಾಗಿ ಯಾತ್ರಿ ನಿವಾಸಗಳನ್ನು ನಿರ್ಮಿಸುವ ಪ್ರಸ್ತಾವನೆಗಳು ಸರ್ಕಾರದ ಮುಂದಿದೆಯೇ? (ವಿವರ ಒದಗಿಸುವುದು) | ಪ್ರಸ್ತುತ ಇಲಾಖೆಯ ಮುಂದೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ: ಟಿಓಆರ್ 175 ಟಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1232

ಮಾನ್ಯ ವಿಧಾನಸಭೆ ಸದಸ್ಯರು : ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ)

ವಿಷಯ : ಪ್ರತ್ಯೇಕ ಪ್ರವಾಸೋದ್ಯಮ ನೀತಿ

ಉತ್ತರಿಸಬೇಕಾದ ದಿನಾಂಕ: 23-09-2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗೆ ಸಾಕಷ್ಟು ಅವಕಾಶಗಳು ಇದ್ದು ಸರ್ಕಾರದಿಂದ ಗುರುತಿಸಲಾದ ಪ್ರವಾಸಿ ಕೇಂದ್ರಗಳು ಎಷ್ಟು; (ವಿವರ ನೀಡುವುದು) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 2015-20ರ ಪ್ರವಾಸೋದ್ಯಮ ನೀತಿ ಯಡಿಯಲ್ಲಿ ಒಟ್ಟು 16 ಪ್ರವಾಸಿ ತಾಣಗಳನ್ನು ಗುರುತಿಸಲಾಗಿದೆ. ವಿವರ ಕೆಳಗಿನಂತಿದೆ:-<br>ಬೆಳ್ತಂಗಡಿ: ಧರ್ಮಸ್ಥಳ, ವೇಣೂರು, ಜಮಾಲ್ಬಾದ್ ಕೋಟೆ (ನಸಸಿಮಘಡ್)<br>ಮಂಗಳೂರು: ಸುರತ್ಕಲ್, ಪಣಂಬೂರು, ಉಲ್ಲಾಳ, ಸೋಮೇಶ್ವರ, ಕಟೀಲು, ಮೂಡಬಿದ್ರೆ, ತಣ್ಣೀರುಬಾವಿ, ಪಿಲಿಕುಳ ನಿಸರ್ಗಧಾಮ,<br>ಪುತ್ತೂರು: ಬೇಂದ್ರೆತೀರ್ಥ, ಶಿರಾಡಿ, ಉಪ್ಪಿನಂಗಡಿ, ಮಹಾಲಿಂಗೇಶ್ವರ ದೇವಸ್ಥಾನ<br>ಸುಳ್ಯ: ಕುಕ್ಕೆ ಸುಬ್ರಮಣ್ಯ ದೇವಸ್ಥಾನ |
| ಆ) | ಈ ಕೇಂದ್ರಗಳ ಅಭಿವೃದ್ಧಿಗೆ ಸರ್ಕಾರದಿಂದ ವಿಶೇಷ ಅನುದಾನ ನೀಡುವ ಬಗ್ಗೆ ಸರ್ಕಾರ ತೀರ್ಮಾನಿಸಿದೆಯೇ; | ಸದರಿ ಕೇಂದ್ರಗಳಿಗೆ ವಿಶೇಷ ಅನುದಾನ ನೀಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಕರಾವಳಿ ಪ್ರದೇಶಕ್ಕೆ ಪ್ರತ್ಯೇಕ ಪ್ರವಾಸೋದ್ಯಮ ನೀತಿಯನ್ನು ರಚಿಸುವ ಮೂಲಕ ಪ್ರವಾಸೋದ್ಯಮ ಅಭಿವೃದ್ಧಿಗೆ ಹೆಚ್ಚಿನ ಪ್ರೋತ್ಸಾಹ ನೀಡುವ ಉದ್ದೇಶ ಹೊಂದಿದೆಯೇ? (ವಿವರ ನೀಡುವುದು) | ರಾಜ್ಯದ ಕರಾವಳಿ ಪ್ರದೇಶವು ಪ್ರವಾಸಿಗರನ್ನು ಅಕರ್ಷಿಸುವ ಕೇಂದ್ರವಾಗಿದ್ದು,ಇದನ್ನು ಸಮಗ್ರವಾಗಿ ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ 2020-25ನೇ ಸಾಲಿನ ಪ್ರವಾಸೋದ್ಯಮ ನೀತಿಯಲ್ಲಿ ಆದ್ಯತೆ ನೀಡಲಾಗಿದೆ.ಕೇಂದ್ರಸರ್ಕಾರದ 'ಸ್ವದೇಶಿ ದರ್ಶನ ' ಯೋಜನೆಯಡಿ 'ಕೋಸ್ಟಲ್ ಸರ್ಕ್ಯೂಟ್ ಯೋಜನೆ ಸಿದ್ಧಪಡಿಸಿ ಸಲ್ಲಿಸಲಾಗಿದೆ.ಕರಾವಳಿ ಪ್ರದೇಶವೂ ಸೇರಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿನ ಪ್ರವಾಸಿ ತಾಣಗಳನ್ನುಹಂತ ಹಂತವಾಗಿ ಅಭಿವೃದ್ಧಿಗೊಳಿಸುವ ಉದ್ದೇಶ ಹೊಂದಲಾಗಿದೆ. |

ಕಡತ ಸಂಖ್ಯೆ: ಟಿಓಆರ್ 182 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

<u>ಕರ್ನಾಟಕ ವಿಧಾನ ಸಭೆ</u>

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1233 |
| **ಸದಸ್ಯರ ಹೆಸರು** | ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ) |
| **ಉತ್ತರಿಸಬೇಕಾದ ದಿನಾಂಕ** | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಯಾದಗಿರಿ ಜಿಲ್ಲೆಯ ಶಹಾಪುರ ತಾಲ್ಲೂಕಿನ ದೋರನಹಳ್ಳಿ ಗ್ರಾಮದಲ್ಲಿ ಮುಲಭೂತ ಸೌಕರ್ಯಗಳಿಲ್ಲದೇ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಆದಾಗ್ಯೂ ಗ್ರಾಮ ಪಂಚಾಯತಿ, ತಾಲ್ಲುಕು ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿಗಳ ಕಾರ್ಯವ್ಯಾಪ್ತಿಗೆ ಸಂಬಂಧಪಟ್ಟಂತೆ ಅಭಿವೃದ್ಧಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| ಆ. | ಬಂದಿದ್ದಲ್ಲಿ ಈ ಗ್ರಾಮಕ್ಕೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? | 2006-07ನೇ ಸಾಲಿನ ಸುವರ್ಣ ಗ್ರಾಮೋದಯ ಯೋಜನೆಯ 5ನೇ ಹಂತದಡಿ ಯಾದಗಿರಿ ಜಿಲ್ಲೆ, ಶಹಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ದೋರನಹಳ್ಳಿ ಗ್ರಾಮವನ್ನು ಆಯ್ಕೆ ಮಾಡಿ ನಿಗಧಿಪಡಿಸಿದ ಅನುದಾನ ಬಿಡುಗಡೆ ಮಾಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆ. ಪ್ರಸ್ತುತ ಯೋಜನೆಯು ಪೂರ್ಣಗೊಂಡಿದೆ.<br><br>ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಕುರಿತ ಪ್ರಸ್ತಾವನೆಗಳು ಸರ್ಕಾರಕ್ಕೆ ಬಂದಲ್ಲಿ ಈ ಬಗ್ಗೆ ಪರಿಶೀಲಿಸಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ07/01/131:ಆರ್‌ಆರ್‌ಸಿ:2020

**(ಕೆ.ಎಸ್.ಈಶ್ವರಪ್ಪ)**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1235

ಸದಸ್ಯರ ಹೆಸರು : ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಯಾದಗಿರಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ವಡಗೇರಾ ತಾಲ್ಲೂಕು ಘೋಷಣೆಯಾಗಿ 4 ವರ್ಷಗಳು ಕಳೆದರೂ ತಾಲ್ಲೂಕು ಕೇಂದ್ರಕ್ಕೆ ಬಸ್ ಘಟಕ ನಿರ್ಮಾಣವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಯಾದಗಿರಿ ವಿಧಾನ ಸಭಾ ಕ್ಷೇತ್ರದ ವಡಗೇರಾ ನೂತನ ತಾಲೂಕು ಕೇಂದ್ರವಾಗಿದ್ದು, ಸಂಸ್ಥೆಯ ಸುತ್ತೋಲೆ ಸಂಖ್ಯೆ 322/2015, ದಿನಾಂಕ 31.07.2015ರ ಮಾರ್ಗಸೂಚಿಗಳ ಪ್ರಕಾರ, ತಾಲೂಕು ಕೇಂದ್ರದಲ್ಲಿ ಬಸ್ ಘಟಕ ನಿರ್ಮಿಸಲು ಕನಿಷ್ಠ 75 ಅನುಸೂಚಿಗಳಿರಬೇಕೆಂಬ ನಿರ್ದೇಶನವಿರುತ್ತದೆ. ಅಲ್ಲದೇ, ತಾಲ್ಲೂಕು ಕೇಂದ್ರದಿಂದ 40ರಿಂದ 50 ಕಿ.ಮೀ ಅಂತರದಲ್ಲಿ ಘಟಕಗಳಿದ್ದು, ಆ ಘಟಕಗಳಲ್ಲಿ 125ರಿಂದ 150 ಅನುಸೂಚಿಗಳಿದ್ದಾಗ ಮಾತ್ರ, ಕನಿಷ್ಠ 50 ಅನುಸೂಚಿಗಳೊಂದಿಗೆ ಪಕ್ಕದ ತಾಲೂಕು ಕೇಂದ್ರದಲ್ಲಿ ಹೊಸ ಬಸ್ ಘಟಕ ಪ್ರಾರಂಭಿಸಬಹುದಾರುತ್ತದೆ.<br><br>ಪ್ರಸ್ತುತ ವಡಗೇರಾ ತಾಲ್ಲೂಕು ಕೇಂದ್ರದಿಂದ 20 ಕಿ.ಮೀ. ಅಂತರದಲ್ಲಿ ಯಾದಗಿರಿ ಘಟಕ ಮತ್ತು 40 ಕಿ.ಮೀ. ಅಂತರದಲ್ಲಿ ಶಹಾಪೂರ ಘಟಕಗಳಿದ್ದು, ಪ್ರಸ್ತುತ ಎರಡು ಬಸ್ ಘಟಕಗಳಲ್ಲಿ ಅನುಕ್ರಮವಾಗಿ 72 ಮತ್ತು 73 ಅನುಸೂಚಿಗಳು ಕಾರ್ಯಾಚರಣೆಯಲ್ಲಿರುತ್ತವೆ.<br><br>ವಡಗೇರಾ ನೂತನ ತಾಲೂಕಿನ ವ್ಯಾಪ್ತಿಯಲ್ಲಿ, ಯಾದಗಿರಿ, ಶಹಾಪೂರ ಮತ್ತು ರಾಯಚೂರು ಘಟಕಗಳಿಂದ 13 ಅನುಸೂಚಿಗಳು ಕಾರ್ಯಾಚರಣೆಯಲ್ಲಿದ್ದು, ಅವುಗಳ ಆದಾಯವು ತೃಪ್ತಿದಾಯಕವಾಗಿರುವುದಿಲ್ಲ.<br><br>ಈ ಹಿನ್ನಲೆಯಲ್ಲಿ, ನೂತನ ತಾಲ್ಲೂಕು ಕೇಂದ್ರ ವಡಗೇರಾದಲ್ಲಿ ಬಸ್ ಘಟಕ ಪ್ರಾರಂಭಿಸುವುದು ಸಂಚಾರ ದಟ್ಟಣೆ ಮತ್ತು ಸಂಸ್ಥೆಯ ಆರ್ಥಿಕ ಹಿತದೃಷ್ಟಿಯಿಂದ ಸಧ್ಯದ ಪರಿಸ್ಥಿತಿಯಲ್ಲಿ ಸೂಕ್ತವಾಗಿರುವುದಿಲ್ಲ. |
| ಆ. | ಬಂದಿದ್ದಲ್ಲಿ, ಬಸ್ ಘಟಕ ನಿರ್ಮಾಣ ಕಾರ್ಯ ಆರಂಭಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಹಾಗೂ ಯಾವ ಕಾಲಮಿತಿಯಲ್ಲಿ ನಿರ್ಮಿಸಲು ನಿರ್ಧರಿಸಿದೆ? | |

ಸಂಖ್ಯೆ: ಟಿಡಿ 152 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1236
ಸದಸ್ಯರ ಹೆಸರು : ಡಾ|| ಯತೀಂದ್ರ ಸಿದ್ದರಾಮಯ್ಯ (ವರುಣ)
ಉತ್ತರಿಸುವ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಜಿಲ್ಲೆ ವರುಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನಿರ್ಮಾಣ ಮಾಡಲು ಉದ್ದೇಶಿಸಿದ್ದ ಚಲನಚಿತ್ರ ನಗರ ನಿರ್ಮಾಣ ಮಾಡಲು ಈ ಹಿಂದೆ ರೂಪುರೇಷೆಗಳನ್ನು ಸಿದ್ಧಪಡಿಸಿದ್ದುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಹೌದು |
| ಆ) | ಚಲನಚಿತ್ರ ನಗರವನ್ನು ಮೈಸೂರಿನಲ್ಲಿ ನಿರ್ಮಾಣ ಮಾಡುವುದನ್ನು ತಡೆಹಿಡಿದು ಬೆಂಗಳೂರಿನಲ್ಲಿ ಮಾಡಲು ಸರ್ಕಾರ ಇಚ್ಛಿಸಿದೆಯೆ; | ಹೌದು |
| ಇ) | ಹಾಗಿದ್ದಲ್ಲಿ, ಚಲನಚಿತ್ರ ನಗರವನ್ನು ಮೈಸೂರಿನಲ್ಲಿ ನಿರ್ಮಾಣ ಮಾಡುವುದನ್ನು ತಡೆಹಿಡಿದು ಬೆಂಗಳೂರಿನಲ್ಲಿ ಮಾಡಲು ಕಾರಣವೇನು: (ಪೂರ್ಣ ವಿವರ ನೀಡುವುದು) | ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಹಿಮ್ಮಾವು ಗ್ರಾಮದಲ್ಲಿ 110.08 ಎಕರೆ ಜಮೀನನ್ನು ಚಿತ್ರನಗರಿ ಸ್ಥಾಪಿಸುವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿತ್ತು. ಅಂತರ ರಾಷ್ಟ್ರೀಯ ಚಲನಚಿತ್ರ ನಗರಿ (ಫಿಲಂ ಸಿಟಿ) ಸ್ಥಾಪಿಸುವ ಯೋಜನೆಯನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ಪ್ರವಾಸೋದ್ಯಮ ಇಲಾಖೆಗೆ ವರ್ಗಾಯಿಸಲಾಗಿತ್ತು. ಪ್ರವಾಸೋದ್ಯಮ ಯೋಜನೆಯಾಗಿ ಚಿತ್ರನಗರಿ ರೂಪಿಸಲು ಪ್ರವಾಸೋದ್ಯಮ ಇಲಾಖೆ ರೂಪುರೇಷೆ ಸಿದ್ಧಪಡಿಸಿತ್ತು. ತದನಂತರ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಹಿಮ್ಮಾವು ಗ್ರಾಮದಲ್ಲಿ ಚಿತ್ರನಗರಿ ನಿರ್ಮಾಣ ಪ್ರಸ್ತಾವನೆಯನ್ನು ಕೈಬಿಡಲಾಗಿದೆ.<br>2020-21 ನೇ ಆಯವ್ಯಯ ಭಾಷಣದಲ್ಲಿ "ನಟನಾ ಕೌಶಲ್ಯಕ್ಕೆ ಪ್ರಸಿದ್ಧಿಯಾಗಿರುವ ಕರ್ನಾಟಕದಲ್ಲಿ ಜಾಗತಿಕ ಗುಣಮಟ್ಟದ ಫಿಲಂ ಸಿಟಿಯನ್ನು ಬೆಂಗಳೂರಿನಲ್ಲಿ ಒಟ್ಟು 500 ಕೋಟಿ ರೂ.ಗಳ ವೆಚ್ಚದಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಸ್ಥಾಪಿಸಲಾಗುವುದು" ಎಂದು ಘೋಷಿಸಲಾಗಿದೆ.<br><br>ಕರ್ನಾಟಕದಲ್ಲಿ ಜಾಗತಿಕ ಗುಣಮಟ್ಟದ ಫಿಲಂ ಸಿಟಿಯನ್ನು ಬೆಂಗಳೂರಿನಲ್ಲಿ ಒಟ್ಟು 500 ಕೋಟಿ ರೂ.ಗಳ ವೆಚ್ಚದಲ್ಲಿ ಖಾಸಗಿ ಸಹಭಾಗಿತ್ವದೊಂದಿಗೆ ಸ್ಥಾಪಿಸುವ ಸಂಬಂಧ ಚಲನಚಿತ್ರ ಗಣ್ಯರ ಅಭಿಪ್ರಾಯ ಪಡೆದು ಯೋಜನೆಯ ಪರಿಕಲ್ಪನೆಯನ್ನು ರೂಪಿಸಲಾಗುತ್ತಿದೆ. |

ಸಂಖ್ಯೆ: KCI-PIP/196/2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1243
ಸದಸ್ಯರ ಹೆಸರು : ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳ್ಕರ್ (ಬೆಳಗಾಂ ಗ್ರಾಮಾಂತರ)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಹುದ್ದೆಯನ್ನು 'ಬಿ' ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಗಮನದಲ್ಲಿದೆಯೇ; | ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಹುದ್ದೆಯನ್ನು 'ಬಿ' ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಗಮನದಲ್ಲಿದೆ. |
| (ಆ) | ಹಾಗಿದ್ದಲ್ಲಿ, ಗ್ರಾಮ ಮಟ್ಟದಲ್ಲಿ ಸಂಪೂರ್ಣವಾಗಿ ಕೇಂದ್ರ ಮತ್ತು ರಾಜ್ಯಗಳ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸುವ ಈ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಹುದ್ದೆಯನ್ನು 'ಬಿ' ದರ್ಜೆಗೇರಿಸಲು ವಿಳಂಬ ನೀಡಿ ಅನುಸರಿಸಲು ಕಾರಣವೇನು (ಮಾಹಿತಿ ನೀಡುವುದು) | ಆರ್ಥಿಕ ಇಲಾಖೆಯ ಅಭಿಪ್ರಾಯದ ಮೇರೆಗೆ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆಯನ್ನು ಗ್ರೂಪ್ ಬಿ ಹುದ್ದೆಗೆ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯನ್ನು 6ನೇ ಕರ್ನಾಟಕ ರಾಜ್ಯ ವೇತನ ಆಯೋಗದ ಮುಂದೆ ಮಂಡಿಸಲಾಗಿತ್ತು. 6ನೇ ರಾಜ್ಯ ವೇತನ ಆಯೋಗವು ತನ್ನ ವರದಿಯ 2ನೇ ಸಂಪುಟದಲ್ಲಿ ಆರ್ಥಿಕ ಇಲಾಖೆಗೆ ಸಲ್ಲಿಸಿದ್ದು, ಗ್ರಾಮ ಪಂಚಾಯತಿಗಳ ಮೇಲ್ದರ್ಜೆಗೇರಿಸುವಿಕೆ ವಿಷಯವು ಸರ್ಕಾರದ ಹಂತದಲ್ಲಿ ಅದರ ಕಾರ್ಯನಿರ್ವಹಣೆಯ ಅಗತ್ಯತೆಗಳನ್ನು ಮತ್ತು ಇತರೆ ತತ್ಸಬಂಧ ಅಂಶಗಳನ್ನು ತೀರ್ಮಾನಿಸಬೇಕಾಗುತ್ತದೆ ಎಂದು ತಿಳಿಸಿರುತ್ತದೆ. |
| (ಇ) | ಈ ಪಂಚಾಯತ್ ಅಭಿವೃದ್ಧಿ ಅಧಿಕಾರಿಯ ಹುದ್ದೆಯನ್ನು ಯಾವ ಕಾಲಮಿತಿಯೊಳಗೆ 'ಬಿ' ದರ್ಜೆಗೇರಿಸಲಾಗುವುದು (ಮಾಹಿತಿ ನೀಡುವುದು) | ಕಾಲ ಮಿತಿ ಇರುವುದಿಲ್ಲ. |

ಸಂ. ಗ್ರಾಅಪ 705 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1244 |
| ಸದಸ್ಯರ ಹೆಸರು | ಶರಣಬಸಪ್ಪ ಗೌಡ ದರರ್ಶನಾಪುರ್ (ಶಹಾಪುರ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಶಹಾಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಗ್ರಾಮೀಣ ರಸ್ತೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿ ಲೆಕ್ಕ ಶೀರ್ಷಿಕೆ-3054ರಡಿ ರೂ.07 ಕೋಟಿ ಮಂಜೂರು ಮಾಡಲಾಗಿರುವುದು ನಿಜವೇ; | ಹೌದು |
| ಆ. | ಸದರಿ ಲೆಕ್ಕ ಶೀರ್ಷಿಕೆಯಡಿ ಮಂಜೂರಾತಿ ಆದೇಶದ ಪ್ರಕಾರ ರೂ.2.00 ಕೋಟಿ ಬಿಡುಗಡೆಯಾಗಿದ್ದು, ಉಳಿಕೆ ಮೊತ್ತ ರೂ.5.00 ಕೋಟಿ ಬಿಡುಗಡೆಯಾಗದಿರುವುದಕ್ಕೆ ಕಾರಣಗಳೇನು; | ಶಹಾಪುರ ವಿಧಾಸಭಾ ಕ್ಷೇತ್ರ ವ್ಯಾಪ್ತಿಗೆ ಹಂಚಿಕೆ ಮಾಡಲಾಗಿದ್ದ ರೂ. 7.00 ಕೋಟಿಗಳ ಮೊತ್ತದ ಅನುದಾನದ ಪೈಕಿ ರೂ. 2.00 ಕೋಟಿಗಳ ಮೊತ್ತದ ಕಾಮಗಾರಿಗಳನ್ನು ಮುಂದುವರೆಸಲು ಅನುಮೋದನೆ ನೀಡಿಲಾಗಿದೆ. ಇದರಲ್ಲಿ ರೂ. 1.60 ಕೋಟಿಗಳನ್ನು ಬಿಡುಗಡೆ ಮಾಡಿದೆ.<br><br>ಬಾಕಿ ಉಳಿದ ರೂ. 5.00 ಕೋಟಿಗಳ ಮೊತ್ತದ ಕಾಮಗಾರಿಗಳನ್ನು ಅನುದಾನದ ಲಭ್ಯತೆಯನ್ನಾಧರಿಸಿ ಮುಂದುವರೆಸಲು ಪರಿಶೀಲಿಸಬೇಕಿದೆ. |
| ಇ. | ಉಳಿಕೆ ಮೊತ್ತ ರೂ.5.00 ಕೋಟಿಯನ್ನು ಯಾವಾಗ ಬಿಡುಗಡೆ ಮಾಡಲಾಗುವುದು? | ತಡೆಹಿಡಿಯಲಾಗಿರುವ ಕಾಮಗಾರಿಗಳನ್ನು ಮುಂದುವರೆಸಲು ಆರ್ಥಿಕ ಇಲಾಖೆಯು ಸಹಮತಿ ನೀಡಿ ಅನುದಾನ ಲಭ್ಯಗೊಳಿಸಿದ ನಂತರ ಹಣ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ07/31:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1247 |
| ಸದಸ್ಯರ ಹೆಸರು | ಶ್ರೀ ಪ್ರಿಯಾಂಕ್ ಎಂ. ಖರ್ಗೆ (ಚಿತ್ತಾಪುರ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಚಿತ್ತಾಪುರ ಮತ ಕ್ಷೇತ್ರದ 2019-20ನೇ ಸಾಳಿನ ಲಮ್‌ಸಮ್ 3054 ಯೋಜನೆಯಡಿಯಲ್ಲಿ ಎಷ್ಟು ಹಣ ಮಂಜೂರು ಮಾಡಲಾಗಿದೆ; ಮಂಜೂರು ಮಾಡದಿದ್ದಲ್ಲಿ ಕಾರಣವೇನು? (ವಿವರ ನೀಡುವುದು) | 2019-20ನೇ ಸಾಲಿನಲ್ಲಿ 3054 ಲಮ್‌ಸಮ್ ರಡಿ ಯಾವುದೇ ಅನುದಾನ ಮಂಜೂರು ಮಾಡಿರುವುದಿಲ್ಲ.<br><br>ಆದರೆ ಲೆ.ಶೀ. 3054 ರ ರಸ್ತೆ ನಿರ್ವಹಣಾ ಅನುದಾನ ಮತ್ತು ಲಿಂಕ್ ಡಾಕ್ಯೂ ಮೆಂಟ್ ರಡಿ ರೂ. 76.46 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿದ್ದು, ಅನುದಾನವನ್ನು ಸಹ ಬಿಡುಗಡೆ ಮಾಡಲಾಗಿರುತ್ತದೆ. |

ಕಡತ ಸಂಖ್ಯೆ: ಗ್ರಾಅಪ:01/126:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1252

ಸದಸ್ಯರ ಹೆಸರು : ಶ್ರೀ ಗಣೇಶ್ ಪ್ರಕಾಶ್ ಹುಕ್ಕೇರಿ (ಚಿಕ್ಕೋಡಿ ಸದಲಗ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ಜಿಲ್ಲೆ, ಚಿಕ್ಕೋಡಿ-ಸದಲಗ ಕ್ಷೇತ್ರ ವ್ಯಾಪ್ತಿಯಲ್ಲಿ ಸಾರ್ವಜನಿಕರ ಉಪಯೋಗಕ್ಕಿರುವ ಬಸ್ ನಿಲ್ದಾಣಗಳ ಸಂಖ್ಯೆಯೆಷ್ಟು; ಇವುಗಳಲ್ಲಿ ನವೀಕರಣಗೊಂಡಿರುವ ಹಾಗೂ ನವೀಕರಣದ ಹಂತದಲ್ಲಿರುವ ಬಸ್ ನಿಲ್ದಾಣಗಳೆಷ್ಟು; (ವಿವರ ಒದಗಿಸುವುದು) | ಚಿಕ್ಕೋಡಿ-ಸದಲಗಾ ಮತಕ್ಷೇತ್ರದಲ್ಲಿ ಚಿಕ್ಕೋಡಿ, ಅಂಕಲಿ, ಮಾಂಜರಿ, ಸದಲಗಾ, ಯಕ್ಸಂಬಾ ಮತ್ತು ಕಲ್ಲೋಳ ಸೇರಿದಂತೆ ಒಟ್ಟು 06 ಬಸ್ ನಿಲ್ದಾಣಗಳಿವೆ. ಇವುಗಳ ಪೈಕಿ ಚಿಕ್ಕೋಡಿ ಮತ್ತು ಸದಲಗಾದಲ್ಲಿ ಇತ್ತೀಚೆಗೆ ನೂತನ ಬಸ್ ನಿಲ್ದಾಣಗಳನ್ನು ನಿರ್ಮಿಸಲಾಗಿದೆ. |
| ಆ. | ನವೀಕರಣ ಹಂತದಲ್ಲಿರುವ ಬಸ್ ನಿಲ್ದಾಣದ ಕಾಮಗಾರಿಗಳ ಪ್ರಗತಿಯು ಯಾವ ಹಂತದಲ್ಲಿವೆ; (ವಿವರ ಒದಗಿಸುವುದು) | ಅಂಕಲಿ, ಮಾಂಜರಿ, ಯಕ್ಸಂಬಾ ಮತ್ತು ಕಲ್ಲೋಳ ಬಸ್ ನಿಲ್ದಾಣಗಳಲ್ಲಿ ನವೀಕರಣ ಕೈಗೊಳ್ಳಬೇಕಾಗಿರುತ್ತದೆ. ಪ್ರಸ್ತುತ ನವೀಕರಣ ಹಂತದಲ್ಲಿ ಯಾವುದೇ ಬಸ್ ನಿಲ್ದಾಣಗಳು ಇರುವುದಿಲ್ಲ. |
| ಇ. | ಸಾರ್ವಜನಿಕ ಅನುಕೂಲಕ್ಕಾಗಿ ಬಸ್ ನಿಲ್ದಾಣಗಳಿಲ್ಲದಿರುವ ಎಷ್ಟು ಜಾಗಗಳನ್ನು ಸರ್ಕಾರ ಗುರುತಿಸಿದೆ; ಹಾಗಿದ್ದಲ್ಲಿ, ಅಂತಹ ಸ್ಥಳಗಳಲ್ಲಿ ಸಾರ್ವಜನಿಕರ ಅನುಕೂಲಕ್ಕಾಗಿ ಬಸ್ ನಿಲ್ದಾಣಗಳನ್ನು ನಿರ್ಮಿಸುವ ಯೋಜನೆ ಸರ್ಕಾರದ ಮುಂದಿದೆಯೇ? (ಸಂಪೂರ್ಣ ವಿವರ ನೀಡುವುದು) | ಚಿಕ್ಕೋಡಿ-ಸದಲಗ ವ್ಯಾಪ್ತಿಯಲ್ಲಿ ಹೊಸ ಬಸ್ ನಿಲ್ದಾಣಕ್ಕಾಗಿ ಯಾವುದೇ ಜಾಗಗಳನ್ನು ಗುರುತಿಸಿರುವುದಿಲ್ಲ. ಮುಂದಿನ ದಿನಗಳಲ್ಲಿ ಅವಶ್ಯಕತೆಗನುಗುಣವಾಗಿ ಬಸ್ ನಿಲ್ದಾಣಗಳ ನಿರ್ಮಾಣ ಯೋಜನೆಯನ್ನು ರೂಪಿಸಿಕೊಳ್ಳಲಾಗುತ್ತದೆ. |

ಸಂಖ್ಯೆ: ಟಿಡಿ 154 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1725

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಧಾರವಾಡ ತಾಲ್ಲೂಕು ಮತಕ್ಷೇತ್ರದ ವ್ಯಾಪ್ತಿಯಲ್ಲಿ ದೇಸಿ ಶೈಲಿಯ ಕುಸ್ತಿ ಕ್ರೀಡೆಯನ್ನು ಉತ್ತೇಜಿಸಲು ಸರ್ಕಾರ ಗರಡಿ ಮನೆ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ. | ಹೌದು, ಪ್ರಸ್ತಾವನೆಯು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಆಯುಕ್ತಾಲಯದಲ್ಲಿ ಸ್ವೀಕೃತವಾಗಿದೆ. |
| 2 | ಹಾಗಿದ್ದಲ್ಲಿ, ಪ್ರಸಕ್ತ ಸಾಲಿನಲ್ಲಿ ಗರಡಿ ಮನೆ ನಿರ್ಮಾಣ ಮಾಡಲು ಮೀಸಲಿರಿಸಿದ ಅನುದಾನವೆಷ್ಟು. | ಪ್ರಸಕ್ತ ಸಾಲಿನಲ್ಲಿ ಗರಡಿ ಮನೆ ನಿರ್ಮಾಣ ಮಾಡಲು ಯಾವುದೇ ಅನುದಾನ ಮೀಸಲಿಟ್ಟಿರುವುದಿಲ್ಲ. |
| 3 | ಈಗಾಗಲೇ ಇರುವ ಗರಡಿ ಮನೆಗಳಿಗೆ ಕ್ರೀಡಾ ಸಲಕರಣೆಗಳನ್ನು ಖರೀದಿಸಲು ಅನುದಾನವನ್ನು ಮೀಸಲಿಡಲಾಗಿದೆಯೇ. | ಈಗಾಗಲೇ ಇರುವ ಗರಡಿ ಮನೆಗಳಿಗೆ ಕ್ರೀಡಾ ಸಲಕರಣೆಗಳನ್ನು ಖರೀದಿಸಲು ಅನುದಾನವನ್ನು ನೀಡುವ ಯೋಜನೆ ಇರುವುದಿಲ್ಲ. |
| 4 | ಹಾಗಿದ್ದಲ್ಲಿ, ಧಾರವಾಡ ತಾಲ್ಲೂಕಿಗೆ ಮೀಸಲಿಟ್ಟ ಅನುದಾನವೆಷ್ಟು | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ವೈಎಸ್ ಡಿ-/ಇಬಿಬಿ/85/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ 7ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1729

2) ಸದಸ್ಯರ ಹೆಸರು : ಶ್ರೀ ಭೀಮಾ ನಾಯ್ಕ .ಎಸ್ (ಹಗರಿಬೊಮ್ಮನಹಳ್ಳಿ)

3) ಉತ್ತರಿಸುವ ದಿನಾಂಕ : 23-09-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಳ್ಳಾರಿ ಜಿಲ್ಲೆ ಹಗರಿಬೊಮ್ಮನ ಹಳ್ಳಿ ತಾಲ್ಲೂಕಿನ ಅಂಕ ಸಮುದ್ರ ಕೆರೆಯಲ್ಲಿ ಪ್ರತಿವರ್ಷ ವಿವಿಧ ದೇಶಗಳಿಂದ ವಿವಿಧ ಪ್ರಭೇದದ ಸಾವಿರಾರು ಪಕ್ಷಿಗಳು ಸಂತಾನೋತ್ಪತ್ತಿಗೆ ಆಗಮಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ) | ಹಾಗಿದ್ದಲ್ಲಿ, ಪ್ರವಾಸೋದ್ಯಮವನ್ನು ಉತ್ತೇಜಿಸಲು ಅಂಕ ಸಮುದ್ರ ಕೆರೆಯನ್ನು ಪಕ್ಷಿಧಾಮವನ್ನಾಗಿ ಅಭಿವೃದ್ಧಿಗೊಳಿಸುವ ಪ್ರಸ್ತಾವನೆ ಸರ್ಕಾರದಲ್ಲಿಯೇ; | ಪಕ್ಷಿಗಳ ಸಂರಕ್ಷಣೆಗಾಗಿ ಸರ್ಕಾರದ ಅಧಿಸೂಚನೆ ದಿನಾಂಕ: 31.01.2017 ರಲ್ಲಿ ವನ್ಯಜೀವಿ (ರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 36ಎ ರ ಪ್ರಕಾರ "ಅಂಕ ಸಮುದ್ರ ಪಕ್ಷಿ ಸಂರಕ್ಷಣಾ ಮೀಸಲು ಪ್ರದೇಶ" ವೆಂದು ಘೋಷಿಸಲಾಗಿದೆ.<br><br>ಆದರೆ, ಪ್ರವಾಸೋದ್ಯಮವನ್ನು ಉತ್ತೇಜಿಸಲು "ಅಂಕ ಸಮುದ್ರ ಕೆರೆಯನ್ನು ಪಕ್ಷಿಧಾಮ" ವನ್ನಾಗಿ ಅಭಿವೃದ್ಧಿಗೊಳಿಸುವ ಕುರಿತು ಪ್ರತ್ಯೇಕ ಪ್ರಸ್ತಾವನೆ ಇರುವುದಿಲ್ಲ. |
| ಈ) | ಹಾಗಿದ್ದಲ್ಲಿ ಸದರಿ ಪ್ರಸ್ತಾವನೆಯನ್ನು ಯಾವಾಗ ಅನುಮೋದಿಸಲಾಗುವುದು; ಇದಕ್ಕಾಗಿ ಎಷ್ಟು ಹಣವನ್ನು ಮೀಸಲಿಡಲಾಗಿದೆ? | ಈಗಾಗಲೇ ಘೋಷಣೆಗೊಂಡಿರುವ "ಅಂಕ ಸಮುದ್ರ ಪಕ್ಷಿ ಸಂರಕ್ಷಣಾ ಮೀಸಲು ಪ್ರದೇಶ" ವನ್ನು ಅಭಿವೃದ್ಧಿಗೊಳಿಸಲು 2019-20ನೇ ಸಾಲಿನಲ್ಲಿ ವಿವಿಧ ಕಾಮಗಾರಿಗಳಿಗೆ ವಿವಿಧ ಯೋಜನೆಗಳಡಿ ರೂ.22.656 ಲಕ್ಷ ವೆಚ್ಚ ಭರಿಸಲಾಗಿರುತ್ತದೆ.<br><br>ಪ್ರಸಕ್ತ ಸಾಲಿಗೆ ಕೇಂದ್ರ ಪುರಸ್ಕೃತ ಯೋಜನಾ ಲೆಕ್ಕಶೀರ್ಷಿಕೆ "2406-02-110-0-47-ಸಮಗ್ರ ವನ್ಯಜೀವಿ ಆವಾಸಸ್ಥಾನಗಳ ಅಭಿವೃದ್ಧಿ-139-ಪ್ರಧಾನ ಕಾಮಗಾರಿಗಳು" ಇದರಡಿ ರೂ.49.13ಲಕ್ಷಗಳಿಗೆ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸಿ, ಅನುಮೋದನೆಗಾಗಿ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಮುಂದುವರೆದು, ಎಂಜಿಎನ್‌ಆರ್‌ಇಜಿಎ ಯೋಜನೆಯಡಿ ರೂ.35.60ಲಕ್ಷ ಅನುದಾನದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಅಪಜೀ 157 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 421

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್.ಡಿ (ಮಂಗಳೂರು ನಗರ ದಕ್ಷಿಣ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂಗನವಾಡಿ ಕೇಂದ್ರಗಳ ಕಟ್ಟಡದ ಕೊರತೆ ಇದ್ದು, ಕಟ್ಟಡ ನಿರ್ಮಾಣ ಮಾಡಲು ಇಲಾಖೆವತಿಯಿಂದ ಅನುದಾನ ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ. | ಬಂದಿದ್ದಲ್ಲಿ, ವಿಧಾನಸಭಾ ಕ್ಷೇತ್ರವಾರು ಸ್ವೀಕೃತವಾದ ಪ್ರಸ್ತಾವನೆಗಳೆಷ್ಟು; | 2020-21ನೇ ಸಾಲಿಗೆ ನರೇಗಾ ಒಗ್ಗೂಡಿಸುವಿಕೆಯಡಿ 3 ಕಟ್ಟಡ ನಿರ್ಮಾಣಕ್ಕೆ ಗುರಿ ನಿಗದಿಪಡಿಸಲಾಗಿದೆ.<br>**ಸ್ವೀಕೃತವಾದ ಪ್ರಸ್ತಾವನೆಗಳು (ವಿಧಾನ ಸಭಾ ಕ್ಷೇತ್ರವಾರು)**<br>ಬೆಳ್ತಂಗಡಿ- 1<br>**ಬಂಟ್ವಾಳ- 2**<br>**ಒಟ್ಟು 3** |
| ಇ. | ಕಳೆದ ಎರಡು ವರ್ಷಗಳಲ್ಲಿ ಅಂಗನವಾಡಿ ಕಟ್ಟಡ ನಿರ್ಮಾಣ ಮಾಡಲು ಬಿಡುಗಡೆ ಮಾಡಲಾದ ಅನುದಾನವೆಷ್ಟು? (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು). | ಕಳೆದ ಎರಡು ವರ್ಷಗಳಲ್ಲಿ ಅಂದರೆ 2018-19 ಮತ್ತು 2019-20ನೇ ಸಾಲಿನಲ್ಲಿ ಅಂಗನವಾಡಿ ಕಟ್ಟಡ ನಿರ್ಮಾಣ ಮಾಡಲು ಒಟ್ಟು ರೂ. 300.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ. ವಿಧಾನಸಭಾ ಕ್ಷೇತ್ರವಾರು ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 176 ಐಸಿಡಿ 2020

ಅನುಬಂಧ

ಶ್ರೀ ವೇದವ್ಯಾಸ ಕಾಮತ್.ಡಿ (ಮಂಗಳೂರು ನಗರ ದಕ್ಷಿಣ)ವಿಧಾನ ಸಭಾ ಸದಸ್ಯರು, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ 421 ಕ್ಕೆ ಅನುಬಂಧ

ಕಳೆದ 2 ವರ್ಷಗಳಲ್ಲಿ ಅಂಗನವಾಡಿ ಕಟ್ಟಡಗಳ ನಿರ್ಮಾಣಕ್ಕಾಗಿ ಬಿಡುಗಡೆಯಾದ ಅನುದಾನ

| ಕ್ರ.ಸಂ | ವಿಧಾನಸಭಾ ಕ್ಷೇತ್ರದ ಹೆಸರು | 2018-19 ನೇ ಸಾಲಿನಲ್ಲಿ ಕಟ್ಟಡ ನಿರ್ಮಿಸಲು ಮಂಜೂರಾದ ಅನುದಾನ | 2019-20 ನೇ ಸಾಲಿನಲ್ಲಿ ಕಟ್ಟಡ ನಿರ್ಮಿಸಲು ಮಂಜೂರಾದ ಅನುದಾನ (ಲಕ್ಷಗಳಲ್ಲಿ) | | | | | |
|---|---|---|---|---|---|---|---|---|
| | | | ಎಂ,ಎನ್.ಅರ್,ಇ.ಜಿ.ಎ ಹಾಗೂ ಇಲಾಖಾ ಅನುದಾನ | | ಎಂ,ಎನ್.ಅರ್,ಇ.ಜಿ.ಎ ಹಾಗೂ ಎಂ.ಅರ್.ಪಿ.ಎಲ್ ಸಿ.ಎಸ್.ಆರ್ ಅನುದಾನ | | ಒಟ್ಟು | |
| | | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 1 | ಬೆಳ್ತಂಗಡಿ | 0 | 1 | 10.00 | 3 | 30.00 | 4 | 40.00 |
| 2 | ಸುಳ್ಯ | 0 | 1 | 10.00 | 2 | 20.00 | 3 | 30.00 |
| 3 | ಮುಲ್ಕಿ/ಮೂಡಬಿದ್ರೆ | 0 | 0 | 0.00 | 6 | 60.00 | 6 | 60.00 |
| 4 | ಮಂಗಳೂರು | 0 | 0 | 0.00 | 4 | 40.00 | 4 | 40.00 |
| 5 | ಮಂಗಳೂರು (ಉತ್ತರ) | 0 | 1 | 10.00 | 2 | 20.00 | 3 | 30.00 |
| 6 | ಬಂಟ್ವಾಳ | 0 | 2 | 20.00 | 5 | 50.00 | 7 | 70.00 |
| 7 | ಪುತ್ತೂರು | 0 | 0 | 0.00 | 3 | 30.00 | 3 | 30.00 |
| ಒಟ್ಟು | | **0** | **5** | **50.00** | **25** | **250.00** | **30** | **300.00** |

7

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 422
ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ.
ಉತ್ತರಿಸುವ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ವಿಕಲಚೇತನರಿಗೆ ಪ್ರಸ್ತುತ ನೀಡುತ್ತಿರುವ ಮಾಶಾಸನವನ್ನು ಹೆಚ್ಚಿಸಲು ಬೇಡಿಕೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪ್ರಸ್ತುತ ನೀಡುತ್ತಿರುವ ಮಾಶಾಸನವನ್ನು ಹೆಚ್ಚಿಸಲು ಸರ್ಕಾರದ ಹಂತದಲ್ಲಿ ತೆಗೆದುಕೊಂಡಿರುವ ಕ್ರಮಗಳೇನು; | ರಾಜ್ಯದಲ್ಲಿರುವ ವಿಕಲಚೇತನರಿಗೆ ಪ್ರಸ್ತುತ ನೀಡುತ್ತಿರುವ ಮಾಶಾಸನವನ್ನು ಹೆಚ್ಚಿಸಲು ಬೇಡಿಕೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ಪ್ರಸ್ತುತ ನೀಡುತ್ತಿರುವ ಮಾಸಾಶನವನ್ನು ಹೆಚ್ಚಿಸುವ ಪ್ರಸ್ತಾವನೆ ಸಾಮಾಜಿಕ ಭದ್ರತೆ ಹಾಗೂ ಪಿಂಚಣಿ ಇಲಾಖೆರವರಲ್ಲಿ ಪರಿಶೀಲನೆಯ ಹಂತದಲ್ಲಿರುತ್ತದೆ. |
| ಆ | ಪ್ರಸ್ತುತ ರಾಜ್ಯದಲ್ಲಿ ಮಾಶಾಸನ ಪಡೆಯುತ್ತಿರುವ ವಿಕಲಚೇತನರ ಸಂಖ್ಯೆ ಎಷ್ಟು? (ಜಿಲ್ಲಾವಾರು ಅಂಕಿ-ಅಂಶ ನೀಡುವುದು) | ರಾಜ್ಯದಲ್ಲಿ ಆಗಸ್ಟ್ 2020ರ ಮಾಹೆಯ ಅಂತಕ್ಕೆ ಅಂಗವಿಕಲ ಪಿಂಚಣಿ ಪಡೆಯುತ್ತಿರುವ ಒಟ್ಟು ಫಲಾನುಭವಿಗಳ ಸಂಖ್ಯೆ 870911 ಆಗಿದ್ದು, ಜಿಲ್ಲಾವಾರು ಪಟ್ಟಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

**ಸಂಖ್ಯೆ: ಮಮಇ 212 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರೀಕರ ಸಬಲೀಕರಣ
ಇಲಾಖಾ ಸಚಿವರು

ಮಾನ್ಯ ವಿಧಾನ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1728ಕ್ಕೆ

## ಅನುಬಂಧ

ಅಂಗವಿಕಲ ಪಿಂಚಣಿ ಪಡೆಯುತ್ತಿರುವವರ ಫಲಾನುಭವಿಗಳ ಜಿಲ್ಲಾವಾರು ಅಂಕಿ ಅಂಶಗಳು (ಆಗಸ್ಟ್ 2020ರ ಅಂತ್ಯಕ್ಕೆ)

| ಕ್ರ.ಸಂ | ಜಿಲ್ಲೆಗಳ ಹೆಸರು | ಫಲಾನುಭವಿಗಳ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 37578 |
| 2 | ಬೆಂಗಳೂರು (ಗ್ರಾ) | 12937 |
| 3 | ಬೆಳಗಾಂ | 86119 |
| 4 | ಬಳ್ಳಾರಿ | 41310 |
| 5 | ಬೀದರ್ | 35650 |
| 6 | ಬಿಜಾಪುರ | 30635 |
| 7 | ಬಾಗಲಕೋಟೆ | 36844 |
| 8 | ಚಿತ್ರದುರ್ಗ | 35505 |
| 9 | ಚಿಕ್ಕಮಗಳೂರು | 15779 |
| 10 | ಚಾಮರಾಜನಗರ, | 21202 |
| 11 | ಧಾರವಾಡ | 33706 |
| 12 | ದಕ್ಷಿಣ ಕನ್ನಡ | 18071 |
| 13 | ದಾವಣಗೆರೆ | 27221 |
| 14 | ಗುಲ್ಬರ್ಗಾ | 36992 |
| 15 | ಗದಗ | 24026 |
| 16 | ಹಾಸನ | 25058 |
| 17 | ಹಾವೇರಿ | 38101 |
| 18 | ಕೊಡಗು | 5153 |
| 19 | ಕೋಲಾರ | 23528 |
| 20 | ಕೊಪ್ಪಳ | 28635 |
| 21 | ಮೈಸೂರು | 37358 |
| 22 | ಮಂಡ್ಯ | 34803 |
| 23 | ರಾಯಚೂರು | 28287 |
| 24 | ಶಿವಮೊಗ್ಗ | 21499 |
| 25 | ತುಮಕೂರು | 45444 |
| 26 | ಉತ್ತರ ಕನ್ನಡ | 15850 |
| 27 | ಉಡುಪಿ | 12285 |
| 28 | ರಾಮನಗರ | 18308 |
| 29 | ಚಿಕ್ಕಬಳ್ಳಾಪುರ | 22849 |
| 30 | ಯಾದಗಿರಿ | 20178 |
|  | ಒಟ್ಟು | 870911 |

*****

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 425

ಮಾನ್ಯ ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್. (ದೇವನಹಳ್ಳಿ)

ವಿಷಯ : ಪ್ರವಾಸಿತಾಣಗಳಿಗೆ ಅನುದಾನ ಬಿಡುಗಡೆ

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೇವನಹಳ್ಳಿ ವಿಧಾನಸಭಾ ಕ್ಷೇತ್ರವು ಅತ್ಯಂತ ಪ್ರೇಕ್ಷಣೀಯ ಸ್ಥಳಗಳನ್ನು ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪೂರ್ಣ ಮಾಹಿತಿ ನೀಡುವುದು) | ಹೌದು. ಇಲಾಖೆಯ ಗಮನಕ್ಕೆ ಬಂದಿರುತ್ತದೆ.<br>2015-20ರ ಪ್ರವಾಸೋದ್ಯಮ ನೀತಿ ಅನ್ವಯ ದೇವನಹಳ್ಳಿ ತಾಲ್ಲೂಕಿನಲ್ಲಿ ಇಲಾಖೆಯು ಈ ಕೆಳಕಂಡ ಪ್ರವಾಸಿ ತಾಣಗಳನ್ನು ಗುರುತಿಸಲಾಗಿದೆ.<br>1. ದೇವನಹಳ್ಳಿ<br>2. ಟಿಪ್ಪುಜನ್ಮ ಸ್ಥಳ ಹಾಗೂ ಕೋಟೆ |
| ಆ) | ಹಾಗಾದರೆ, ಕಳೆದ ಮೂರು ವರ್ಷಗಳಲ್ಲಿ ಯಾವ ಪ್ರೇಕ್ಷಣೀಯಕ್ಷೇತ್ರಕ್ಕೆ ಎಷ್ಟೆಷ್ಟು ಹಣ ಮಂಜೂರು ಮಾಡಿದೆ; ಎಲ್ಲೆಲ್ಲಿ ಕೆಲಸ ಪೂರ್ಣಗೊಳಿಸಿದೆ; ಎಲ್ಲೆಲ್ಲಿ ಕೆಲಸ ಪ್ರಾರಂಭಿಸಿರುವುದಿಲ್ಲ; ಕೆಲಸ ಪ್ರಾರಂಭಮಾಡದಿರಲು ಕಾರಣಗಳೇನು; (ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ದೇವನಹಳ್ಳಿ ತಾಲ್ಲೂಕಿನಲ್ಲಿ ಪ್ರವಾಸೋದ್ಯಮ ಇಲಾಖೆಯು ಕೈಗೊಂಡಿರುವ ಕಾಮಗಾರಿಗಳ ವಿವರ ಕೆಳಗಿನಂತಿದೆ.<br>1. 2017-18 ನೇ ಸಾಲಿನಲ್ಲಿ ದೇವನಹಳ್ಳಿ ಪಟ್ಟಣದ ವೇಣುಗೋಪಾಲಸ್ವಾಮಿ ದೇವಸ್ಥಾನ, ಟಿಪ್ಪು ಕೋಟೆ ಸಂಪರ್ಕಿಸುವ ರಸ್ತೆ ಅಭಿವೃದ್ಧಿ ಕಾಮಗಾರಿಗೆ ರೂ.49.00 ಲಕ್ಷ ಬಿಡುಗಡೆಯಾಗಿದ್ದು, ಕಾಮಗಾರಿ ಪೂರ್ಣಗೊಂಡಿದೆ.<br>2. 2018-19 ನೇ ಸಾಲಿನಲ್ಲಿ ದೇವನಹಳ್ಳಿ ತಾಲ್ಲೂಕಿನ, ಕುಂದಾಣ ಹೋಬಳಿ, ಕೊಯಿರಾ ಗ್ರಾಮದ ಯಾತ್ರಿ ನಿವಾಸ ನಿರ್ಮಾಣಕ್ಕೆ ರೂ.50.00 ಲಕ್ಷಗಳ ಯೋಜನೆ ಮಂಜೂರಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ.<br>3. 2018-19ನೆ ಸಾಲಿನಲಿ ದೇವನಹಳ್ಳಿ ಕೋಟೆ ಪ್ರದೇಶದಲ್ಲಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿಯನ್ನು ರೂ.230.00 ಲಕ್ಷಗಳ ಅಂದಾಜು ವೆಚ್ಚದಲ್ಲಿ Karnataka Tourism Vision Group (KTVG)ಅಡಿಯಲ್ಲಿ ಕೈಗೊಳ್ಳಲು ಸರ್ಕಾರವು ಅನುಮೋದನೆ ನೀಡಿರುತ್ತದೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತೀಯ ಪುರಾತತ್ವ ಇಲಾಖೆ (ಎ.ಎಸ್.ಐ) ರವರಿಂದ ನಿರಾಪೇಕ್ಷಣ ಪತ್ರ ಕೋರಿ ದಿ: 20/07/2019, 03/09/2019 ಹಾಗೂ 21/10/2019 ಗಳಂದು ಪತ್ರ ಬರೆಯಲಾಗಿದ್ದು, ಇದುವರೆಗೂ ನಿರಾಪೇಕ್ಷಣ ಪತ್ರ ಸ್ವೀಕೃತವಾಗಿರುವುದಿಲ್ಲ. |

| | | |
|---|---|---|
| | | 4. 2019-20 ನೇ ಸಾಲಿನಲ್ಲಿ ದೇವನಹಳ್ಳಿಯ ಶ್ರೀ ಸಿದ್ಧಾಚಲಂಸ್ಥೂಲ ಭದ್ರಧಾಮ ಜೈನ್ ದೇವಸ್ಥಾನದ ರಸ್ತೆ ಅಭಿವೃದ್ಧಿ, ಉದ್ಯಾನವನ ಅಭಿವೃದ್ಧಿ ಕಾಮಗಾರಿಗೆ ರೂ.100.00 ಲಕ್ಷಗಳು ಬಿಡುಗಡೆಯಾಗಿದ್ದು, ಕಾಮಗಾರಿ ಪೂರ್ಣಗೊಂಡಿದೆ.<br>5. 2019-20ನೇ ಸಾಲಿನಲ್ಲಿ ಶ್ರೀ ಘಾಟಿ ಸುಬ್ರಮಣ್ಯ ಸ್ವಾಮಿ ದೇವಸ್ಥಾನದ ಬಳಿ ಮೂಲಭೂತ ಸೌಕರ್ಯ ಅಭಿವೃದ್ಧಿಗಾಗಿ ರೂ.200.00 ಲಕ್ಷಗಳ ಯೋಜನೆ ಮಂಜೂರಾಗಿದ್ದು ಮೊದಲ ಕಂತಾಗಿ ರೂ.100.00 ಲಕ್ಷಗಳನ್ನು ಕೆ.ಟಿ.ಐ.ಎಲ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ. ಅಂದಾಜು ಪಟ್ಟಿಯನ್ನು ತಯಾರಿಸಲಾಗುತ್ತಿದೆ. ಕಾಮಗಾರಿ ಪ್ರಾರಂಭಿಸಬೇಕಿದೆ. |
| ಇ) | ಹಾಗಿದ್ದಲ್ಲಿ, ಯಾವುದಾದರು ಮಂಜೂರಾದ ಕಾಮಗಾರಿಗಳಿಗೆ ಅನುದಾನ ತಡೆಹಿಡಿಯಲಾಗಿದೆಯೇ; ತಡೆಹಿಡಿದಿದ್ದರೆ, ಯಾವಾಗ ಬಿಡುಗಡೆ ಮಾಡಲಾಗುವುದು? (ಪೂರ್ಣ ಮಾಹಿತಿ ನೀಡುವುದು) | ದೇವನಹಳ್ಳಿ ತಾಲ್ಲೂಕಿಗೆ ಮಂಜೂರಾದ ಯಾವುದೇ ಕಾಮಗಾರಿಗಳನ್ನು ತಡೆಹಿಡಿದಿರುವುದಿಲ್ಲ. |

ಸಂಖ್ಯೆ: ಟಿಓಆರ್ 161 ಟಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 436 |
| ಸದಸ್ಯರ ಹೆಸರು | : | ಶ್ರೀ ಈಶ್ವರ ಖಂಡ್ರೆ (ಭಾಲ್ಕಿ) |
| ಉತ್ತರಿಸಬೇಕಾದ ದಿನಾಂಕ | : | 23-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯದಲ್ಲಿ 2018-19 ಮತ್ತು 2019-20ನೇ ಸಾಲಿಗೆ KMDC ವತಿಯಿಂದ ಅರಿವು ಶೈಕ್ಷಣಿಕ ಸಾಲ ಯೋಜನೆಯಡಿ ಎಷ್ಟು ಜನ ವಿದ್ಯಾರ್ಥಿಗಳಿಗೆ ಸಾಲ ಮಂಜೂರು ಮಾಡಲಾಗಿದೆ; ಎಷ್ಟು ಜನ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಾಲ ಬಿಡುಗಡೆ ಮಾಡಲಾಗಿದೆ ಹಾಗೂ ಬಿಡುಗಡೆಗೆ ಬಾಕಿ ಇರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮತ್ತು ತಾಲ್ಲೂಕುವಾರು ವಿವರ ಒದಗಿಸುವುದು) | ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಿಂದ ಅರಿವು ಶೈಕ್ಷಣಿಕ ಸಾಲ ಯೋಜನೆಯಡಿ 2018-19ನೇ ಸಾಲಿನಲ್ಲಿ 23400 ವಿದ್ಯಾರ್ಥಿಗಳಿಗೆ ರೂ.92.10 ಕೋಟಿ ಮತ್ತು 2019-20ನೇ ಸಾಲಿನಲ್ಲಿ 38576 ವಿದ್ಯಾರ್ಥಿಗಳಿಗೆ ರೂ.152.61 ಕೋಟಿಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.<br>ಅರಿವು ಅರ್ಜಿ Fresh /Renewal ಪ್ರಕರಣಗಳಲ್ಲಿ 4649 ವಿದ್ಯಾರ್ಥಿಗಳಿಗೆ ರೂ.17.14 ಕೋಟಿ ಮೊತ್ತದ ಅರಿವು ಸಾಲ ಬಿಡುಗಡೆಗೆ ಬಾಕಿ ಇರುತ್ತದೆ.<br>ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ. | ಅನೇಕ ವಿದ್ಯಾರ್ಥಿಗಳಿಗೆ ಸರಿಯಾದ ಸಮಯಕ್ಕೆ ಶೈಕ್ಷಣಿಕ ಸಾಲ ಬಿಡುಗಡೆಯಾಗದ ಕಾರಣ ಅವರ ಶೈಕ್ಷಣಿಕ ಪ್ರಗತಿ ಕುಂಠಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ತಕ್ಷಣವೇ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಾಲ ಬಿಡುಗಡೆ ಮಾಡಲು ಸರ್ಕಾರದ ಕ್ರಮ ಕೈಗೊಳ್ಳುವುದೇ? | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ |

ಸಂಖ್ಯೆ: **MWD 86 LMQ 2020**

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

Annexure 1

## Arivu General Proposal Recived From District Office & Also Pending In Head Office For Login Process.

| | Arivu General 2019-20 | | |
|---|---|---|---|
| Sl No | Districts | No Of Students | Amount Required |
| 1 | Bangalore-C | 325 | 12462556 |
| 2 | Bangalore-S | 135 | 4154311 |
| 3 | Bangalore-N | 431 | 14412788 |
| 4 | Bangalore -R | 70 | 2724343 |
| 5 | Ramanagaram | 155 | 2959265 |
| 6 | Kolar | 49 | 4310115 |
| 7 | Chikkaballapur | 236 | 5505205 |
| 8 | Chitradurga | 44 | 1963755 |
| 9 | Tumkur | 42 | 1144851 |
| 10 | Shimoga | 48 | 2170530 |
| 11 | Davangere | 135 | 5270926 |
| 12 | Raichur | 16 | 4165479 |
| 13 | Koppal | 22 | 1168455 |
| 14 | Bellary | 51 | 1630615 |
| 15 | Bidar | 685 | 25791425 |
| 16 | Gulbarga | 673 | 26014380 |
| 17 | Yadgir | 44 | 1504162 |
| 18 | Chickmagalur | 31 | 1042775 |
| 19 | Hassan | 18 | 384146 |
| 20 | Kodagu | 16 | 1699700 |
| 21 | Mysore | 109 | 3329800 |
| 22 | Mandya | 8 | 1834850 |
| 23 | D.Kannada | 510 | 19468025 |
| 24 | Chamarajanagar | 1 | 25000 |
| 25 | Udupi | 93 | 3370595 |
| 26 | Belgaum | 154 | 5408550 |
| 27 | Bijapur | 101 | 3724505 |
| 28 | Dharwad | 168 | 3527425 |
| 29 | Uttara kannada | 23 | 1935260 |
| 30 | Haveri | 135 | 2387254 |
| 31 | Gadag | 26 | 691840 |
| 32 | Bagalkote | 95 | 5200173 |
| Total | | 4649 | 171383059 |



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 453 |
| ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | : | 23-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಜನ ಹಜ್ ಯಾತ್ರಾರ್ಥಿಗಳಿಗೆ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ. ಯಾತ್ರಾರ್ಥಿಗಳ ಮನವಿಗಳ ಸಂಖ್ಯೆಯನ್ನು ಪರಿಗಣಿಸಿ ಸಂಖ್ಯಾಬಲವನ್ನು ಹೆಚ್ಚಿಸುವ ಕುರಿತಾದ ಇಲಾಖೆಯ ಕ್ರಮಗಳೇನು; | ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಕಳೆದ 3 ವರ್ಷಗಳಿಂದ ಹಜ್ ಯಾತ್ರೆಗಾಗಿ ಪ್ರಯಾಣ ಮಾಡಿರುವ ಯಾತ್ರಾರ್ಥಿಗಳ ಸಂಖ್ಯೆ ಈ ಕೆಳಕಂಡಂತಿದೆ.<br><br>ವರ್ಷ – ಯಾತ್ರಿಕರ ಸಂಖ್ಯೆ<br>2017 – 6161<br>2018 – 7092<br>2019 – 8337<br><br>ಮುಂಬೈನ ಭಾರತೀಯ ಹಜ್ ಸಮಿತಿಯು, ಭಾರತೀಯ ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯದ ಸಹಕಾರದೊಂದಿಗೆ ರಾಜ್ಯದ ಮುಸ್ಲಿಂ ಸಮುದಾಯದ ಜನಗಣತಿಯ ಆಧಾರದ ಮೇರೆಗೆ ರಾಜ್ಯದ ಹಜ್ ಯಾತ್ರಿಕರ ಕೋಟಾವನ್ನು ಜಿಲ್ಲಾವಾರು ನಿಗಧಿಪಡಿಸಲಾಗುವುದು. |
| ಆ. | ಹಜ್ ಯಾತ್ರಾರ್ಥಿಗಳಿಗೆ ರಾಜ್ಯ ಸರ್ಕಾರ ಒದಗಿಸಿಕೊಡುತ್ತಿರುವ ಸೌಕರ್ಯ/ ಸೌಲಭ್ಯಗಳು ಯಾವುವು; ಸದರಿ ಯೋಜನೆಗಾಗಿ ಕಳೆದ ಎರಡು ವರ್ಷಗಳಲ್ಲಿ ನೀಡಿರುವ ಒಟ್ಟು ಅನುದಾನದ ಮೊತ್ತವೆಷ್ಟು; | ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಆಯ್ಕೆಯಾದ ಹಜ್ ಯಾತ್ರಿಕರಿಗಾಗಿ ಜಿಲ್ಲಾವಾರು ಚುಚ್ಚುಮದ್ದು/ಲಸಿಕೆ ಕಾರ್ಯಕ್ರಮಗಳನ್ನು ಮತ್ತು ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುವುದು, ರಾಜ್ಯ ಹಜ್ ಸಮಿತಿಯು ಹಜ್ ಯಾತ್ರಿಕರ ಸುಲಭ ಹಾಗೂ ಸುಖಕರ ಪ್ರಯಾಣಕ್ಕಾಗಿ ಹಜ್ ಕ್ಯಾಂಪ್‌ಗಳನ್ನು ಬೆಂಗಳೂರು ಮತ್ತು ಮಂಗಳೂರಿನಲ್ಲಿ ಆಯೋಜಿಸುತ್ತಿದ್ದು, ನಿಗಧಿತ ಪ್ರಯಾಣದ ಮುನ್ನ ಕ್ಯಾಂಪ್‌ಗಳಿಗೆ ಆಗಮಿಸುವ ಎಲ್ಲಾ ಯಾತ್ರಿಕರಿಗೆ ವಿಮಾನ ನಿಲ್ದಾಣದಲ್ಲಿ ಸಿಗುವ ಎಲ್ಲಾ ರೀತಿಯ ಸೌಲಭ್ಯಗಳನ್ನು ಈ ಕ್ಯಾಂಪ್‌ಗಳಲ್ಲಿಯೇ ಕಲ್ಪಿಸಿ ಕೊಡಲಾಗುತ್ತದೆ. ವಿಮಾನ ನಿಲ್ದಾಣಗಳಿಂದ ನಿರ್ಗಮನ ಹಾಗೂ ಆಗಮನದ ಸಮಯದಲ್ಲಿ ಯಾತ್ರಿಕರಿಗೆ ಸಹಾಯ ಮತ್ತು ಸಹಕಾರ ನೀಡುವುದು.<br><br>ಕರ್ನಾಟಕ ರಾಜ್ಯ ಹಜ್ ಸಮಿತಿಯ ನಿರ್ವಹಣೆ ಹಾಗೂ ಹಜ್ ಕ್ಯಾಂಪ್‌ಗಳನ್ನು ಆಯೋಜಿಸಲು ಕಳೆದ ಎರಡು ವರ್ಷಗಳಲ್ಲಿ ನೀಡಿರುವ ಅನುದಾನದ ವಿವರ ಈ ಕೆಳಕಂಡಂತಿದೆ:<br><br>2018-19 – ರೂ.240.00 ಲಕ್ಷಗಳು<br>2019-20 – ರೂ.240.00 ಲಕ್ಷಗಳು |

| ಇ | ವಕ್ಫ್ ಆಸ್ತಿ ಸಂರಕ್ಷಣೆ ಕುರಿತು ಸರ್ಕಾರದ ಪರಿಣಾಮಕಾರಿ ಕ್ರಮಗಳೇನು; ರಾಜ್ಯದಲ್ಲಿನ ಒಟ್ಟು ವಕ್ಫ್ ಆಸ್ತಿಗಳ ದಾಖಲೀಕರಿಸಿ ಸಂರಕ್ಷಿಸಿಕೊಳ್ಳಲು ಸರ್ಕಾರದ ಕಟ್ಟುನಿಟ್ಟಿನ ಕ್ರಮಗಳು ಯಾವುವು; | ವಕ್ಫ್ ಆಸ್ತಿಗಳ ಸಂರಕ್ಷಣೆ ಕುರಿತು ಸರ್ಕಾರದ ಕ್ರಮಗಳು ಈ ಕೆಳಕಂಡಂತಿವೆ:<br><br>1. ವಕ್ಫ್ ಆಸ್ತಿಗಳ ಸಂಸ್ಥೆಯ ಹೆಸರಿನ ಎದುರು ಪಹಣಿಯಲ್ಲಿ "ವಕ್ಫ್ ಆಸ್ತಿ" ಎಂಬುದಾಗಿ ದಾಖಲಿಸಿ ಖಾತೆ ಬದಲಾವಣೆ ಮಾಡಲಾಗುತ್ತದೆ.<br>2. ಎಲ್ಲಾ ವಕ್ಫ್ ಆಸ್ತಿಗಳು "ಭೂಮಿ". "ಇ-ಸ್ವತ್ತು", "ಇ-ಆಸ್ತಿ ತಂತ್ರಾಂಶದಲ್ಲಿ ಫ್ಲಾಗ್ ಆನ್ ಮಾಡಲಾಗುತ್ತದೆ. ಇದರಿಂದಾಗಿ ನೋಂದಣಿ ಕಛೇರಿಗಳಲ್ಲಿ ಮಾರಾಟವಾಗುವ ಸಾಧ್ಯತೆಗಳು ಇರುವುದಿಲ್ಲ.<br>3. ವಕ್ಫ್ ಆಸ್ತಿ ಸಂರಕ್ಷಣೆ ಎಂಬ ಯೋಜನೆಯಡಿಯಲ್ಲಿ ವಕ್ಫ್ ಸಂಸ್ಥೆಗಳಿಗೆ ಅನುದಾನ ಬಿಡುಗಡೆಗೊಳಿಸಲಾಗುತ್ತದೆ. ಈ ಅನುದಾನದಿಂದ ಕಾಂಪೌಂಡ್ ಮತ್ತು ತಂತಿಬೇಲಿಯನ್ನು ಹಾಕಿ ವಕ್ಫ್ ಆಸ್ತಿಯನ್ನು ಸಂರಕ್ಷಿಸಲಾಗುತ್ತದೆ.<br>4. ರಾಜ್ಯದ ಎಲ್ಲಾ ವಕ್ಫ್ ಸ್ವತ್ತುಗಳ ಸರ್ವೇ ಕಾರ್ಯ ಪ್ರಗತಿಯಲ್ಲಿರುತ್ತದೆ. |
|---|---|---|

ಸಂಖ್ಯೆ: **MWD 88 LMQ 2020**

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು
ವಕ್ಫ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 458

ಮಾನ್ಯ ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ. ಟಿ. (ದೊಡ್ಡಬಳ್ಳಾಪುರ)

ವಿಷಯ : ಯಾತ್ರಿ ನಿವಾಸ/ಪ್ರವಾಸಿ ಸೌಲಭ್ಯ ಯೋಜನೆಯಡಿ ಅನುದಾನ ಬಿಡುಗಡೆ.

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ತಾಲ್ಲೂಕಿನ ಯಾತ್ರಿ ನಿವಾಸ/ಪ್ರವಾಸಿ ದೇವಸ್ಥಾನಗಳಾದ, ಹುಲುಕುಡಿ ಬೆಟ್ಟದ ಶ್ರೀ ವೀರಭದ್ರಸ್ವಾಮಿ ದೇವಸ್ಥಾನ, ಮಧುರೆ ಶನಿಮಹಾತ್ಮಸ್ವಾಮಿ ದೇವಸ್ಥಾನ, ಮಾಕಳಿಬೆಟ್ಟದ ಮಲ್ಲೇಶ್ವರಸ್ವಾಮಿ ದೇವಸ್ಥಾನ, ಅರಳುಮಲ್ಲಿಗೆ ಗ್ರಾಮದ ಚನ್ನಕೇಶವಸ್ವಾಮಿ ದೇವಸ್ಥಾನ, ಶ್ರೀಘಾಟಿ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನಗಳ, ಮೂಲಭೂತ ಸೌಕರ್ಯ ಯೋಜನೆಯಡಿ 2019-20ನೇ ಸಾಲಿನಲ್ಲಿ, ಮಂಜೂರಾದ ಅನುದಾನ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು ಸರ್ಕಾರದ ಗಮನಕ್ಕೆ ಬಂದಿರುತ್ತದೆ,<br><br>2019-20ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಶ್ರೀ ಘಾಟಿ ಸುಬ್ರಮಣ್ಯ ಸ್ವಾಮಿ ದೇವಸ್ಥಾನದ ಬಳಿ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಯನ್ನು ರೂ.200.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ದಿನಾಂಕ: 30-09-2019ರಂದು ಸರ್ಕಾರವು ಅನುಮೋದನೆ ನೀಡಿರುತ್ತದೆ. ಸದರಿ ಕಾಮಗಾರಿಯನ್ನು ಕರ್ನಾಟಕ ಪ್ರವಾಸೋದ್ಯಮ ಮೂಲಸೌಲಭ್ಯ ನಿಗಮ, ಬೆಂಗಳೂರು ರವರಿಗೆ ಈ ಕಾಮಗಾರಿಯನ್ನು ವಹಿಸಲಾಗಿರುತ್ತದೆ. ಕಾಮಗಾರಿಯನ್ನು ಅನುಷ್ಠಾನಗೊಳಿಸಲು ರೂ.100.00 ಲಕ್ಷಗಳನ್ನು ಮೊದಲನೇ ಕಂತಾಗಿ ಸದರಿ ಸಂಸ್ಥೆಗೆ ಬಿಡುಗಡೆ ಮಾಡಲಾಗಿರುತ್ತದೆ. ಕಾಮಗಾರಿಯ ಅಂದಾಜುಪಟ್ಟಿಯನ್ನು ಸಿದ್ಧಪಡಿಸಲಾಗುತ್ತಿದೆ.<br><br>ಉಳಿದಂತೆ, ಈ ಕೆಳಗಿನಂತೆ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/35/ಟಿಡಿಪಿ/2019, ದಿನಾಂಕ:11-07-2019ರಂದು ಸರ್ಕಾರವು ಅನುಮೋದನೆ ನೀಡಲಾಗಿತ್ತು. |

| ಕ್ರ. ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ |
|---|---|---|
| 1. | ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಹುಲುಕುಡಿ ಬೆಟ್ಟದ ಶ್ರೀ ವೀರಭದ್ರಸ್ವಾಮಿ ದೇವಸ್ಥಾನದ ಮೂಲಸೌಲಭ್ಯ ಅಭಿವೃದ್ಧಿ. | 100.00 |
| 2. | ಬೆಂಗಳೂರು ಗ್ರಾಮಾಂತರಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಕನಸವಾಡಿ ಗ್ರಾಮದ ಶ್ರೀ ಕ್ಷೇತ್ರ ಮಧುರೆ ಶನಿಮಹಾತ್ಮ ಸ್ವಾಮಿ ದೇವಸ್ಥಾನದ ಮೂಲಸೌಲಭ್ಯ ಅಭಿವೃದ್ಧಿ. | 100.00 |
| 3. | ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಮಾಕಳಿ ಬೆಟ್ಟದ ಮಲ್ಲೇಶ್ವರಸ್ವಾಮಿ ದೇವಸ್ಥಾನದ ಮೂಲಸೌಲಭ್ಯ ಅಭಿವೃದ್ಧಿ. | 100.00 |
| 4. | ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಅರಳುಮಲ್ಲಿಗೆ ಗ್ರಾಮದ ಶ್ರೀ ಲಕ್ಷ್ಮೀಚೆನ್ನಕೇಶವ ಸ್ವಾಮಿ ದೇವಸ್ಥಾನದ ಬಳಿ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿ. | 25.00 |

| | | |
|---|---|---|
| | | ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಜುಲೈ-2019 ರ ತಿಂಗಳಿನಲ್ಲಿ ಹೊರಡಿಸಿದ ಆದೇಶದಲ್ಲಿ, ಜುಲೈ ಮಾಹೆಯಲ್ಲಿ ಹೊರಡಿಸಿರುವ ಎಲ್ಲಾ ಆದೇಶಗಳನ್ನು ತಡೆ ಹಿಡಿಯಲು ಸೂಚಿಲಾಗಿರುತ್ತದೆ. ಈ ರೀತಿ ತಡೆಹಿಡಿದ ಎಲ್ಲಾ ಆದೇಶಗಳನ್ನು ಮರುಪರಿಶೀಲನೆಗಾಗಿ ಸರ್ಕಾರಕ್ಕೆ ಮಂಡಿಸಲಾಗಿತ್ತು. ಆ ನಂತರ ಸರ್ಕಾರವು ಹೊರಡಿಸಿರುವ ಆದೇಶಗಳಲ್ಲಿ ಮೇಲ್ಕಂಡ ಕೋಷ್ಟಕದಲ್ಲಿ ವಿವರಿಸಿರುವ ಕಾಮಗಾರಿಗಳನ್ನು ಮಾರ್ಪಡಿಸಿ, ಸರ್ಕಾರವು ಆದೇಶ ಹೊರಡಿಸಿರುತ್ತದೆ. ಮೇಲ್ಕಂಡ ಈ 4 ಕಾಮಗಾರಿಗಳು ಮಂಜೂರಾಗದ ಹಿನ್ನೆಲೆಯಲ್ಲಿ ಸದರಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಮೂಲಭೂತ ಸೌಕರ್ಯ ಹಾಗೂ ಅಭಿವೃದ್ಧಿಗೆ ಅನುದಾನ ಬಿಡುಗಡೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಇಲಾಖೆಗೆ ಪ್ರತಿ ವರ್ಷ ಆಯವ್ಯಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಅನುಮೋದನೆಗೊಂಡ ಕಾಮಗಾರಿಗಳಿಗೆ ಹಂತ ಹಂತವಾಗಿ ಪ್ರವಾಸಿ ಸ್ಥಳಗಳ ಅಭಿವೃದ್ಧಿಗೆ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಟಿಓಆರ್ 160 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 461
ಸದಸ್ಯರ ಹೆಸರು : ಶ್ರೀ ಭೀಮಾ ನಾಯ್ಕ ಎಸ್. (ಹಗರಿಬೊಮ್ಮನಹಳ್ಳಿ)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಚುನಾವಣೆಗಾಗಿ ಗ್ರಾಮ ಪಂಚಾಯಿತಿ ಸ್ಥಾನಗಳಿಗೆ ಪ್ರಕಟಗೊಂಡಿರುವ ವರ್ಗವಾರು ಮೀಸಲಾತಿಯಲ್ಲಿ, ಕೆಲವು ಗ್ರಾಮಗಳಲ್ಲಿ ವರ್ಗವಾರು ಜನರು ವಾಸವಿಲ್ಲದಿದ್ದರೂ ಅಥವಾ ಕೇವಲ ಒಬ್ಬ ವ್ಯಕ್ತಿ ಮಾತ್ರ ಇದ್ದರೂ ಮೀಸಲಾತಿ ಪ್ರಕಟಪಡಿಸಿ ಸಾರ್ವಜನಿಕರಲ್ಲಿ ಗೊಂದಲ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿಲ್ಲ. |
| (ಆ) | ಸದರಿ ಮೀಸಲಾತಿ ನಿಗದಿಪಡಿಸಲು ಸರ್ಕಾರವು ಅನುಸರಿಸಿರುವ ಮಾನದಂಡಗಳೇನು? | ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳಲ್ಲಿನ ಸ್ಥಾನಗಳನ್ನು ಆವರ್ತನೆಯ ಮೇಲೆ ಮೀಸಲಿಡುವ) ನಿಯಮಗಳು, 1998 ರಚಿಸಿದ್ದು ರಾಜ್ಯ ಚುನಾವಣಾ ಆಯೋಗದ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು ಜಿಲ್ಲಾಧಿಕಾರಿಯವರು ಸದಸ್ಯ ಸ್ಥಾನಗಳನ್ನು ಕ್ಷೇತ್ರವಾರು ಹಂಚಿಕೆ ಮಾಡಿ ನಿಗದಿಪಡಿಸುತ್ತಾರೆ. ಸದರಿ ನಿಯಮದಂತೆ,<br><br>1) ಗ್ರಾಮ ಪಂಚಾಯಿತಿಗಳಲ್ಲಿ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಸ್ಥಾನಗಳನ್ನು ಜಿಲ್ಲಾಧಿಕಾರಿಯವರು ಪಂಚಾಯಿತಿ ಪ್ರದೇಶದಲ್ಲಿ ಒಟ್ಟು ಜನಸಂಖ್ಯೆಗೆ ಹೋಲಿಸಲಾಗಿ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯ ಶೇಕಡವಾರು ಅತಿ ಹೆಚ್ಚು ಇರುವಂತಹ ಮತ ಕ್ಷೇತ್ರಗಳಿಗೆ ಆವರ್ತನೆಯ ಮೇಲೆ ಹಂಚತಕ್ಕದ್ದಾಗಿರುತ್ತದೆ.<br>2) ಗ್ರಾಮ ಪಂಚಾಯಿತಿಯ ಪರಿಶಿಷ್ಟ ಜಾತಿಗಳಿಗೆ ಮೀಸಲಾದ ಸ್ಥಾನಗಳನ್ನು ಮೇಲೆ ತಿಳಿಸಿರುವ ರೀತಿಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರಿಗೆ ಆವರ್ತನೆ ಮೇರೆಗೆ ಹಂಚಿಕೆ ಮಾಡಬೇಕಾಗಿರುತ್ತದೆ. |

(HD)

| | | |
|---|---|---|
| | | 3) ಹಿಂದುಳಿದ ವರ್ಗಗಳಿಗೆ ಮತ್ತು ಇತರ ಮೀಸಲಿರಿಸಿದ ಪ್ರವರ್ಗಗಳಿಗೆ ಗ್ರಾಮ ಪಂಚಾಯಿತಿಯಲ್ಲಿ ಮೀಸಲಿರಿಸಿದ ಸ್ಥಾನಗಳನ್ನು ಜಿಲ್ಲಾಧಿಕಾರಿಗಳು ತಾವು ಸೂಕ್ತವೆಂದು ಭಾವಿಸಬಹುದಾದ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ಆವರ್ತನೆಯ ಮೇಲೆ ಹಂಚಬಹುದಾಗಿರುತ್ತದೆ.<br><br>ಈ ಬಗ್ಗೆ ಆಯೋಗದಿಂದ ಜಿಲ್ಲಾಧಿಕಾರಿಗಳಿಗೆ ಸೂಚನೆಗಳನ್ನು ನೀಡಲಾಗಿದೆ. ಅದರಂತೆ ಜಿಲ್ಲಾಧಿಕಾರಿಗಳು ವರ್ಗವಾರು ಸ್ಥಾನಗಳನ್ನು ನಿಗದಿಪಡಿಸಿ ಅಧಿಸೂಚಿಸಿರುತ್ತಾರೆ. |

ಸಂ. ಗ್ರಾಅಪ 713 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 463

ಮಾನ್ಯ ಸದಸ್ಯರ ಹೆಸರು : ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ)

ವಿಷಯ : ಪ್ರವಾಸಿತಾಣಗಳು

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ದೇವರಾಯದುರ್ಗ ದೇವಸ್ಥಾನವನ್ನು ಪ್ರವಾಸೋದ್ಯಮ ಇಲಾಖೆಯು ಪ್ರವಾಸಿ ತಾಣವೆಂದು ಸರ್ಕಾರ ಯಾವಾಗ ಗುರುತಿಸಿದೆ; | ಸರ್ಕಾರವು 2015-20ರ ಪ್ರವಾಸೋದ್ಯಮ ನೀತಿ ಅನ್ವಯ ತುಮಕೂರು ತಾಲ್ಲೂಕಿನಲ್ಲಿ ಇಲಾಖೆಯು ದೇವರಾಯನದುರ್ಗವನ್ನು ಪ್ರವಾಸಿ ತಾಣವನ್ನಾಗಿ ಗುರುತಿಸಿದೆ. |
| ಆ) | ಈ ದೇವಸ್ಥಾನವನ್ನು ಅಭಿವೃದ್ಧಿ ಪಡಿಸಲು ಅನುದಾನವನ್ನೇನಾದರು ಬಿಡುಗಡೆ ಮಾಡಲಾಗಿದೆಯೇ; ಹಾಗಿದ್ದಲ್ಲಿ ಯಾವಾಗ ಎಷ್ಟು ಪ್ರಮಾಣದ ಅನುದಾನವನ್ನು ಬಿಡುಗಡೆ ಮಾಡಲಾಗಿದೆ ಮತ್ತು ಕೈಗೆತ್ತಿಕೊಂಡಿರುವ ಅಭಿವೃದ್ಧಿ ಕಾಮಗಾರಿಗಳಾವುವು; (ವಿವರಗಳನ್ನು ನೀಡುವುದು) | ದೇವರಾಯದುರ್ಗ ಪ್ರದೇಶವನ್ನು ಅಭಿವೃದ್ಧಿ ಪಡಿಸಲು ಪ್ರವಾಸೋದ್ಯಮ ಇಲಾಖೆ ವತಿಯಿಂದ ಬಂಡವಾಳ ವೆಚ್ಚ ಲೆಕ್ಕಶೀರ್ಷಿಕೆ ಅಡಿ ಈ ಕೆಳಕಂಡ ಎರಡು ಕಾಮಗಾರಿಗಳು ಮಂಜೂರಾಗಿರುತ್ತವೆ. ವಿವರ ಕೆಳಗಿನಂತಿದೆ.<br><br>1. 2018-19ನೇ ಸಾಲಿನಲ್ಲಿ ತುಮಕೂರು ಜಿಲ್ಲೆ, ಊರ್ಡಿಗೆರೆ ಹೋಬಳಿ ದೇವರಾಯನದುರ್ಗ ಗ್ರಾಮದ ಶ್ರೀ ಭೋಗಲಕ್ಷ್ಮೀ ನರಸಿಂಹಸ್ವಾಮಿ ದೇವಸ್ಥಾನ ಹಿಂಭಾಗದಲ್ಲಿರುವ ಮಯೂರ ಮೇಘದೂತ ಕಟ್ಟಡ ನವೀಕರಣ ದುರಸ್ಥಿ ಮತ್ತು ಫೆನ್ಸಿಂಗ್ (ಸ.ನಂ.8ರಲ್ಲಿರುವ ಕಟ್ಟಡ) ಕಾಮಗಾರಿಯನ್ನು ರೂ.80.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಮಂಜೂರಾಗಿರುತ್ತದೆ. ಈ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆ ರವರ ಮೂಲಕ ಅನುಷ್ಠಾನಗೊಳಿಸಲು ಮೊದಲ ಕಂತಾಗಿ ರೂ.50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಮುಖ್ಯ ವಾಸ್ತುಶಿಲ್ಪಿ ಲೋಕೋಪಯೋಗಿ ಇಲಾಖೆ ತುಮಕೂರು ವಿಭಾಗ, ತುಮಕೂರುರವರಿಂದ ಅನುಮೋದಿತ ನಕ್ಷೆ ಮತ್ತು |

| | | |
|---|---|---|
| | | 2. 2018-19ನೇ ಸಾಲಿನಲ್ಲಿ ತುಮಕೂರು ಜಿ., ಊರ್ಡಿಗೆರೆ ಹೋ., ದೇವರಾಯನದುರ್ಗ ಗ್ರಾಮದ ಶ್ರೀ ಭೋಗಲಕ್ಷ್ಮೀ ನರಸಿಂಹಸ್ವಾಮಿ ದೇವಸ್ಥಾನ ಹಿಂಭಾಗದಲ್ಲಿರುವ ಕಲ್ಯಾಣಿಯ ಪಕ್ಕದಲ್ಲಿ ಮಹಿಳೆಯರಿಗೆ ಹಾಗೂ ಪುರುಷರಿಗೆ ಪ್ರತ್ಯೇಕ ಸ್ನಾನದ ಗೃಹ ಮತ್ತು ಶೌಚಾಲಯ ಕುಡಿಯುವ ನೀರು (ಆರ್.ಒ.ಪ್ಲಾಂಟ್) ಅಭಿವೃದ್ಧಿ ಕಾಮಗಾರಿಯನ್ನು ರೂ.35.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಮಂಜೂರಾಗಿರುತ್ತದೆ. ಈ ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್ ಸಂಸ್ಥೆ ರವರ ಮೂಲಕ ಅನುಷ್ಠಾನಗೊಳಿಸಲು ರೂ.35.00 ಲಕ್ಷಗಳ ಪೂರ್ಣ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ದಿ: 28/08/2019 ರಂದು ಕಾಮಗಾರಿಯ ಅಂದಾಜು ಪಟ್ಟಿಗೆ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ತುಮಕೂರುರವರು ಈ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡಿರುತ್ತಾರೆ. ಸ್ಥಳೀಯ ಸಮಸ್ಯೆಯಿಂದ ಕಾಮಗಾರಿಯನ್ನು ಸ್ಥಗಿತಗೊಳಿಸಲಾಗಿದೆ. ಪ್ರಕರಣವು ನ್ಯಾಯಲಯದಲ್ಲಿರುತ್ತದೆ. |
| ಇ) | ದೇವರಾಯನದುರ್ಗದ ಕೆರೆಯ ಅಭಿವೃದ್ಧಿಗಾಗಿ ಅನುದಾನವನ್ನೇನಾದರು ಬಿಡುಗಡೆ ಮಾಡಲಾಗಿದೇ; ಹಾಗಿದ್ದಲ್ಲಿ, ಯಾವಾಗ ಎಷ್ಟು ಪ್ರಮಾಣದ ಅನುದಾನವನ್ನು ಬಿಡುಗಡೆ ಮಾಡಲಾಗಿದೆ ಮತ್ತು ಕೈಗೆತ್ತಿಕೊಂಡಿರುವ ಅಭಿವೃದ್ಧಿ ಕಾಮಗಾರಿಗಳಾವುವು? (ವಿವರ ನೀಡುವುದು) | ದೇವರಾಯನದುರ್ಗದ ಕೆರೆಯನ್ನು ಅಭಿವೃದ್ಧಿಪಡಿಸಲು ಯಾವುದೇ ಕಾಮಗಾರಿಯನ್ನು ಕೈಗೆತ್ತಿಕೊಂಡಿರುವುದಿಲ್ಲ, ಆದುದರಿಂದ ಯಾವುದೇ ಅನುದಾನ ಬಿಡುಗಡೆ ಮಾಡಿರುವುದಿಲ್ಲ. ........ |

ಸಂಖ್ಯೆ: ಟಿಓಆರ್ 168 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **468** |
| ವಿಧಾನ ಸಭಾ ಸದಸ್ಯರ ಹೆಸರು | ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು) |
| ಉತ್ತರಿಸುವವರು | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು. |
| ಉತ್ತರಿಸಬೇಕಾದ ದಿನಾಂಕ | 23-09-2020 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪ್ರಸ್ತುತ ಎಷ್ಟು ಅಂಗನವಾಡಿ ಕಾರ್ಯಕರ್ತರು, ಸಹಾಯಕರು ಕಾರ್ಯ ನಿರ್ವಹಿಸುತ್ತಿದ್ದಾರೆ; | **ರಾಜ್ಯದಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ವಿವರ ಈ ಕೆಳಕಂಡಂತಿದೆ.**<br><br>ಅಂಗನವಾಡಿ ಕಾರ್ಯಕರ್ತೆಯರು: 64535<br>ಅಂಗನವಾಡಿ ಸಹಾಯಕಿಯರು: 59726 |
| ಆ | ಕೊರೋನಾ ವಾರಿಯರ್ಸ್‌ಗಳಾಗಿ ವಿಶೇಷ ಹೆಚ್ಚುವರಿ ಕೆಲಸ ಮಾಡಿದ ಅಂಗನವಾಡಿ ಕಾರ್ಯಕರ್ತರ ವೇತನ ಹೆಚ್ಚಳ ಹಾಗೂ ಇತರೆ ಭತ್ಯೆ ಪಾವತಿ ವಿಚಾರದಲ್ಲಿ ಸರ್ಕಾರ ಈ ಹಿಂದೆ ಸದರಿ ನೌಕರರ ಮುಷ್ಕರ ಸಂದರ್ಭದಲ್ಲಿ ನೀಡಿದ ವಾಗ್ದಾನದ ಬಗ್ಗೆ ನಿಲುವೇನು; | ರಾಜ್ಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಶಾ ಕಾರ್ಯಕರ್ತೆಯರಿಗೆ ನೀಡಲಾಗುತ್ತಿರುವ ಪ್ರೋತ್ಸಾಹ ಧನದ ಮಾದರಿಯಲ್ಲಿಯೇ ಅಂಗನವಾಡಿ ಕಾರ್ಯಕರ್ತೆಯರಿಗೂ ಸಹ ಪ್ರೋತ್ಸಾಹ ಧನವನ್ನು ನೀಡುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಕೇಂದ್ರ ಸರ್ಕಾರಕ್ಕೂ ಸಹ ಒಂದು ಬಾರಿ ವಿಶೇಷ ಭತ್ಯೆಯನ್ನು ಮಂಜೂರು ಮಾಡಲು ಕೋರಿದೆ. ಕೇಂದ್ರ ಸರ್ಕಾರದಿಂದ ಮಂಜೂರಾತಿ ನೀಡಿದಲ್ಲಿ ವಿಶೇಷ ಭತ್ಯೆಯನ್ನು ನೀಡಲಾಗುವುದು. |
| ಇ | ಅಂಗನವಾಡಿ ಕಾರ್ಯಕರ್ತರನ್ನು ಸರ್ಕಾರಿ ನೌಕರರನ್ನಾಗಿ ಪರಿವರ್ತಿಸಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸುವ ಬಗ್ಗೆ ಸರ್ಕಾರದ ನಿಲುವೇನು; | ಮೂಲತ: ಕೇಂದ್ರ ಸರ್ಕಾರದ ಮಾರ್ಗಸೂಚಿ ಹಾಗೂ ನಿಯಮಗಳನ್ವಯ ಅಂಗವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರ ಸೇವೆಯು ಗೌರವಧನ ಸೇವೆಯಾಗಿದ್ದು, ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರನ್ನು ಸರ್ಕಾರಿ ನೌಕರರನ್ನಾಗಿ ಪರಿಗಣಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

| ಈ | ಸಮಾನ ಕೆಲಸಕ್ಕೆ ಸಾಮಾನ ವೇತನ ಎಂಬ ನೀತಿಯಂತೆ ಅಂಗನವಾಡಿ ಕಾರ್ಯಕರ್ತರ ವೇತನ ಭತ್ಯೆ, ವಿಮೆ, ಪಿಂಚಣಿ ಹೆಚ್ಚಳದ ಬಗ್ಗೆ ಸರ್ಕಾರದ ನಿಲುವೇನು? | ಅಂಗನವಾಡಿ ಕಾರ್ಯಕರ್ತೆಯರ ಸೇವೆಯು ಗೌರವ ಸೇವೆಯಾಗಿರುವುದರಿಂದ ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ನೀತಿ ಅನ್ವಯಿಸುವುದಿಲ್ಲ. ಅಂಗನವಾಡಿ ಕಾರ್ಯಕರ್ತೆಯರ ಗೌರವಧನವನ್ನು ಕಳೆದ ನವಂಬರ್ ತಿಂಗಳಲ್ಲಿ ಹೆಚ್ಚಳ ಮಾಡಲಾಗಿದೆ. ಪ್ರಸ್ತುತ ಗೌರವಧನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
|---|---|---|

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 175 ಐಸಿಡಿ 2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 469
ಸದಸ್ಯರ ಹೆಸರು : ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿನ ಗ್ರಾಮ ಪಂಚಾಯತ್‌ಗಳಲ್ಲಿ ಖಾಲಿ ಇರುವ ಪಿ.ಡಿ.ಓ/ಕಾರ್ಯದರ್ಶಿ, ದ್ವಿತೀಯ ದರ್ಜೆ ಸಹಾಯಕುರ ಹುದ್ದೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ) | ರಾಜ್ಯದಲ್ಲಿ ಖಾಲಿ ಇರುವ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳ ಸಂಖ್ಯೆ:838<br><br>ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-1 ಹುದ್ದೆಗಳ ಸಂಖ್ಯೆ:390<br><br>ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 ಹುದ್ದೆಗಳ ಸಂಖ್ಯೆ:827<br><br>ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಸಂಖ್ಯೆ:564<br><br>ಜಿಲ್ಲಾವಾರು ವಿವರವನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| (ಆ) | ಸಾರ್ವಜನಿಕರಿಗೆ ಆಗುತ್ತಿರುವ ಅನಾನುಕೂಲತೆ ತಪ್ಪಿಸಲು ಸದರಿ ಖಾಲಿ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು. | ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದಕ್ಕೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ನೇಮಕಾತಿ ಪ್ರಾಧಿಕಾರ ಆಗಿದ್ದು ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-1 ವೃಂದದ ಅರ್ಹ ನೌಕರರು ಲಭ್ಯವಾದಂತೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಮತ್ತು ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಗ್ರೇಡ್-1 ಮತ್ತು ಗ್ರೇಡ್-2 ವೃಂದಕ್ಕೆ ಜಿಲ್ಲಾ ಪಂಚಾಯಿತಿಗಳ ಉಪ ಕಾರ್ಯದರ್ಶಿ (ಅಭಿವೃದ್ಧಿ) ರವರು ನೇಮಕಾತಿ ಪ್ರಾಧಿಕಾರ ಆಗಿದ್ದು ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 ವೃಂದದ ಅರ್ಹ ನೌಕರರು ಲಭ್ಯವಾದಂತೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಸರ್ಕಾರದಿಂದ ಈಗಾಗಲೇ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br><br>ಮಾರ್ಚ್ 2018 ರಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ವೃಂದದ ನೇರ ನೇಮಕಾತಿ ಕೋಟಾದಲ್ಲಿ ಖಾಲಿ ಇದ್ದ 815 ಹುದ್ದೆಗಳು ಮತ್ತು ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-1 ವೃಂದದ 809 ಹುದ್ದೆಗಳಿಗೆ ಆಯ್ಕೆ ಮಾಡಿ ನೇಮಕಾತಿ ಮಾಡಲಾಗಿದೆ.<br><br>ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 ವೃಂದದ |

| | | |
|---|---|---|
| | | ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿದ 263 ಹುದ್ದೆಗಳು ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶದ 80 ಹುದ್ದೆಗಳು ಸೇರಿದಂತೆ ಒಟ್ಟು 343 ಹುದ್ದೆಗಳಿಗೆ ನೇರ ನೇಮಕಾತಿ ಮಾಡಲು ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕ ವೃಂದದ ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿದ 55 ಹುದ್ದೆಗಳು ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶದ 103 ಹುದ್ದೆಗಳು ಸೇರಿದಂತೆ ಒಟ್ಟು 158 ಹುದ್ದೆಗಳಿಗೆ ನೇರ ನೇಮಕಾತಿ ಮಾಡಲು ಉದ್ದೇಶಿಸಲಾಗಿತ್ತು.<br><br>ಪ್ರಸ್ತುತ ಆರ್ಥಿಕ ಇಲಾಖೆಯು ಸುತ್ತೋಲೆ ಸಂಖ್ಯೆ:ಆಇ:03:ಬಿಇಎಂ:2020 ದಿನಾಂಕ:06-07-2020 ರಲ್ಲಿ ಕೋವಿಡ್-19 ನಿಂದಾಗಿ ಉಂಟಾಗಿರುವ ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ನಿಟ್ಟಿನಲ್ಲಿ 2020-21 ನೇ ಸಾಲಿನಲ್ಲಿ ಯಾವುದೇ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ತಡೆಹಿಡಿಯುವಂತೆ ನಿರ್ದೇಶನ ನೀಡಿರುವುದರಿಂದ ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 ಹುದ್ದೆಗೆ ನೇಮಕಾತಿ ಮಾಡುವುದನ್ನು ತಡೆಹಿಡಿಯಲಾಗಿದೆ. |
| (ಇ) | ಗ್ರಾಮ ಪಂಚಾಯತ್ ನೌಕರರ ಹುದ್ದೆಯಿಂದ 2ನೇ ದರ್ಜೆ ಕಾರ್ಯದರ್ಶಿ/ಲೆಕ್ಕಿಗ ಗುಮಾಸ್ತ ಹುದ್ದೆ ಭರ್ತಿ ಮಾಡುವ ಕೋಟಾವನ್ನು ಒಂದು ಬಾರಿಗೆ 100% ರಷ್ಟು ನೀಡಿದರೆ 20-25 ವರ್ಷ ಸೇವೆ ಸಲ್ಲಿಸಿದ ಸಹಸ್ರಾರು ಅನುಭವಿ ಪಂಚಾಯತ್ ನೌಕರರಿಗೆ ನ್ಯಾಯ ಕೊಟ್ಟಂತೆ ಆಗುವುದಿಲ್ಲವೇ; | ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-2 / ದ್ವಿತೀಯ ದರ್ಜೆ ಲೆಕ್ಕ ಸಹಾಯಕ ಹುದ್ದೆ ಭರ್ತಿ ಮಾಡುವ ಕೋಟಾವನ್ನು ಒಂದು ಬಾರಿಗೆ 100% ರಷ್ಟು ಗ್ರಾಮ ಪಂಚಾಯತ್ ನೌಕರರಾದ ಬಿಲ್‌ಕಲೆಕ್ಟರ್ / ಗುಮಾಸ್ತ / ಬೆರಳಚ್ಚುಗಾರ ಹುದ್ದೆಯಿಂದ ಆಯ್ಕೆ ಮೂಲಕ ನೇರ ನೇಮಕಾತಿ ಮಾಡಲು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |
| (ಈ) | ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಹೆಚ್ಚುವರಿ ಕೆಲಸದ ಹೊರೆ ಇದ್ದು ಸದರಿ ಹುದ್ದೆಯನ್ನು ಮೇಲ್ದರ್ಜೆಗೇರಿಸುವ ಸರ್ಕಾರದ ಈ ಹಿಂದಿನ ನಿರ್ಧಾರ ಯಾವ ಹಂತದಲ್ಲಿದೆ; | ಸರ್ಕಾರದ ಪರಿಶೀಲನೆಯಲ್ಲಿದೆ. |
| (ಉ) | ತಾಲ್ಲೂಕಿಗೊಂದು ಆರ್.ಡಿ.ಓ ಬದಲಾಗಿ ಹೋಬಳಿಗೊಬ್ಬ ಆರ್.ಡಿ.ಓ ಒದಗಿಸುವ ವಿಚಾರದಲ್ಲಿ ಸರ್ಕಾರದ ನಿಲುವೇನು? | ಪ್ರಸ್ತುತ ಇಂತಹ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಸಂ. ಗ್ರಾಅಪ 702 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 623 |
|---|---|
| ಸದಸ್ಯರ ಹೆಸರು | ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ) |
| ಉತ್ತರಿಸಬೇಕಾದ ದಿನಾಂಕ | 23.09.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಖಾನಾಪುರ ವಿಧಾನಸಭಾ ಕ್ಷೇತ್ರದ ಪಂಚಾಯತ್ ರಾಜ್ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಸ್ತಗಿತಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ. | ಪ್ರಸ್ತುತ ಸ್ಥಗಿತಗೊಂಡಿರುವ ಕಾಮಗಾರಿಗಳು ಯಾವುವು; | ಸ್ಥಗಿತಗೊಂಡಿರುವ ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ. | ಸದರಿ ಕಾಮಗಾರಿಗಳನ್ನು ಮುಂದುವರೆಸಿ ಪೂರ್ಣಗೊಳಿಸಲು ಸರ್ಕಾರವು ಯಾವ ಕ್ರಮಗಳನ್ನು ಕೈಗೊಂಡಿದೆ; | ತಡೆಹಿದಿರುವ ಕಾಮಗಾರಿಗಳನ್ನು ಆರ್ಥಿಕ ಲಭ್ಯತೆಯನ್ನಾಧರಿಸಿ ಮುಂದುವರೆಸಲು ಕ್ರಮ ಕೈಗೊಳ್ಳಬೇಕಿದೆ. |

**ಕಡತ ಸಂಖ್ಯೆ: ಗ್ರಾಅಪ:ಅಧಿ07/10:ಆರ್ಆರ್ಸಿ:2020**

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

**ವಿಧಾನಸಭೆ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 623**

**ಅನುಬಂಧ**

(ರೂ. ಕೋಟಿಗಳಲ್ಲಿ)

| ಕ್ರ.ಸಂ | ಜಿಲ್ಲೆ | ವಿಧಾನಸಭಾ ಕ್ಷೇತ್ರ | ಅನುಮೋದಿಸಿರುವ ಮೊತ್ತ | ತಡೆಹಿಡಿದು ಮುಂದುವರೆಸಿರುವ ಮೊತ್ತ | ತಡೆಹಿಡಿದು ಮುಂದುವರೆಸಲು ಬಾಕಿ ಇರುವ ಮೊತ್ತ | ತಡೆಹಿಡಿದ ಕಾಮಗಾರಿಗಳ ವಿವರ | | |
|---|---|---|---|---|---|---|---|---|
| | | | | | | ಕ್ರ.ಸಂ | ಕಾಮಗಾರಿಗಳ ವಿವರ | ಮೊತ್ತ |
| 1 | ಬೆಳಗಾವಿ | ಖಾನಾಪುರ | 6.00 | 2.00 | 4.00 | 1 | ಖಾನಾಪುರ ತಾಲ್ಲೂಕಿನ ಬಿಜಗರ್ಣಿ–ಕಾಪೋಲಿ. ಕೆ.ಜಿ. ಮುಖ್ಯ ರಸ್ತೆಯಿಂದ ಅನಗಡಿ ಗ್ರಾಮದವರೆಗಿನ ಕೂಡು ರಸ್ತೆ ಸುಧಾರಣೆ | 75.00 |
| | | | | | | 2 | ಖಾನಾಪುರ ತಾಲ್ಲೂಕಿನ ತೀರ್ಥಕುಂಡೆ ಕ್ರಾಸ್‌ದಿಂದ ಕೌಲಾಪುರವಾಡಾ ಗ್ರಾಮದವರೆಗೆ ಕೂಡು ರಸ್ತೆ ಸುಧಾರಣೆ ಮಾಡುವುದು | 65.00 |
| | | | | | | 3 | ಖಾನಾಪುರ ತಾಲ್ಲೂಕಿನ ಸಣ್ಣಹೊಸೂರು ದಿಂದ ತೋಪಿಕಟ್ಟಿ ಗ್ರಾಮದವರೆಗೆ ಕೂಡು ರಸ್ತೆ ಸುಧಾರಣೆ | 70.00 |
| | | | | | | 4 | ಖಾನಾಪೂರ ತಾಲ್ಲೂಕಿನ ರಾಷ್ಟ್ರೀಯ (4ಎ) ಹೆದ್ದಾರಿಯಿಂದ ಸಂಗರಗಾಳಿ ಗ್ರಾಮದವರೆಗೆ ಕೂಡು ರಸ್ತೆ ಸುಧಾರಣೆ | 60.00 |
| | | | | | | 5 | ಖಾನಾಪೂರ ತಾಲ್ಲೂಕಿನ ಮಾಂಜರಪೈ ದಿಂದ ಸಾತ್ನಾಳಿ ಗ್ರಾಮದವರೆಗೆ ಕೂಡು ರಸ್ತೆ ಸುಧಾರಣೆ | 45.00 |
| | | | | | | 6 | ಖಾನಾಪೂರ ತಾಲ್ಲೂಕಿನ ನಿಲಾವಡೆ ಜಿಲ್ಲಾ ಮುಖ್ಯ ರಸ್ತೆಯ ಕ್ರಾಸ್ ದಿಂದ ಅಂಬೋಳಿ ಗ್ರಾಮದವರೆಗೆ ಕೂಡು ರಸ್ತೆ ಸುಧಾರಣೆ | 55.00 |
| | | | | | | 7 | ಖಾನಾಪೂರ ತಾಲ್ಲೂಕಿನ ಇದ್ದಲಹೊಂಡ ದಿಂದ ಶಿಂಗೆನಕೊಪ್ಪ ಗ್ರಾಮದವರೆಗೆ ಕೂಡು ರಸ್ತೆ ಸುಧಾರಣೆ | 30.00 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 630

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ನಂಜೇಗೌಡ ಕೆ.ವೈ (ಮಾಲೂರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಮಾಲೂರು ತಾಲ್ಲೂಕು ವ್ಯಾಪ್ತಿಯಲ್ಲಿರುವ ಅಂಗನವಾಡಿ ಕಟ್ಟಡಗಳು ದುರಸ್ತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಅವುಗಳು ಯಾವುವು (ವಿವರ ಒದಗಿಸುವುದು). | ಹೌದು.<br>ವಿವರವನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಆ. | ಹೊಸ ಅಂಗನವಾಡಿ ಕಟ್ಟಡಗಳ ನಿರ್ಮಾಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು ಹಾಗೂ ಅದಕ್ಕೆ ಮಂಜೂರಾದ ಅನುದಾನವೆಷ್ಟು? (ಸಂಪೂರ್ಣ ವಿವರ ನೀಡುವುದು). | ಅನುದಾನ ಲಭ್ಯತೆ ಹಾಗು ನಿವೇಶನ ಲಭ್ಯತೆಗನುಗುಣವಾಗಿ ಹೊಸ ಅಂಗನವಾಡಿ ಕಟ್ಟಡಗಳ ನಿರ್ಮಾಣಕ್ಕೆ ಕ್ರಮವಹಿಸಲಾಗುತ್ತಿದೆ.<br>2019-20ನೇ ಸಾಲಿನಲ್ಲಿ ಮಂಜೂರಾಗಿ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿವೆ: (see table below) |

| ಕ್ರ ಸಂ | ಯೋಜನೆ ಹೆಸರು | ಅಂಗನವಾಡಿ ಕೇಂದ್ರದ ಹೆಸರು | ಮಂಜೂರಾಗಿ ಬಿಡುಗಡೆಯಾದ ಅನುದಾನದ ವಿವರ (ರೂ. ಲಕ್ಷಗಳಲ್ಲಿ) |
|---|---|---|---|
| 1 | ವಿಶೇಷ ಅಭಿವೃದ್ಧಿ ಯೋಜನೆ | ಕೆ.ಜಿ. ಹಳ್ಳಿ | 16.50 |
| 2 | ನರೇಗಾ ಒಗ್ಗೂಡಿಸುವಿಕೆ | ಹನುಮ ನಾಯಕನಹಳ್ಳಿ | 5.00 |
| ಒಟ್ಟು | | 02 ಕಟ್ಟಡಗಳು | 21.50 |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 173 ಐಸಿಡಿ 2020

## ಅನುಬಂಧ-1

| ಶ್ರೀ ನಂಜೇಗೌಡ.ಕೆ.ವೈ, ಶಾಸಕರು, (ಮಾಲೂರು) ವಿಧಾನಸಭಾ ಸದಸ್ಯರು, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 630 ಕ್ಕೆ ಅನುಬಂಧ | | | |
|---|---|---|---|
| ಮಾಲೂರು ತಾಲ್ಲೂಕಿನಲ್ಲಿ ದುರಸ್ಥಿ ಮಾಡಬೇಕಾದ ಅಂಗನವಾಡಿ ಕೇಂದ್ರಗಳ ವಿವರ | | | |
| ಕ್ರ.ಸಂ | ದುರಸ್ಥಿ ಮಾಡಬೇಕಾದ ಅಂಗನವಾಡಿ ಕಟ್ಟಡಗಳ ಹೆಸರು | ಗ್ರಾಮ ಪಂಚಾಯಿತಿ ಹೆಸರು | ದುರಸ್ತಿ ಮಾಡಬೇಕಾದ ವಿವರ |
| 1 | ಮಿಣಸಂದ್ರ | ಜಯಮಂಗಲ | ನೆಲ, ಕಿಟಕಿ, ಬಾಗಿಲು,ಮೇಲ್ಚಾವಣಿ ದುರಸ್ತಿ ಗೋಡೆ ರಿಪೇರಿ ಮತ್ತು ನೀರಿನ ಸಂಪು ಟ್ಯಾಂಕ್ ಪೈಪ್ ಲೈನ್ |
| 2 | ಚನ್ನಿಗರಾಯಪುರ | ಬಾಳಿಗಾನಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ ಮತ್ತು ನೀರಿನ ಟ್ಯಾಂಕ್ |
| 3 | ತಾಳಕುಂಟೆ-1 | ಜಯಮಂಗಲ | ನೆಲ, ಕಿಟಕಿ, ಬಾಗಿಲು,ಮೇಲ್ಚಾವಣಿ ದುರಸ್ತಿ ಗೋಡೆ ರಿಪೇರಿ ಮತ್ತು ನೀರಿನ ಸಂಪು ಟ್ಯಾಂಕ್ ಪೈಪ್ ಲೈನ್ |
| 4 | ಬಾಳಿಗಾನಹಳ್ಳಿ | ಬಾಳಿಗಾನಹಳ್ಳಿ | ನೆಲ, ಕಿಟಕಿ, ಬಾಗಿಲು,ಮೇಲ್ಚಾವಣಿ ದುರಸ್ತಿ ಗೋಡೆ ರಿಪೇರಿ ಮತ್ತು ನೀರಿನ ಸಂಪು ಟ್ಯಾಂಕ್ ಪೈಪ್ ಲೈನ್ |
| 5 | ಚಿಕ್ಕ ಇಗ್ಗಲೂರು | ಬಾಳಿಗಾನಹಳ್ಳಿ | ನೆಲ ಮತ್ತು ಅಡಿಗೆ ಮನೆ ಕಿಟಕಿ ರಿಪೇರಿ |
| 6 | ಚವರ ಮಂಗಲ | ತುರಣಸಿ | ಸಂಪು,ಟ್ಯಾಂಕ್ ಪೈಪ್ ವೈನ್ ಕಿಟಕಿ ರಿಪೇರಿ |
| 7 | ಇಂದುಮಂಗಲ | ಬಾಳಿಗಾನಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ ದುರಸ್ತಿ ಗೋಡೆ ರಿಪೇರಿ ಮತ್ತು ನೀರಿನ ಸಂಪು ಟ್ಯಾಂಕ್ ಪೈಪ್ ಲೈನ್ |
| 8 | ಅಬ್ಬೇನಹಳ್ಳಿ | ಅಬ್ಬೇನಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ |
| 9 | ತೊರಹಳ್ಳಿ | ಹುಳದೇನಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 10 | ರಾಯಸಂದ್ರ | ಹಸಾಂಡಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 11 | ಬಲ್ಲಹಳ್ಳಿ | ಟೇಕಲ್ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 12 | ದೊಡ್ಡಸಬ್ಬೇನಹಳ್ಳಿ | ದೊಡ್ಡಶಿವಾರ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 13 | ಬೈರನಹಳ್ಳಿ | ತೊರ್ನಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 14 | ಗಣಿಗಾನಹಳ್ಳಿ | ದಿನ್ನಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 15 | ಪಡವನಹಳ್ಳಿ | ಡಿ.ಎನ್.ದೊಡ್ಡಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 16 | ಮಿಟ್ಟಗಾನಹಳ್ಳಿ | ಟೇಕಲ್ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 17 | ಅಹನ್ಯ | ಡಿ.ಎನ್.ದೊಡ್ಡಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 18 | ತೊರಲಕ್ಕಿ | ತೊರಲಕ್ಕಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 19 | ಬೈರತ್ನಹಳ್ಳಿ | ಕೊಂಡಶೆಟ್ಟಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 20 | ಚಿಕ್ಕಸಬ್ಬೇನಹಳ್ಳಿ | ದೊಡ್ಡಶಿವಾರ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 21 | ತರಬಹಳ್ಳಿ | ಡಿ.ಎನ್.ದೊಡ್ಡಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 22 | ಭುವನಹಳ್ಳಿ-1 | ಚಿಕ್ಕಕುಂತೂರು | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 23 | ನಿದರಮಂಗಲ | ಕೊಂಡಶೆಟ್ಟಹಳ್ಳಿ | ನೆಲ,ಕಿಟಕಿ,ಬಾಗಿಲು,ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 24 | ಚಂಬೆ | ಕೊಂಡಶೆಟ್ಟಹಳ್ಳಿ | ಮೇಲ್ಚಾವಣಿ,ಗೋಡೆ ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |
| 25 | ಮುತ್ತೇನಹಟ್ಟಿ | ರಾಜೇನಹಳ್ಳಿ | ನೆಲ,ಕಿಟಕಿ,ಬಾಗಿಲು, ರಿಪೇರಿ ಮತ್ತು ನೀರಿನ ಟ್ಯಾಂಕ್ ಪೈಪ್ ಲೈನ್ |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 632 |
| ಸದಸ್ಯರ ಹೆಸರು | : | ಶ್ರೀ. ನಂಜೇಗೌಡ.ಕೆ.ವೈ (ಮಾಲೂರು) |
| ಉತ್ತರಿಸುವ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಮಾಲೂರು ತಾಲ್ಲೂಕಿನಲ್ಲಿ ಹಲವಾರು ಗ್ರಾಮ ಪಂಚಾಯಿತಿ ಕೇಂದ್ರಗಳಲ್ಲಿ ಪಶು ಸಂಗೋಪನಾ ಆಸ್ಪತ್ರೆಗಳು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ : | ಮಾಲೂರು ತಾಲ್ಲೂಕಿನಲ್ಲಿ 2020ನೇ ಸಾಲಿನ ಜಾನುವಾರು ಗಣತಿಯನ್ವಯ ಒಟ್ಟು 1,18,026 ಜಾನುವಾರುಗಳಿದ್ದು, ಕೃಷಿ ಆಯೋಗದ ಶಿಫಾರಸ್ಸಿನ್ವಯ (Standard Pattern and norms) 5000 ಜಾನುವಾರುಗಳಿಗೆ 1 ಪಶುವೈದ್ಯ ಸಂಸ್ಥೆಯಂತೆ ಒಟ್ಟು 20 ಪಶುವೈದ್ಯ ಸಂಸ್ಥೆಗಳನ್ನು ಒಳಗೊಂಡಿರುತ್ತದೆ. |
| ಆ) | ತಾಲ್ಲೂಕು ವ್ಯಾಪ್ತಿಯಲ್ಲಿ ಪಶು ಅಸ್ಪತ್ರೆಗಳಿರುವ ಗ್ರಾಮ ಪಂಚಾಯಿತಿ ಕೇಂದ್ರಗಳೆಷ್ಟು; ಇವುಗಳಲ್ಲಿ ಪಶು ಆಸ್ಪತ್ರೆಗಳಿರುವ ಹಾಗೂ ಇಲ್ಲದ ಪಂಚಾಯಿತಿ ಕೇಂದ್ರಗಳಾವುವು (ವಿವರ ಒದಗಿಸುವುದು) | ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಒಟ್ಟು 28 ಗ್ರಾಮ ಪಂಚಾಯಿತಿ ಕೇಂದ್ರಗಳಿದ್ದು, 15 ಗ್ರಾಮಪಂಚಾಯಿತಿ ಕೇಂದ್ರಗಳಲ್ಲಿ ಪಶುವೈದ್ಯ ಸಂಸ್ಥೆಗಳಿರುತ್ತವೆ ಉಳಿದ 13 ಗ್ರಾಮ ಪಂಚಾಯಿತಿ ಕೇಂದ್ರಗಳಲ್ಲಿ ಪಶುವೈದ್ಯ ಸಂಸ್ಥೆಗಳಿರುವುದಿಲ್ಲ ವಿವರಗಳನ್ನು ಅನುಬಂಧ ದಲ್ಲಿ ನೀಡಲಾಗಿದೆ |
| ಇ) | ಕೆಲವು ಗ್ರಾಮ ಪಂಚಾಯಿತಿ ಕೇಂದ್ರಗಳಲ್ಲಿ ಸುಮಾರು 8-10 ಕಿ.ಮೀ ದೂರದ ವ್ಯಾಪ್ತಿಯಲ್ಲಿ ಯಾವುದೇ ಪಶು ಆಸ್ಪತ್ರೆಗಳು ಇಲ್ಲದೇ ರೈತರು ಜಾನುವಾರುಗಳ ಚಿಕಿತ್ಸೆಗೆ ತೊಂದರೆ ಪಡುತ್ತಿರುವದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಪಶುವೈದ್ಯ ಸಂಸ್ಥೆಗಳು ಇಲ್ಲದೆ ಇರುವ ಗ್ರಾಮಗಳಿಗೆ ಸಂಚಾರಿ ಪಶುಚಿಕಿತ್ಸಾಲಯದ ಮೂಲಕ ಜಾನುವಾರುಗಳಿಗೆ ಚಿಕಿತ್ಸೆ ನೀಡಲಾಗುತ್ತಿರುತ್ತದೆ. |
| ಈ) | 2020-21 ನೇ ಸಾಲಿನಲ್ಲಿ ಪಶು ಅಸ್ಪತ್ರೆಗಳಿಲ್ಲದ ಗ್ರಾಮ ಪಂಚಾಯಿತಿ ಕೇಂದ್ರಗಳಿಗೆ ಪಶು ಆಸ್ಪತ್ರೆಗಳನ್ನು ಮಂಜೂರು ಮಾಡಲು ಅವಕಾಶವಿದೆಯೇ: (ಮಾಹಿತಿ ನೀಡುವುದು) | ಪ್ರಸಕ್ತ ಸಾಲಿನಲ್ಲಿ ಪಶು ಆಸ್ಪತ್ರೆಗಳನ್ನು ಮಂಜೂರು ಮಾಡುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂ: ಪಸಂಮೀ ಇ-148 ಪಸಸೇ 2020

(ಪ್ರಭು. ಬಿ. ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

ಅನುಬಂಧ

## ಮಾಲೂರು ತಾಲ್ಲೂಕಿನ ಗ್ರಾಮ ಪಂಚಾಯಿತಿವಾರು ಪಶುವೈದ್ಯ ಸಂಸ್ಥೆಗಳು ಇರುವ/ಇಲ್ಲದಿರುವ ವಿವರ

ಜಿಲ್ಲೆ : ಕೋಲಾರ

| ಕ್ರ.ಸಂ. | ತಾಲ್ಲೂಕು | ಗ್ರಾಮಪಂಚಾಯಿತಿ ಕೇಂದ್ರಗಳ ಸಂಖ್ಯೆ | ಪಶುವೈದ್ಯ ಸಂಸ್ಥೆಗಳನ್ನೊಳಗೊಂಡ ಗ್ರಾಮ ಪಂಚಾಯಿತಿಯ ಹೆಸರು | ಪಶುವೈದ್ಯ ಸಂಸ್ಥೆಗಳನ್ನು ಒಳಗೊಂಡಿಲ್ಲದ ಗ್ರಾಮ ಪಂಚಾಯಿತಿಯ ಹೆಸರು | ಷರಾ |
|---|---|---|---|---|---|
| 1 | ಮಾಲೂರು | 28 | ಚಿಕ್ಕಕುಂತೂರು | ಮಡಿವಾಳ | |
| 2 | | | ಶಿವಾರಪಟ್ಟಣ | ನೊಸಗೆರೆ | |
| 3 | | | ತೊರ್ನಹಳ್ಳಿ | ಅಬ್ಬೇನಹಳ್ಳಿ | |
| 4 | | | ದೊಡ್ಡಶಿವಾರ | ಹುಂಗೇನಹಳ್ಳಿ | |
| 5 | | | ಸಂತೇಹಳ್ಳಿ | ಚಿಕ್ಕತಿರುಪತಿ | |
| 6 | | | ಕುಡಿಯನೂರು | ಹೆಚ್.ಹೊಸಕೋಟೆ | |
| 7 | | | ಅರಳೇರಿ | ಜಯಮಂಗಲ | |
| 8 | | | ಡಿ.ಎನ್.ದೊಡ್ಡಿ | ಹಸಾಂಡಹಳ್ಳಿ | |
| 9 | | | ಬಾಳಿಗಾನಹಳ್ಳಿ | ತೃಣಸಿ | |
| 10 | | | ಲಕ್ಕೂರು | ರಾಜೇನಹಳ್ಳಿ | |
| 11 | | | ಮಾಸ್ತಿ | ಕೌಂಡಶೆಟ್ಟಿಹಳ್ಳಿ | |
| 12 | | | ದಿನ್ನಹಳ್ಳಿ | ಕೆ.ಜಿ.ಹಳ್ಳಿ | |
| 13 | | | ಟೇಕಲ್ | ಬನಹಳ್ಳಿ | |
| 14 | | | ನೂಟವೆ | | |
| 15 | | | ಹುಳದೇನಹಳ್ಳಿ | | |
| ಒಟ್ಟು | | 28 | 15 | 13 | |

ಆಯುಕ್ತರ ಪರವಾಗಿ
ಪಶುಪಾಲನ ಮತ್ತು ಪಶುವೈದ್ಯ ಸೇವಾ ಇಲಾಖೆ,
ಬೆಂಗಳೂರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 701

ವಿಧಾನ ಸಭಾ ಸದಸ್ಯರ ಹೆಸರು : ಶ್ರೀಮತಿ ಸೌಮ್ಯರೆಡ್ಡಿ (ಜಯನಗರ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23/09/2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ 137 ಎಂ.ಎಸ್.ಪಿ.ಸಿ.ಗಳು (ಮಹಿಳಾ ಪೂರಕ ಪೌಷ್ಟಿಕ ಆಹಾರ ತಯಾರಿಕಾ ಘಟಕ) ಆಹಾರ ತಯಾರಿಕೆಗೆ ಬೇಕಾಗುವ ಕಚ್ಚಾ ಆಹಾರ ಸಾಮಗ್ರಿಗಳನ್ನು ಎಲ್ಲಿಂದ ಖರೀದಿಸಿರುತ್ತಾರೆ; | ಮಹಿಳಾ ಪೂರಕ ಪೌಷ್ಟಿಕ ಆಹಾರ ಉತ್ಪಾದನಾ ಮತ್ತು ತರಬೇತಿ ಕೇಂದ್ರಗಳು ಆಹಾರ ತಯಾರಿಕೆಗೆ ಬೇಕಾಗುವ ಕಚ್ಚಾ ಆಹಾರ ಸಾಮಾಗ್ರಿಗಳನ್ನು ಸ್ಥಳೀಯವಾಗಿ ಖರೀದಿಸುತ್ತವೆ. |
| ಆ. | ಪ್ರತಿ ವರ್ಷ ಜಿಲ್ಲಾವಾರು ಸರಾಸರಿ ಖರೀದಿ ಪ್ರಮಾಣವೆಷ್ಟು; | ಜಿಲ್ಲಾವಾರು ಸರಾಸರಿ ಖರೀದಿ ಪ್ರಮಾಣದ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ. | ಸದರಿ ಸಾಮಗ್ರಿಗಳ ಖರೀದಿಗಾಗಿ ರೂ.1 ಲಕ್ಷ ಮೀರಿದ್ದಲ್ಲಿ, ಎಂ.ಎಸ್.ಪಿ.ಸಿ.ಗಳಿಗೆ ಕೆ.ಟಿ.ಪಿ.ಪಿ. ಕಾಯ್ದೆಯಡಿ ನಿಯಮ 4ಜಿ ರನ್ವಯ ವಿನಾಯಿತಿ ನೀಡಲಾಗಿದೆಯೇ? | ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಟೆಂಡರ್ ಕರೆದು ಎಂ.ಎಸ್.ಪಿ.ಟಿ.ಸಿ. ಗಳನ್ನು ಸ್ಥಾಪಿಸಲಾಗಿರುತ್ತದೆ. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಸಮಿತಿಯು ಆಹಾರ ಪದಾರ್ಥಗಳ ದರಗಳನ್ನು ನಿಗದಿಪಡಿಸುತ್ತಿದೆ. ಸಮಿತಿಯು ನಿಗದಿಪಡಿಸಿರುವ ದರಗಳಲ್ಲಿ ಎಂ.ಎಸ್.ಪಿ.ಟಿ.ಸಿ. ಗಳು ಸ್ಥಳೀಯವಾಗಿ ಆಹಾರ ಪದಾರ್ಥಗಳನ್ನು ಖರೀದಿಸಿ, ಸಂಸ್ಕರಿಸಿ ಅಂಗನವಾಡಿ ಕೇಂದ್ರಗಳಿಗೆ ಸರಬರಾಜು ಮಾಡುತ್ತಿವೆ.<br>ಏಕರೂಪದ ದರವನ್ನು ನಿಗದಿಪಡಿಸಲು ಅನುವಾಗುವಂತೆ ಬೇಳೆ ಮತ್ತು ಕಾಳುಗಳನ್ನು ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರಿಕ ಸರಬರಾಜು ನಿಗಮದಿಂದ ಹಾಗೂ ಉಳಿದ ಆಹಾರ ಪದಾರ್ಥಗಳನ್ನು (ಅಕ್ಕಿ, ಗೋಧಿ ಮತ್ತು ಎಣ್ಣೆಯನ್ನು ಹೊರತುಪಡಿಸಿ) ಕರ್ನಾಟಕ ರಾಜ್ಯ ಸಹಕಾರ ಗ್ರಾಹಕರ ಮಹಾಮಂಡಳಿ ನಿಯಮಿತ(ಜನತಾ ಬಜಾರ್) ಗಳಿಂದ ಎಂ.ಎಸ್.ಪಿ.ಟಿ.ಸಿ. ಗಳು ಪಡೆದು ಸಂಸ್ಕರಿಸಿ / ಸ್ವಚ್ಛಗೊಳಿಸಿ ಸರಬರಾಜು ಮಾಡಲು ದಿನಾಂಕ:24/02/2018ರಂದು ಸರ್ಕಾರ ಆದೇಶ ಹೊರಡಿಸಿರುತ್ತದೆ. ಈ ಎರಡು ಸಂಸ್ಥೆಗಳಿಂದ ಆಹಾರ ಪದಾರ್ಥಗಳನ್ನು ಖರೀದಿಸಲು 4(ಜಿ) ವಿನಾಯಿತಿಯನ್ನು ನೀಡಲಾಗಿದೆ. ಸರ್ಕಾರದ ಆದೇಶ ದಿನಾಂಕ: 24/02/2018ರ ವಿರುದ್ಧ ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿದ್ದು, ಇದಕ್ಕೆ ತಡೆಯಾಜ್ಞೆ ನೀಡಿದ್ದು, ಯಥಾಸ್ಥಿತಿಯನ್ನು ಮುಂದುವರೆಸಲು ತಿಳಿಸಲಾಗಿರುತ್ತದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 174 ಐಸಿಡಿ 2020

ವಿಧಾನ ಸಭಾ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 701 ಕ್ಕೆ ಒದಗಿಸಲಾದ ಅನುಬಂಧ

| ಕ್ರ. ಸಂ. | ಜಿಲ್ಲೆಯ ಹೆಸರು | 2019-20 ಎಂ.ಎಸ್.ಪಿ.ಟಿ.ಸಿ. ಗಳಿಂದ ಖರೀದಿಸುತ್ತಿರುವ ಆಹಾರ ಪದಾರ್ಥಗಳ ಒಟ್ಟು ಸರಾಸರಿ ಪ್ರಮಾಣವೆಷ್ಟು (ಮೆ.ಟನ್‌ಗಳಲ್ಲಿ) |
|---|---|---|
| 1 | 2 | 7 |
| 1 | ಬಾಗಲಕೋಟೆ | 10666.44 |
| 2 | ಬೆಂಗಳೂರು(ಗ್ರಾ.) | 3187.83 |
| 3 | ಬೆಂಗಳೂರು ನಗರ | 11431.00 |
| 4 | ಬಳ್ಳಾರಿ | 8642.14 |
| 5 | ಬೆಳಗಾವಿ | 20329.54 |
| 6 | ಬೀದರ್ | 6459.084 |
| 7 | ವಿಜಯಪುರ | 16435.253 |
| 8 | ಚಾಮರಾಜನಗರ | 3524.22 |
| 9 | ಚಿಕ್ಕಬಳ್ಳಾಪುರ | 4267.199 |
| 10 | ಚಿಕ್ಕಮಗಳೂರು | 4267.21 |
| 11 | ಚಿತ್ರದುರ್ಗ | 6081.92 |
| 12 | ದಾವಣಗೆರೆ | 4915.36 |
| 13 | ದಕ್ಷಿಣ ಕನ್ನಡ | 3719.51 |
| 14 | ಧಾರವಾಡ | 4854.32 |
| 15 | ಗದಗ್ | 2739.58 |
| 16 | ಕಲ್ಬುರ್ಗಿ | 1166.40 |
| 17 | ಹಾಸನ | 3841.49 |
| 18 | ಹಾವೇರಿ | 4461.554 |
| 19 | ಕೊಡಗು | 553.521 |
| 20 | ಕೋಲಾರ | 357.2694 |
| 21 | ಕೊಪ್ಪಳ | 980.91 |
| 22 | ಮಂಡ್ಯ | 3399.33 |
| 23 | ಮೈಸೂರು | 12665.45 |
| 24 | ರಾಮನಗರ | 2870.76 |
| 25 | ರಾಯಚೂರು | 9588.71 |
| 26 | ಶಿವಮೊಗ್ಗ | 5072.63 |
| 27 | ತುಮಕೂರು | 6651.61 |
| 28 | ಉಡುಪಿ | 1358.14 |
| 29 | ಉತ್ತರಕನ್ನಡ | 3246.9 |
| 30 | ಯಾದಗಿರಿ | 6343.89 |



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ – 810

ಉತ್ತರಿಸಬೇಕಾದ ದಿನಾಂಕ – 23-09-2020

ಸದಸ್ಯರ ಹೆಸರು – ಶ್ರೀ.ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ)

ಉತ್ತರಿಸುವ ಸಚಿವರು – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬಾಗೇಪಲ್ಲಿ ಪಟ್ಟಣದ ಜಾಮಿಯಾ ಮಸೀದಿಯ ವತಿಯಿಂದ ನಿರ್ಮಾಣ ಮಾಡಲಾಗಿರುವ ಶಾದಿಮಹಲ್ ಕಾಮಗಾರಿಗೆ ದಿನಾಂಕ:20-02-2020ರಂದು 50ಲಕ್ಷ ಅನುದಾನ ಮಂಜೂರು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಾಗೇಪಲ್ಲಿ ಪಟ್ಟಣದ ಜಾಮೀಯಾ ಮಸೀದಿ ಸಮಿತಿಯ ಶಾದಿಮಹಲ್ ನಿರ್ಮಾಣಕ್ಕೆ ಈ ಕೆಳಕಂಡ ಆದೇಶಗಳಲ್ಲಿ ಅನುದಾನ ಬಿಡುಗಡೆ ಮಾಡಲಾಗಿದೆ.<br>(ರೂ. ಲಕ್ಷಗಳಲ್ಲಿ)
<table>
<tr><th>ಸಂಖ್ಯೆ</th><th>ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ</th><th>ಮಂಜೂರಾದ ಅನುದಾನ</th><th>ಬಿಡುಗಡೆಯಾದ ಅನುದಾನ</th></tr>
<tr><td>1</td><td>ಸರ್ಕಾರದ ಆದೇಶ ಸಂಖ್ಯೆ:MWD 114 MDS 2016 ದಿನಾಂಕ:14.03.2016</td><td rowspan="2">ರೂ. 50.00</td><td>ರೂ.25.00</td></tr>
<tr><td>2</td><td>ಸರ್ಕಾರದ ಆದೇಶ ಸಂಖ್ಯೆ:MWD 70 MDS 2017 ದಿನಾಂಕ:27.02.2017</td><td>ರೂ.25.00</td></tr>
<tr><td>3</td><td>ಸರ್ಕಾರದ ಆದೇಶ ಸಂಖ್ಯೆ:MWD 108 MDS 2019 ದಿನಾಂಕ:18.02.2019</td><td>ರೂ. 50.00</td><td>ರೂ. 50.00</td></tr>
</table></td></tr>
<tr><td>ಆ)</td><td>ಸದರಿ ಅನುದಾನದ ಕಾಮಗಾರಿಯನ್ನು ನಿರ್ಮಿತಿ ಕೇಂದ್ರದ ವತಿಯಿಂದ ಪೂರ್ಣಗೊಳಿಸಿ ಉದ್ಘಾಟನೆ ಮಾಡಿದ್ದರೂ ಸಹ ಇದುವರೆವಿಗೂ ನಿರ್ಮಿತಿ ಕೇಂದ್ರದವರಿಗೆ ಹಣ ಬಿಡುಗಡೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಸದರಿ ಯೋಜನೆಯಡಿ ಬಿಡುಗಡೆಯಾಗುವ ಅನುದಾನವನ್ನು ಜಿಲ್ಲೆಯಿಂದ ನೇರವಾಗಿ ಸಂಸ್ಥೆಗೆ ಬಿಡುಗಡೆ ಮಾಡಿರುವುದರಿಂದ ಗುತ್ತಿಗೆ ದಾರರಿಗೆ ಹಣ ಪಾವತಿ ಮಾಡದೇ ಇರುವ ಬಗ್ಗೆ ಪ್ರಶ್ನೆ ಉದ್ಭವಿಸುವುದಿಲ್ಲ.</td></tr>
<tr><td>ಇ)</td><td>ಸದರಿ 50 ಲಕ್ಷ ಹಣವನ್ನು ಯಾವಾಗ ಬಿಡುಗಡೆ ಮಾಡಲಾಗುವುದು ?(ವಿವರ ನೀಡುವುದು)</td><td>ಸದರಿ ಶಾದಿಮಹಲ್ ಕಟ್ಟಡವನ್ನು ನಿರ್ಮಾಣಕ್ಕಾಗಿ ರೂ.100.00 ಲಕ್ಷಗಳನ್ನು ನಿರ್ದೇಶನಾಲಯದಿಂದ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆರವರಿಗೆ ಬಿಡುಗಡೆ ಮಾಡಲಾಗಿದ್ದು, ಜಿಲ್ಲೆಯಿಂದ ಸಂಸ್ಥೆಗೆ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>ಸರ್ಕಾರದಿಂದ ಮಂಜೂರಾದ ಹೆಚ್ಚುವರಿ ಅನುದಾನ ರೂ ರೂ 50.00 ಲಕ್ಷಗಳನ್ನು ಸಾರ್ವತ್ರಿಕ ಲೋಕಸಭಾ ಚುನಾವಣೆಯ ನೀತಿ ಸಂಹಿತೆ ಜಾರಿಯಲ್ಲಿದ್ದರಿಂದ, ಜಿಲ್ಲೆಯಿಂದ ಸಂಸ್ಥೆಗೆ ಅನುದಾನ ಬಿಡುಗೆಡೆ ಮಾಡಿರುವುದಿಲ್ಲ.</td></tr>
</table>

| | | |
|---|---|---|
| | | ಸದರಿ ರೂ 50.00 ಲಕ್ಷಗಳನ್ನು ಬಿಡುಗಡೆ ಮಾಡಲು ದಿನಾಂಕ:28.01.2020 ರಂದು ಜಿಲ್ಲೆಯಿಂದ ನಿರ್ದೇಶನಾಲಯಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದರೆ, ಸದರಿ ಯೋಜನೆಯಡಿ 2019-20 ನೇ ಸಾಲಿನಲ್ಲಿ ಅನುದಾನ ಪೂರ್ಣವಾಗಿ ವೆಚ್ಚ ಮಾಡಿರುವುದರಿಂದ, ಅನುದಾನ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ.<br>2020-21ನೇ ಸಾಲಿನ ಆಯವ್ಯಯದಲ್ಲಿ ಸದರಿ ಕಾರ್ಯಕ್ರಮಕ್ಕೆ ಅನುದಾನ ಒದಗಿಸಿರುವುದಿಲ್ಲ. |

ಸಂಖ್ಯೆ:MWD 91 LMQ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 822

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಕ್ರೀಡಾಂಗಣದ ಕಾಮಗಾರಿಗಳು ಅರ್ಧಕ್ಕೆ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಅಪೂರ್ಣಗೊಂಡಿರುವ ಕಾಮಗಾರಿಗಳನ್ನು ಪುನಃ ಪ್ರಾರಂಭಿಸಲು ಕೈಗೊಂಡಿರುವ ಕ್ರಮಗಳೇನು; | ಕುಷ್ಟಗಿ ತಾಲ್ಲೂಕು ಕ್ರೀಡಾಂಗಣವನ್ನು 6 ಎಕರೆ ನಿವೇಶನದಲ್ಲಿ ನಿರ್ಮಿಸಲಾಗಿದ್ದು, ಸದರಿ ಕ್ರೀಡಾಂಗಣಕ್ಕೆ ಕೂಡು ರಸ್ತೆ, ಕ್ರೀಡಾಂಗಣದ ಸುತ್ತಲೂ ಕಾಂಪೌಂಡು ಗೋಡೆ, ಕ್ರೀಡಾಂಗಣದಲ್ಲಿ ವಿವಿಧ ಕ್ರೀಡಾ ಅಂಕಣಗಳು, ಪೆವಿಲಿಯನ್ ಕಟ್ಟಡವನ್ನು ನಿರ್ಮಿಸಲಾಗಿದ್ದು, ನೀರು ಸರಬರಾಜು ವ್ಯವಸ್ಥೆ, ಶೌಚಾಲಯ ವ್ಯವಸ್ಥೆ ಹಾಗೂ ವಿದ್ಯುತ್ ಸಂಪರ್ಕ ವ್ಯವಸ್ಥೆಯನ್ನು ಕಲ್ಪಿಸಲಾಗಿದ್ದು, ಕ್ರೀಡಾಪಟುಗಳು ಹಾಗೂ ಸಾರ್ವಜನಿಕರ ಬಳಕೆಯಲ್ಲಿದೆ.<br><br>ಕುಷ್ಟಗಿ ತಾಲ್ಲೂಕು ಕ್ರೀಡಾಂಗಣದ ಸೀಟಿಂಗ್ ಗ್ಯಾಲರಿ ಮೇಲ್ಛಾವಣಿಗಾಗಿ ರೂ 43.00 ಲಕ್ಷಗಳ ಅಂದಾಜು ಪಟ್ಟಿಗೆ ದಿನಾಂಕ: 03-02-2020 ರಂದು ಆಡಳಿತಾತ್ಮಕ ಅನುಮೋದನೆ ನೀಡಿ, ಮೊದಲನೇ ಕಂತಿನಲ್ಲಿ ರೂ 15.00 ಲಕ್ಷಗಳ ಅನುದಾನವನ್ನು ಮೆ\|\| ಕೆ.ಆರ್.ಐ.ಡಿ.ಎಲ್ ಇವರಿಗೆ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. |

| ಇ) | ಸದರಿ ಕ್ರೀಡಾಂಗಣದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಕಾಮಗಾರಿಗಳಾವುವು; ಅವುಗಳಿಗೆ ತಗಲುವ ವೆಚ್ಚವೆಷ್ಟು; | ಕುಷ್ಟಗಿ ತಾಲ್ಲೂಕು ಕ್ರೀಡಾಂಗಣದ ಸೀಟಿಂಗ್ ಗ್ಯಾಲರಿ ಮೇಲ್ಚಾವಣಿಗಾಗಿ ರೂ 43.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ, ಮೊದಲನೇ ಕಂತಿನಲ್ಲಿ ರೂ 15.00 ಲಕ್ಷಗಳ ಅನುದಾನವನ್ನು ಮೆ॥ ಕೆ.ಆರ್.ಐ.ಡಿ.ಎಲ್ ಇವರಿಗೆ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ.<br><br>ಕುಷ್ಟಗಿ ತಾಲ್ಲೂಕು ಕ್ರೀಡಾಂಗಣದಲ್ಲಿ ಕಲ್ಯಾಣ-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಕೆ.ಆರ್.ಡಿ.ಬಿ.) ವತಿಯಿಂದ ರೂ 150.00 ಲಕ್ಷಗಳ ವೆಚ್ಚದ ಒಳಾಂಗಣ ಕ್ರೀಡಾಂಗಣ ಕಾಮಗಾರಿಗೆ ಮಂಜೂರಾತಿ ನೀಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
|---|---|---|
| ಈ) | ಸದರಿ ಕಾಮಗಾರಿಗಳನ್ನು ಮಂಜೂರು ಮಾಡಲು ಬಿಡುಗಡೆಯಾದ ಅನುದಾನವೆಷ್ಟು; ಅದರ ನಿರ್ವಹಣೆಯನ್ನು ಮಾಡುತ್ತಿರುವ ಸಂಸ್ಥೆ ಯಾವುದು? (ವಿವರ ನೀಡುವುದು) | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಕುಷ್ಟಗಿ ತಾಲ್ಲೂಕು ಕ್ರೀಡಾಂಗಣದ ಸೀಟಿಂಗ್ ಗ್ಯಾಲರಿ ಮೇಲ್ಚಾವಣಿಗಾಗಿ ರೂ 43.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ, ಮೊದಲನೇ ಕಂತಿನಲ್ಲಿ ರೂ 15.00 ಲಕ್ಷಗಳ ಅನುದಾನವನ್ನು ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಕುಷ್ಟಗಿ ಒಳಾಂಗಣ ಕ್ರೀಡಾಂಗಣ ನಿರ್ಮಾಣ ಕಾಮಗಾರಿಯನ್ನು ಕಲ್ಯಾಣ-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಕೆ.ಆರ್.ಡಿ.ಬಿ.)ಯು ಕೈಗೆತ್ತಿಕೊಂಡಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. |

**ವೈಎಸ್ ಡಿ-/ಇಬಿಬಿ/83/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1024 |
|---|---|
| ಸದಸ್ಯರ ಹೆಸರು | ಶ್ರೀ ಅಜಯ್ ಧರ್ಮ ಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಪಿ.ಎಂ.ಜಿ.ಎಸ್.ವೈ ಯೋಜನೆಯಡಿ ರಾಜ್ಯಕ್ಕೆ ಅನುದಾನ ಮಂಜೂರಾತಿ ದೊರೆತ ಅಂತಿಮ ವರ್ಷ ಯಾವುದು; | ಪಿ.ಎಂ.ಜಿ.ಎಸ್.ವೈ. ಹಂತ-2 ರ ಯೋಜನೆಗೆ ರಾಜ್ಯಕ್ಕೆ 2013-14 ನೇ ಸಾಲಿನಲ್ಲಿ ಮಂಜೂರಾತಿ ನೀಡಲಾಗಿತ್ತು. |
| ಆ. | ಪಿ.ಎಂ.ಜಿ.ಎಸ್.ವೈ ಮೂರನೇ ಹಂತವನ್ನು ಕೇಂದ್ರ ಸರ್ಕಾರ ಯಾವಾಗ ಘೋಷಣೆ ಮಾಡಿದೆ ಇದರಡಿ ಸಾಧಿಸುವ ಪ್ರಗತಿಯ ವಿವರಗಳೇನು; (ಸಂಕ್ಷಿಪ್ತ ಮಾಹಿತಿ ನೀಡುವುದು) | ಕೇಂದ್ರ ಸರ್ಕಾರವು ಪಿ.ಎಂ.ಜಿ.ಎಸ್.ವೈ-III ಯೋಜನೆಯನ್ನು 2019-20 ನೇ ಸಾಲಿನಲ್ಲಿ ಘೋಷಣೆಯನ್ನು ಮಾಡಿರುತ್ತದೆ.<br>• ಪಿಎಮ್‌ಜಿಎಸ್‌ವೈ-III ಯೋಜನೆಯಡಿ ಕರ್ನಾಟಕ ರಾಜ್ಯಕ್ಕೆ 5612.50 ಕಿ.ಮೀ ಉದ್ದದ ರಸ್ತೆಗಳ ಹಂಚಿಕೆ ಮಾಡಿ ಪಿ.ಎಂ.ಜಿ.ಎಸ್.ವೈ ಮಾರ್ಗಸೂಚಿಯಂತೆ CUCPL ಪಟ್ಟಿಯನ್ವಯ ಪ್ರಮುಖ ರಸ್ತೆಗಳನ್ನು ಆಯ್ಕೆ ಮಾಡಲು ಸೂಚಿಸಿದಂತೆ<br>• ಮೊದಲನೇ ಬ್ಯಾಚ್‌ನಡಿ 3620.61 ಕಿ.ಮೀ ಉದ್ದದ ರಸ್ತೆ ಅಭಿವೃದ್ಧಿ ಪಡಿಸಲು ಪ್ರಸ್ತಾವನೆಗಳನ್ನು ಪರಿಶೀಲಿಸಿ, ಅಧಿಕಾರಯುಕ್ತ ಸಮಿತಿಯು (Empowered Committee) 3226.21 ಕಿ.ಮೀ. ಉದ್ದದ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಿದಂತೆ,<br>• ದಿನಾಂಕ 20.04.2020 ರಂದು ಸಚಿವ ಸಂಪುಟವು ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ-III ಬ್ಯಾಚ್-1 ರ 3226.21 ಕಿ.ಮೀ.ಗಳ ಉದ್ದದ ರಸ್ತೆ ಹಾಗೂ 26 ಸೇತುವೆಗಳ ಅಭಿವೃದ್ಧಿ ಕಾಮಗಾರಿಗಳನ್ನು ರೂ.2169.72 ಕೋಟಿಗಳ ಮೊತ್ತದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಅನುಮೋದನೆ ನೀಡಿರುತ್ತದೆ. ಅದರಂತೆ, ರಾಜ್ಯ ಸರ್ಕಾರವು ದಿನಾಂಕ |

| | | |
|---|---|---|
| | | 21.04.2020 ರಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br>• ಈ ಯೋಜನೆಯಡಿ ಕಾಮಗಾರಿಗಳನ್ನು 305 ಪ್ಯಾಕೇಜುಗಳನ್ನಾಗಿ ಮಾಡಿ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ಕರೆದು, ಈಗಾಗಲೇ 301 ಪ್ಯಾಕೇಜ್‌ಗಳಿಗೆ ಅನುಮೋದನೆಯನ್ನು ನೀಡಲಾಗಿದೆ. ಇನ್ನುಳಿದ 4 ಪ್ಯಾಕೇಜ್ ಕಾಮಗಾರಿಗಳ ಟೆಂಡರ್‌ಗಳನ್ನು ಇತ್ಯರ್ಥಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ. | ಮೂರನೇ ಹಂತದಲ್ಲಿ ರಾಜ್ಯಕ್ಕೆ ಮಂಜೂರಾದ ಅನುದಾನ ಮತ್ತು ರಸ್ತೆ (ಉದ್ದ) ಎಷ್ಟು; ಇದಕ್ಕಾಗಿ ಬಿಡುಗಡೆಯಾದ ಅನುದಾನವೆಷ್ಟು; | ಪಿ.ಎಂ.ಜಿ.ಎಸ್.ವೈ.-III ರಡಿ ರಾಜ್ಯಕ್ಕೆ ಒಟ್ಟು 5612.50 ಕಿ.ಮೀ. ಉದ್ದದ ರಸ್ತೆಗಳು ಮಂಜೂರಾಗಿದ್ದು, ಯೋಜನೆಯ ಮೊದಲನೇ ಬ್ಯಾಚ್‌ನಲ್ಲಿ 26 ಉದ್ದ ಸೇತುವೆ ಕಾಮಗಾರಿಗಳು ಒಳಗೊಂಡಂತೆ 3226.21 ಕಿ.ಮೀ. ರಸ್ತೆಗಳನ್ನು ಅಭಿವೃದ್ಧಿಪಡಿಸಲು ನಿಗಧಿಪಡಿಸಿರುವ ರೂ.2169.72 ಕೋಟಿಗಳ ಪೈಕಿ ಕೇಂದ್ರದ ಪಾಲು ರೂ.534.24 ಕೋಟಿಗಳು ಹಾಗೂ ರಾಜ್ಯದ ಪಾಲು ರೂ.375.32 ಕೋಟಿಗಳು ಸೇರಿ ಒಟ್ಟಾರೆ ರೂ.909.56 ಕೋಟಿಗಳನ್ನು ಬಿಡುಗಡೆ ಮಾಡಿದೆ. |
| ಈ. | ಕೇಂದ್ರ ಸರ್ಕಾರದಿಂದ ಮಂಜೂರಾದ ಅನುದಾನವನ್ನು ಬಳಸಿಕೊಳ್ಳದಿದ್ದಲ್ಲಿ ಯೋಜನೆಯನ್ನು ರದ್ದುಗೊಳಿಸುವ ಸಾಧ್ಯತೆ ಇದೆಯೇ; (ವಿವರ ಒದಗಿಸುವುದು) | ಕೇಂದ್ರ ಸರ್ಕಾರದ ಅನುದಾನವನ್ನು ನಿಗಧಿತ ಅವಧಿಯೊಳಗೆ ಖರ್ಚು ಮಾಡಿದ್ದಲ್ಲಿ ಮಾತ್ರ ಮುಂದಿನ ಕಂತಿನ ಅನುದಾನ ಬಿಡುಗಡೆಗೊಳಿಸಲಾಗುವುದೆಂದು ಷರತ್ತು ವಿಧಿಸಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-07/16:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯ[illegible] ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1027 |
| ಸದಸ್ಯರ ಹೆಸರು | ಶ್ರೀ ಕೃಷ್ಣ ಭೈರೇಗೌಡ |
| ಉತ್ತರಿಸಬೇಕಾದ ದಿನಾಂಕ | 23.09.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಮಾನ್ಯ ಮುಖ್ಯಮಂತ್ರಿಗಳ ಗ್ರಾಮೀಣ ಸುಮಾರ್ಗ ಯೋಜನೆಗೆ ರಾಜ್ಯ ಸರ್ಕಾರದ ಸಂಪುಟ ಒಪ್ಪಿಗೆ ನೀಡಲಾಗಿದೆಯೇ; ಈ ಯೋಜನೆಯ ಉದ್ದೇಶ, ಕಾರ್ಯಚಟುವಟಿಕೆಗಳೇನು; | 2019-20 ನೇ ಸಾಲಿನಲ್ಲಿ ಮುಖ್ಯಮಂತ್ರಿ ಗ್ರಾಮೀಣ ಸುಮಾರ್ಗ ಯೋಜನೆಯನ್ನು ಅನುಷ್ಠಾನಗೊಳಿಸಲು ದಿನಾಂಕ 14.06.2019 ರಂದು ಸಚಿವ ಸಂಪುಟ ಒಪ್ಪಿಗೆ ಪಡೆಯಲಾಗಿತ್ತು. ಹಾಗೂ<br><br>ಗ್ರಾಮೀಣ ಸುಮಾರ್ಗ ಯೋಜನೆಯನ್ನು ಅನುಷ್ಠಾನಕ್ಕೆ ತರಲು 2020-21 ನೇ ಸಾಲಿನ ಆಯವ್ಯಯ ಘೋಷಣೆ ಸಂಖ್ಯೆ: 147 ರಲ್ಲಿ ಗ್ರಾಮೀಣ ರಸ್ತೆಗಳ ಸುಧಾರಣೆಗಾಗಿ ಹೊಸದಾಗಿ "ಗ್ರಾಮೀಣ ಸುಮಾರ್ಗ"ಯೋಜನೆಯನ್ನು ಜಾರಿಗೆ ತರಲು ಪ್ರಸ್ತಾಪಿಸಲಾಗಿದೆ.<br><br>ಗ್ರಾಮೀಣ ಸುಮಾರ್ಗ ಯೋಜನೆಯಡಿಯಲ್ಲಿ ಮುಂಬರುವ **5 ವರ್ಷಗಳಲ್ಲಿ 20000 ಕಿ.ಮೀ. ಉದ್ದದ ಗ್ರಾಮೀಣ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಿದೆ. ಗ್ರಾಮೀಣ ರಸ್ತೆಗಳ ಸುಧಾರಣೆಗಾಗಿ 2020-21 ನೇ ಸಾಲಿನಲ್ಲಿ ರೂ.780.00 ಕೋಟಿಗಳನ್ನು ಒದಗಿಸಲಾಗಿದೆ ಎಂದು ಘೋಷಿಸಲಾಗಿದೆ.** ಅದರಂತೆ<br><br>ಗ್ರಾಮೀಣ ಸುಮಾರ್ಗ ಯೋಜನೆಗೆ ಸಚಿವ ಸಂಪುಟದ ಅನುಮೋದನೆ ಪಡೆಯಲು ಕರಡು ಸಚಿವ ಸಂಪುಟದ ಟಿಪ್ಪಣಿಗೆ ಈಗಾಗಲೇ ಯೋಜನಾ ಇಲಾಖೆಯ ಸಹಮತಿಯನ್ನು ಪಡೆಯಲಾಗಿದ್ದು, ಆರ್ಥಿಕ ಇಲಾಖೆಯ ಸಹಮತಿಯನ್ನು ನಿರೀಕ್ಷಿಸಲಾಗಿದೆ. ಈ ಯೋಜನೆಯ ಉದ್ದೇಶ ಹಾಗೂ ಕಾರ್ಯಚಟುವಟಿಕೆ ಗಳು ಕೆಳಗಿನಂತಿದೆ.<br><br>ರಾಜ್ಯದ ಎಲ್ಲಾ 189 ಗ್ರಾಮೀಣ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿನ ಗ್ರಾಮೀಣ ರಸ್ತೆಗಳ<br>• ಬಲಪಡಿಸುವಿಕೆ,<br>• ನವೀಕರಣ ಮತ್ತು<br>• ನಿರ್ವಹಣೆಯ ಅಗತ್ಯವಿದ್ದು, ಸಮರ್ಪಕ ನಿರ್ವಹಣೆ ಮಾಡುವ ಮೂಲಕ ರಸ್ತೆಗಳ ಮೇಲೆ ಹೂಡಿರುವ ಬಂಡವಾಳವನ್ನು ಫಲಪ್ರದವಾಗಿಸಲು ಮತ್ತು |

| | | |
|---|---|---|
| | | • ರಸ್ತೆಗಳ ಬಾಳಿಕೆಯ ಕಾಲಾವಧಿಯನ್ನು ಧೀರ್ಘಗೊಳಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.<br><br>ರಾಜ್ಯದಲ್ಲಿ ಸುಮಾರು 58,949.00 ಕಿ.ಮೀ ಇರುವ ಪ್ರಮುಖ ಗ್ರಾಮೀಣ ರಸ್ತೆಗಳ ಪೈಕಿ<br><br>• ಡಾಂಬರು ಮೇಲ್ಮೈಯುಳ್ಳ ಸುಮಾರು 24,246 ಕಿ.ಮೀ ಉದ್ದದ ರಸ್ತೆಗಳನ್ನು ಗುರುತಿಸಿ, ಅವುಗಳಲ್ಲಿ ನಿರ್ವಹಣೆಯಲ್ಲಿರುವ ಸುಮಾರು 4,246 ಕಿ.ಮೀ ಉತ್ತಮ ಸ್ಥಿತಿಯಲ್ಲಿರುವ ರಸ್ತೆಗಳನ್ನು ಹೊರತುಪಡಿಸಿ<br>• ಉಳಿದ 20,000.00 ಕಿ.ಮೀ ರಸ್ತೆಗಳನ್ನು, ಮುಂದಿನ 5 ವರ್ಷಗಳಲ್ಲಿ ನಿರ್ವಹಣೆ ಮತ್ತು ನವೀಕರಣವನ್ನು ಕೈಗೊಳ್ಳುವುದು ಈ ಯೋಜನೆಯ ಪ್ರಮುಖ ಕಾರ್ಯಚಟುವಟಿಕೆಯಾಗಿದೆ. |
| ಆ. | ಈ ಯೋಜನೆಗೆ ಹಣಕಾಸು ಇಲಾಖೆಯವರು ಒಪ್ಪಿಗೆ ನೀಡಿದ್ದಾರೆಯೇ; ವರ್ಷವಾರು ಅನುದಾನ ನೀಡಲು ಒಪ್ಪಿರುತ್ತಾರೆಯೇ; | "ಗ್ರಾಮೀಣ ಸುಮಾರ್ಗ ಯೋಜನೆ" ಯನ್ನು 5 ವರ್ಷಗಳಲ್ಲಿ ಅನುಷ್ಠಾನ ಮಾಡಲು ಹಾಗೂ ಆ ರಸ್ತೆಗಳನ್ನು 5 ವರ್ಷಗಳ ಕಾಲಾವಧಿಯವರೆಗೂ ನಿರ್ವಹಣೆ ಮಾಡಲು ರೂ 7334.49 ಕೋಟಿಗಳ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಸಹಮತಿಗೆ ಸಲ್ಲಿಸಿದೆ. ಒಪ್ಪಿಗೆಯನ್ನು ನಿರೀಕ್ಷಿಸಲಾಗಿದೆ. |
| ಇ | ಈ ಯೋಜನೆಯು ಅನುಷ್ಠಾನ ದಲ್ಲಿದೆಯೇ; ಇದರ ಅಡಿ ಕಾರ್ಯ ಚಟುವಟಿಕೆಗಳ ಮೈಲಿಗಲ್ಲುಗಳ ಪ್ರಕಾರ ಪ್ರಗತಿ ಸಾಧಿಸಲಾಗಿದೆಯೇ; | ಯೋಜನೆಯನ್ನು ಅನುಷ್ಠಾನಕ್ಕೆ ತರಲು ಸಚಿವ ಸಂಪುಟದ ಅನುಮೋದನೆ ಪಡೆಯಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ | ಇಲ್ಲದಿದ್ದಲ್ಲಿ, ಈ ಯೋಜನೆ ಮತ್ತು ಅನುಷ್ಠಾನದ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವೇನು? | ಯೋಜನೆಯನ್ನು 2020-21 ನೇ ಸಾಲಿನಿಂದ ಆರಂಭಿಸಲು ಕ್ರಮ ಕೈಗೊಳ್ಳಲಾಗುವುದು. |

ಕಡತ ಸಂಖ್ಯೆ: ಗ್ರಾಅಪ:ಅಧಿ-07/18ಆರ್ಆರ್ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1031

ಮಾನ್ಯ ವಿಧಾನಸಭೆ ಸದಸ್ಯರ ಹೆಸರು : ಶ್ರೀ ರಂಗನಾಥ್ ಹೆಚ್. ಡಿ. ಡಾ॥ (ಕುಣಿಗಲ್)

ಉತ್ತರಿಸಬೇಕಾದ ದಿನಾಂಕ : 23.09.2020

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಅಂಧ ತಾಯಂದಿರಿಗೆ ಮಾಸಿಕ 2000 ರೂ.ಗಳಂತೆ ಶಿಶುಪಾಲನಾ ಭತ್ಯೆಯನ್ನು ಮಗುವಿಗೆ ಮೊದಲ ಎರಡು ವರ್ಷದವರೆಗೆ ನೀಡುತ್ತಿರುವುದನ್ನು ಮೊದಲ ಐದು ವರ್ಷದವರೆಗೆ ನೀಡಲಾಗುವುದೆಂದು ಘೋಷಿಸಿದ್ದು, ಇದು ಅನುಷ್ಠಾನದಲ್ಲಿದೆಯೇ; | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಅಂಧ ತಾಯಂದಿರಿಗೆ ಮಾಸಿಕ 2000 ರೂ.ಗಳಂತೆ ಶಿಶುಪಾಲನಾ ಭತ್ಯೆಯನ್ನು ಮಗುವಿಗೆ ಮೊದಲ ಎರಡು ವರ್ಷದವರೆಗೆ ನೀಡುತ್ತಿರುವುದನ್ನು ಮೊದಲ ಐದು ವರ್ಷದವರೆಗೆ ನೀಡಲಾಗುವುದೆಂದು ಘೋಷಿಸಿರುವ ಪ್ರಸ್ತಾವನೆಗೆ ಆರ್ಥಿಕ ಮತ್ತು ಯೋಜನೆ ಇಲಾಖೆಯ ಸಹಮತಿ ಕೋರಲಾಗಿದೆ. ಸಹಮತಿ ಸ್ವೀಕೃತವಾದೊಡನೆ ಆಡಳಿತಾತ್ಮಕ ಅನುಮೋದನೆ ಬಗ್ಗೆ ಸರ್ಕಾರಿ ಆದೇಶವನ್ನು ಹೊರಡಿಸಲಾಗುವುದು. |
| ಆ) | ಅನುಷ್ಠಾನಕ್ಕೆ ಬಂದಿದ್ದಲ್ಲಿ ಇಲ್ಲಿಯವರೆಗೆ ಎಷ್ಟು ಜನ ಫಲಾನುಭವಿಗಳಿಗೆ ವಿತರಿಸಲಾಗಿದೆ; ಒಂದು ವೇಳೆ ಇನ್ನು ವಿತರಿಸದಿದ್ದಲ್ಲಿ ಯಾವಾಗ ವಿತರಿಸಲಾಗುವುದು; (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಆಡಳಿತಾತ್ಮಕ ಅನುಮೋದನೆ ಹೊರಡಿಸಿದ ಕೂಡಲೇ ಸೂಕ್ತ ಕ್ರಮಕೈಗೊಳ್ಳಲಾಗುವುದು. |
| ಇ) | 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಬೆಂಗಳೂರಿನ ಇಂದಿರಾನಗರದಲ್ಲಿರುವ ಸರ್ಕಾರಿ ಕಿವುಡು ಮಕ್ಕಳ ಶಾಲೆಯ ಕಟ್ಟಡದಲ್ಲಿ ವಿಶೇಷ ಶಿಕ್ಷಕರ ಶಿಕ್ಷಣಕ್ಕಾಗಿ ತರಬೇತಿ ಕೇಂದ್ರವನ್ನು/ ವಿಶೇಷ ಬಿ.ಇಡಿ ಕಾಲೇಜನ್ನು ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳ ಪಾಲುದಾರಿಕೆಯಲ್ಲಿ ಆರಂಭಿಸಲಾಗುವುದೆಂದು ಘೋಷಿಸಿದ್ದು, ಸದರಿ ತರಬೇತಿ ಕೇಂದ್ರ ಆರಂಭಿಸಲಾಗಿದೆಯೇ; ಯಾವಾಗಿನಿಂದ ಆರಂಭಿಸಲಾಗಿದೆ; ಆರಂಭಿಸಿಲ್ಲವಾದಲ್ಲಿ ಯಾವ ಕಾರಣಕ್ಕಾಗಿ ಆರಂಭಿಸಿರುವುದಿಲ್ಲ; ಯಾವಾಗ ಆರಂಭಿಸಲಾಗುವುದು (ಮಾಹಿತಿಯನ್ನು ಒದಗಿಸುವುದು) | 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಬೆಂಗಳೂರಿನ ಇಂದಿರಾನಗರದಲ್ಲಿರುವ ಸರ್ಕಾರಿ ಕಿವುಡು ಮಕ್ಕಳ ಶಾಲೆಯ ಕಟ್ಟಡದಲ್ಲಿ 100 ಕಿವುಡ ಮಕ್ಕಳಿಗೆ ವಸತಿ ಸೌಲಭ್ಯವನ್ನು ಕಲ್ಪಿಸಬೇಕಾಗಿದ್ದು, ಕಟ್ಟಡದ ಎರಡೂ ಅಂತಸ್ತುಗಳಲ್ಲಿ ಶಾಲೆ ಮತ್ತು ವಸತಿ ಸೌಕರ್ಯಕ್ಕೆ ಮಾತ್ರ ಸ್ಥಳಾವಕಾಶವಿರುತ್ತದೆ. ಆದರೆ ವಿಶೇಷ ಶಿಕ್ಷಕರ ತರಬೇತಿ ಕೇಂದ್ರವನ್ನು ಪ್ರಾರಂಭಿಸಲು ಸ್ಥಳಾವಕಾಶದ ಕೊರತೆ ಇರುವುದರಿಂದ ಹಂಸಧ್ವನಿ ಶಾಲೆಯ ಕಟ್ಟಡದಲ್ಲಿ ವಿಶೇಷ ಶಿಕ್ಷಕರ ಶಿಕ್ಷಣ ತರಬೇತಿ ಕೇಂದ್ರ/ ವಿಶೇಷ ಬಿ.ಇಡಿ ಕಾಲೇಜನ್ನು ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳ ಸಹಭಾಗಿತ್ವದಲ್ಲಿ ಪ್ರಾರಂಭಿಸಬಹುದೇ ಅಥವಾ ಒಂದು ವೇಳೆ ಸದರಿ ಕಟ್ಟಡದಲ್ಲಿ ಶಿಕ್ಷಕರ ತರಬೇತಿ ಕೇಂದ್ರವನ್ನು ನಡೆಸಲು ಸಾಧ್ಯವಾಗದಿದ್ದರೆ, ಬಾಡಿಗೆ ಕಟ್ಟಡದಲ್ಲಿ ಶಿಕ್ಷಕರ ತರಬೇತಿ ಕೇಂದ್ರವನ್ನು ನಡೆಸಬಹುದೇ ಎಂಬ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಈ) | 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ರಾಷ್ಟ್ರೀಯ ಅಂಗವಿಕಲರ ಹಣಕಾಸು ಅಭಿವೃದ್ಧಿ ನಿಗಮದಿಂದ ವಿಕಲಚೇತನರಿಗೆ ನೀಡಿರುವ ಸಾಲ ಮತ್ತು 2014ನೇ ಸಾಲಿನಿಂದ ಸುಸ್ತಿಯಾಗಿರುವ ಬಡ್ಡಿ ಮೊತ್ತವನ್ನು ಮನ್ನಾ ಮಾಡಲು ರೂ.400 ಕೋಟಿಗಳ ಅನುದಾನ ಮೀಸಲಿಟ್ಟಿರುವುದು ಸದ್ಬಳಕೆಯಾಗುತ್ತಿದೆಯೇ; ಸದ್ಬಳಕೆಯಾಗುತ್ತಿದ್ದಲ್ಲಿ ಎಷ್ಟು ಜನ ಫಲಾನುಭವಿಗಳು ಇದರ ಪ್ರಯೋಜನ ಪಡೆದುಕೊಂಡಿರುತ್ತಾರೆ; | • 2018-19ನೇ ಸಾಲಿನಲ್ಲಿ ಮಾನ್ಯ ಮುಖ್ಯಮಂತ್ರಿಯವರ ಆಯವ್ಯಯ ಭಾಷಣದ ಕಂಡಿಕೆ 95 ರಂತೆ ರಾಷ್ಟ್ರೀಯ ಅಂಗವಿಕಲರ ಹಣಕಾಸು ಅಭಿವೃದ್ಧಿ ನಿಗಮದಿಂದ ವಿಕಲಚೇತನರಿಗೆ ನೀಡಿರುವ ಸಾಲ ಮತ್ತು 2014ರವರಿಂದ ಸುಸ್ತಿಯಾಗಿರುವ ಬಡ್ಡಿ ಮೊತ್ತವನ್ನು ಮನ್ನಾ ಮಾಡಲು ರೂ.4.00 ಕೋಟಿಗಳ ಅನುದಾನ ಸದ್ಬಳಕೆಯಾಗಿರುತ್ತದೆ. |

..2

| | | |
|---|---|---|
| | ಮೀಸಲಿಟ್ಟಿರುವ ಅನುದಾನವು ಸದ್ಬಳಕೆಯಾಗದೆ ಉಳಿದಲ್ಲಿ ಸರ್ಕಾರವು ಈ ಹಣದ ಸದ್ಬಳಕೆ ಬಗ್ಗೆ ಏನು ಕ್ರಮ ಕೈಗೊಂಡಿದೆ; (ಮಾಹಿತಿಯನ್ನು ಒದಗಿಸುವುದು) | • ದಿನಾಂಕ:21.3.2019 ರಂತೆ ಇ-ಪೇಮೆಂಟ್ ಮುಖಾಂತರ ರೂ.4.00 ಕೋಟಿಗಳನ್ನು ಸದರಿ ನಿಗಮಕ್ಕೆ ಪಾವತಿಸಲಾಗಿರುತ್ತದೆ.<br>• ಈ ಯೋಜನೆಯಡಿ 662 ವಿಕಲಚೇತನ ಫಲಾನಭವಿಗಳ ಸಾಲ ಹಾಗೂ ಬಡ್ಡಿಯ ಮೊತ್ತವು ಮನ್ನಾ ಆಗಿರುತ್ತದೆ.<br>• ಯಾವುದೇ ಮೊತ್ತ ಉಳಿಕೆಯಾಗಿರುವುದಿಲ್ಲ. |
| ಉ) | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಅಂಧ ವಿದ್ಯಾರ್ಥಿಗಳು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಸ್ವಾವಲಂಬಿಗಳಾಗಲು ರಾಜ್ಯದ 500 ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಮೊಬೈಲ್, ಬ್ರೈಲ್‌ವಾಚ್, ವಾಕಿಂಗ್‌ಸ್ಟಿಕ್ ಮತ್ತು ಇನ್ನಿತರ ಸಾಧನಗಳನ್ನು ಒಳಗೊಂಡ ತಲಾ ರೂ.25,000ಗಳ ಕಿಟ್‌ಗಳನ್ನು ವಿತರಿಸಲಾಗುವುದೆಂದು ಘೋಷಿಸಿದ್ದು, ಇದು ಅನುಷ್ಠಾನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇಲ್ಲಿಯವರೆಗೆ ಎಷ್ಟು ಜನ ಫಲಾನುಭವಿಗಳಿಗೆ ವಿತರಿಸಲಾಗಿದೆ; ಒಂದು ವೇಳೆ ಇನ್ನು ವಿತರಿಸದಿದ್ದಲ್ಲಿ ಯಾವಾಗ ವಿತರಿಸಲಾಗುವುದು; (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | 500 ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಮೊಬೈಲ್, ಬ್ರೈಲ್‌ವಾಚ್, ವಾಕಿಂಗ್‌ಸ್ಟಿಕ್ ಮತ್ತು ಇನ್ನಿತರ ಸಾಧನಗಳನ್ನು ಒಳಗೊಂಡ ತಲಾ ರೂ.25,000ಗಳ ಕಿಟ್‌ಗಳನ್ನು ವಿತರಿಸುವ ಪ್ರಸ್ತಾವನೆಗೆ ಆರ್ಥಿಕ ಮತ್ತು ಯೋಜನೆ ಇಲಾಖೆಯ ಸಹಮತಿ ಕೋರಲಾಗಿದೆ. ಸಹಮತಿ ಸ್ವೀಕೃತವಾದೊಡನೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರಿ ಆದೇಶವನ್ನು ಹೊರಡಿಸಲಾಗುವುದು. ಆಡಳಿತಾತ್ಮಕ ಅನುಮೋದನೆ ಕುರಿತು ಆದೇಶ ಹೊರಡಿಸಿದ ನಂತರ ವಿತರಣೆ ಕುರಿತು ಪ್ರಕ್ರಿಯೆಯನ್ನು ಪ್ರಾರಂಭಿಸಲಾಗುವುದು. |
| ಊ) | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಶ್ರವಣದೋಷವುಳ್ಳ ವ್ಯಕ್ತಿಗಳ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರಗಳನ್ನು ವಿತರಿಸಲು ಅನುದಾನ ಒದಗಿಸಿರುವುದು ಜಾರಿಗೊಳಿಸಲಾಗಿದೆಯೇ; ಈ ಯೋಜನೆಯು ಜಾರಿಯಾಗಿದ್ದಲ್ಲಿ ಇಲ್ಲಿಯವರೆಗೆ ಎಷ್ಟು ಜನ ಫಲಾನುಭವಿಗಳಿಗೆ ಹೊಲಿಗೆ ಯಂತ್ರ ವಿತರಿಸಲಾಗಿದೆ; ಒಂದು ವೇಳೆ ಈ ಯೋಜನೆ ಇನ್ನು ಜಾರಿಯಾಗದಿದ್ದಲ್ಲಿ ಯಾವಾಗ ಜಾರಿಗೆ ತರಲಾಗುವುದು? (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | 2020-21ನೇ ಸಾಲಿನ ಆಯವ್ಯಯ ಘೋಷಣೆ ಮಾಡಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಶ್ರವಣದೋಷವುಳ್ಳ ವ್ಯಕ್ತಿಗಳ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರಗಳನ್ನು ವಿತರಿಸುವ ಕುರಿತು ಆರ್ಥಿಕ ಇಲಾಖೆ ಹಾಗೂ ಯೋಜನಾ ಇಲಾಖೆಯ ಸಹಮತಿಗಾಗಿ ಕಡತ ಸಲ್ಲಿಸಲಾಗಿದ್ದು, ಆರ್ಥಿಕ ಇಲಾಖೆ ಅಪೇಕ್ಷಿಸಿದಂತೆ ಕ್ರಿಯಾ ಯೋಜನೆಯನ್ನು ತಯಾರಿಸಿ ಕಳುಹಿಸಲಾಗಿದ್ದು, ಆರ್ಥಿಕ ಇಲಾಖೆ ಹಾಗೂ ಯೋಜನಾ ಇಲಾಖೆಯ ಸಹಮತಿ ದೊರೆತ ಕೂಡಲೇ ಆಡಳಿತಾತ್ಮಕ ಅನುಮೋದನೆ ಕುರಿತು ಸರ್ಕಾರಿ ಆದೇಶವನ್ನು ಹೊರಡಿಸಲಾಗುವುದು. |

**ಸಂಖ್ಯೆ: ಮಮಇ 216 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ
ಸಚಿವರು.

# ಕರ್ನಾಟಕ ವಿಧಾನಸಭೆ



| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1037 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ವಿಷಯ | : | ಕಾಮಗಾರಿಯ ಕಾರ್ಯ |
| ಉತ್ತರಿಸುವ ಸಚಿವರು | : | ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು. |
| ಉತ್ತರಿಸುವ ದಿನಾಂಕ: | : | 23-09-2020. |

******

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪಿರಿಯಾಪಟ್ಟಣ ಮತಕ್ಷೇತ್ರದ 2018-19, 2019-20ನೇ ಸಾಲಿನಲ್ಲಿ ಮಂಜೂರಾಗಿರುವ ಪ್ರವಾಸಿ ಸ್ಥಳಗಳ ಅಭಿವೃದ್ಧಿಯ ಅಂದಾಜು ಪಟ್ಟಿಯು ಸಿದ್ಧವಾಗಿ ಆಡಳಿತಾತ್ಮಕ ಅನುಮೋದನೆ ಇದುವರೆವಿಗೆ ಮಂಜೂರು ಮಾಡದಿರಲು ಕಾರಣವೇನು; | ಪಿರಿಯಾಪಟ್ಟಣ ತಾಲ್ಲೂಕಿಗೆ 2018-19ನೇ ಸಾಲಿನಲ್ಲಿ ಮಂಜೂರಾಗಿರುವ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡದೆ ಇರುವ ಕಾಮಗಾರಿಗಳ ವಿವರ ಈ ಕೆಳಕಂಡಂತಿದೆ.<br><br>1. ಪಿರಿಯಾಪಟ್ಟಣ ನಗರದ ಮಧ್ಯ ಭಾಗದಲ್ಲಿರುವ ಮೆಲ್ಲಹಳ್ಳಿ ಅರಸೀಕೆರೆಯನ್ನು ಪ್ರವಾಸಿ ಕ್ಷೇತ್ರವನ್ನಾಗಿ ಅಭಿವೃದ್ಧಿ ರೂ.200.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡಿದ್ದು, ಸದರಿ ಕಾಮಗಾರಿಯನ್ನು ಪ್ರಾರಂಭಿಸದೇ ಇರುವ ಕಾರಣದಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/190/ಟಿಡಿಪಿ/2020, ದಿನಾಂಕ:07-09-2020ರನ್ವಯ ಕಾಮಗಾರಿಯನ್ನು ರದ್ದುಪಡಿಸಲಾಗಿರುತ್ತದೆ.<br>2. ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಯಾತ್ರಿನಿವಾಸ ನಿರ್ಮಾಣ ಕಾಮಗಾರಿಗೆ ರೂ.200.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡಿದ್ದು, ಸದರಿ ಕಾಮಗಾರಿಯನ್ನು ಪ್ರಾರಂಭಿಸದೇ ಇರುವ ಕಾರಣದಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/190/ ಟಿಡಿಪಿ/2020, ದಿನಾಂಕ:07-09-2020ರನ್ವಯ ಕಾಮಗಾರಿಯನ್ನು ರದ್ದು ಪಡಿಸಲಾಗಿರುತ್ತದೆ.<br>3. ಪಿರಿಯಾಪಟ್ಟಣ ನಗರದ ಶ್ರಿ ಕ್ಷೇತ್ರ ಮಸಣೀಕಮ್ಮ ಆದಿಶಕ್ತಿ ದೇವಸ್ಥಾನದ (ಪಿರಿಯಪಟ್ಟದಮ್ಮ) ಜೀರ್ಣೋದ್ದಾರ (ಯಾತ್ರಿನಿವಾಸ) ಕಾಮಗಾರಿಗೆ ರೂ.200.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡಿದ್ದು, ಸದರಿ ಕಾಮಗಾರಿಯನ್ನು ಪ್ರಾರಂಭಿಸದೇ ಇರುವ ಕಾರಣದಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/190/ಟಿಡಿಪಿ/2020, ದಿನಾಂಕ:07-09-2020ರನ್ವಯ ಕಾಮಗಾರಿಯನ್ನು ರದ್ದು ಪಡಿಸಲಾಗಿರುತ್ತದೆ.<br><br>ಪಿರಿಯಾಪಟ್ಟಣ ತಾಲ್ಲೂಕಿಗೆ 2019-20ನೇ ಸಾಲಿನಲ್ಲಿ ಮಂಜೂರಾಗಿರುವ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡದೆ ಇರುವ ಕಾಮಗಾರಿಗಳಾವು ಇರುವುದಿಲ್ಲ. |

| | | |
|---|---|---|
| ಆ) | ಈ ಮತಕ್ಷೇತ್ರದ ಪ್ರಸಿದ್ಧ ಶ್ರೀ ಮಸಣೀಕಮ್ಮ ದೇವಸ್ಥಾನ ಪ್ರವಾಸಿ ಸ್ಥಳದ ಅಭಿವೃದ್ಧಿಗೆ 2018-19ನೇ ಸಾಲಿನಲ್ಲಿ ಮಂಜೂರಾಗಿದ್ದು ಯಾವುದೇ ಕಾಮಗಾರಿ ಪ್ರಾರಂಭ ಮಾಡಿಲ್ಲದಿರಲು ಕಾರಣವೇನು; | ಸದರಿ ಕಾಮಗಾರಿಯನ್ನು ಪ್ರಾರಂಭಿಸದೇ ಇರುವ ಕಾರಣದಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/190/ಟಿಡಿಪಿ/2020, ಬೆಂಗಳೂರು ದಿನಾಂಕ:07-09-2020ರ ಆದೇಶದಂತೆ ಈ ಕಾಮಗಾರಿಯನ್ನು ರದ್ದು ಪಡಿಸಲಾಗಿರುತ್ತದೆ. |
| ಇ) | ಸದರಿ ಮತಕ್ಷೇತ್ರಕ್ಕೆ 2019-20ನೇ ಸಾಲಿನಲ್ಲಿ ಮಂಜೂರಾಗಿರುವ ಪ್ರವಾಸಿ ಸ್ಥಳಗಳ ಅಭಿವೃದ್ಧಿಯ ಕಾಮಗಾರಿ ಪ್ರಾರಂಭ ಮಾಡಿಲ್ಲದಿರಲು ಕಾರಣವೇನು: | ಕಾಮಗಾರಿಗಳನ್ನು ಪ್ರಾರಂಭಿಸಲಾಗಿದೆ. |
| ಈ) | ಸದರಿ ಮತಕ್ಷೇತ್ರದ ಪ್ರವಾಸಿ ಸ್ಥಳಗಳ ದೃಷ್ಟಿಯಿಂದ ಮಂಜೂರಾಗಿರುವ ಕಾಮಗಾರಿಗಳನ್ನು ಕೂಡಲೇ ಪ್ರಾರಂಭ ಮಾಡಲು ಸರ್ಕಾರದ ಸೂಕ್ತ ಕ್ರಮವೇನು? | 2018-19ನೇ ಸಾಲಿನಲ್ಲಿ ಪಿರಿಯಾಪಟ್ಟಣ ತಾಲ್ಲೂಕಿಗೆ 4 ಕಾಮಗಾರಿಗಳು ಮಂಜೂರಾಗಿದ್ದು, ಮೂರು ಕಾಮಗಾರಿಗಳು ರದ್ದಾಗಿದ್ದು, ಒಂದು ಕಾಮಗಾರಿಯನ್ನು ಪ್ರಾರಂಭಿಸಬೇಕಿದೆ.<br><br>2019-20ನೇ ಸಾಲಿನಲ್ಲಿ ಪಿರಿಯಾಪಟ್ಟಣ ತಾಲ್ಲೂಕಿಗೆ 2 ಕಾಮಗಾರಿಗಳು ಮಂಜೂರಾಗಿದ್ದು, ಸದರಿ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದೆ. |

ಕಡತ ಸಂಖ್ಯೆ: ಟಿಓಆರ್ 174 ಟಿಡಿಪಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1045 |
| ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| ಉತ್ತರಿಸಬೇಕಾದ ದಿನಾಂಕ | 23.09.2020. |
| ಉತ್ತರಿಸುವ ಸಚಿವರು | ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಜನ ಸಬಲೀಕರಣ ಇಲಾಖೆಯಲ್ಲಿ ಒಟ್ಟು ಮಂಜೂರಾದ ಹುದ್ದೆಗಳು, ಭರ್ತಿ ಮಾಡಲಾದ ಹುದ್ದೆಗಳು ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; (ಮಾಹಿತಿ ಒದಗಿಸುವುದು) | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ:** (see tables below) |

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ:**

ಕೊಪ್ಪಳ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದ ಹುದ್ದೆಗಳ ವಿವರ:

| ಕ್ರ, ಸಂ | ವೃಂದ | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿಯಿರುವ ಹುದ್ದೆಗಳು |
|---|---|---|---|---|
| 1. | ಗ್ರೂಪ್-ಬಿ | 1 | 0 | 1 |
| 2. | ಗ್ರೂಪ್-ಸಿ | 1` | 1 | 0 |
| 3. | ಗ್ರೂಪ್-ಡಿ | 1 | 0 | 1 |

**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ:**

ಕೊಪ್ಪಳ ಜಿಲ್ಲೆಯ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಹುದ್ದೆಗಳ ವಿವರ:

| ಕ್ರ, ಸಂ | ವೃಂದ | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿಯಿರುವ ಹುದ್ದೆಗಳು |
|---|---|---|---|---|
| 1. | ಸಹಾಯಕ ನಿರ್ದೇಶಕರು | 1 | 1 | 0 |
| 2. | ಅಧೀಕ್ಷಕರು | 1` | 1 | 0 |
| 3. | ದ್ವಿತೀಯ ದರ್ಜೆ ಸಹಾಯಕರು | 1 | 0 | 1 |
| 4. | ಗ್ರೂಪ್-ಡಿ ನೌಕರರು | 2 | 1 | 1 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಸದರಿ ಹುದ್ದೆಗಳು ಎಷ್ಟು ತಿಂಗಳುಗಳಿಂದ ಖಾಲಿ ಇವೆ; ಆರ್ಥಿಕವಾಗಿ ಹಿಂದುಳಿದ ಹಾಗೂ ಪ್ರತಿಭಾವಂತ ಕಲಾವಿದರಿಗೆ ಹಾಗೂ | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ:**<br><br>1. ಕೊಪ್ಪಳ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಪಟ್ಟಂತೆ ಗ್ರೂಪ್-ಬಿ ವೃಂದದ ಸಹಾಯಕ ನಿರ್ದೇಶಕರ ಹುದ್ದೆಯೂ 2019 ಡಿಸೆಂಬರ್ ಹಾಗೂ |

| | | |
|---|---|---|
| | ಪ್ರತಿಭಾವಂತ ಕ್ರೀಡಾ ಪಟುಗಳಿಗೆ ಈ ಖಾಲಿ ಹುದ್ದೆಗಳಿಂದ ನಿರೀಕ್ಷಿತ ಮಟ್ಟದಲ್ಲಿ ಸರ್ಕಾರದ ಯೋಜನೆಗಳನ್ನು ತಲುಪಿಸಲು ಸಾಧ್ಯವಾಗುತ್ತಿಲ್ಲಾ ಎಂಬ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರೂಪ್-ಡಿ ಹುದ್ದೆಯೂ 2019 ಆಗಸ್ಟ್ ರಿಂದ ಖಾಲಿ ಇದೆ.ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರು ಕೊಪ್ಪಳ ಜಿಲ್ಲೆಯ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಪ್ರಭಾರ ವ್ಯವಸ್ಥೆಯನ್ನು ಮಾಡಿರುತ್ತಾರೆ..<br>2. ಖಾಲಿ ಇರುವ ಗ್ರೂಪ್-ಡಿ ಹುದ್ದೆಗೆ ನಿಯಮಾನುಸಾರ ಮಂಜೂರಾದ ಖಾಯಂ ಹುದ್ದೆಗೆ ವಿರುದ್ಧ ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.<br>3. ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದಂತೆ, ಇಲಾಖೆಗೆ ಎಲ್ಲಾ ಅಧಿಕಾರಿ/ಸಿಬ್ಬಂದಿಗಳನ್ನು ನೇಮಿಸಲಾಗಿದ್ದು, ಕೊಪ್ಪಳ ಜಿಲ್ಲೆಯ ಪ್ರತಿಭಾವಂತ ಕಲಾವಿದರಿಗೆ ಸರ್ಕಾರದ ಯೋಜನೆಗಳನ್ನು ತಲುಪಿಸಲು ಕ್ರಮಕೈಗೊಳ್ಳಲಾಗುತ್ತಿದೆ.<br><br>**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ:**<br>ಕೊಪ್ಪಳ ಜಿಲ್ಲೆಯ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಲ್ಲಿ ದ್ವಿತೀಯ ದರ್ಜೆಯ ಸಹಾಯಕರ ಹುದ್ದೆಯು ದಿನಾಂಕ: 01.06.2017 ರಿಂದ ಖಾಲಿ ಇರುತ್ತದೆ. ಆದಾಗ್ಯೂ ಸದರಿ ಖಾಲಿ ಹುದ್ದೆಯಿಂದ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಯೋಜನೆಗಳನ್ನು ಜಿಲ್ಲೆಯ ಕ್ರೀಡಾ ಪಟುಗಳಿಗೆ ತಲುಪಿಸಲು ಯಾವುದೇ ಅಡಚಣೆ ಉಂಟಾಗಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಸದರಿ ಹುದ್ದೆಗಳ ಭರ್ತಿಗಾಗಿ ಸರ್ಕಾರ ಕೈಗೊಂಡ ಕ್ರಮಗಳೇನು? | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ:**<br>ಹೈದ್ರಬಾದ್ ಕರ್ನಾಟಕ ವೃಂದದಲ್ಲಿ ಖಾಲಿ ಇರುವ ಎರಡು ಹುದ್ದೆಗಳನ್ನು ತುಂಬಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.( ಖಾಲಿ ಇರುವ ಹುದ್ದೆಯಲ್ಲಿ ಕೊಪ್ಪಳ ಜಿಲ್ಲಾ ಸಹಾಯಕ ನಿರ್ದೇಶಕರ ಹುದ್ದೆಯು ಒಳಗೊಂಡಿರುತ್ತದೆ)<br>**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ:**<br>ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಗಳಿಗೆ ಮೀಸಲಾದ 03 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನೇರನೇಮಕಾತಿ ಮೂಲಕ ಭರ್ತಿ ಮಾಡುವಂತೆ ಕೋರಿ ಸಂಬಂಧಿಸಿದ ಪ್ರಾಧಿಕಾರಗಳಿಗೆ ಈಗಾಗಲೇ ಪ್ರಸ್ತಾವನೆ ಸಲ್ಲಿಸಲಾಗಿದೆ.<br>ಸರ್ಕಾರದ ಆದೇಶದಂತೆ ಖಾಲಿ ಇರುವ ಗ್ರೂಪ್-ಡಿ ನೌಕರರ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲು ಕ್ರಮವಹಿಸಲಾಗಿದೆ ಹಾಗೂ ಅನುಕಂಪದ ಆಧಾರದ ಮೇಲೆ ನೇರ ನೇಮಕಾತಿಯ ಮೂಲಕ ಸೂಕ್ತ ಅಭ್ಯರ್ಥಿಗಳನ್ನು ಹಂಚಿಕೆ ಮಾಡುವಂತೆ ಕೋರಿ ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲುರಗಿ ಇವರಿಗೆ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. |

ಸಂಖ್ಯೆ: ಕಸಂಪಾ 133 ಕೆಎಲ್ ಆಕ 2020.
(ಸಿ.ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು
ಸಂಸ್ಕೃತಿ ಹಾಗೂ ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಶ್ರೀನಿವಾಸ ಮೂರ್ತಿ ಕೆ ಡಾ. (ನೆಲಮಂಗಲ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1047
ಉತ್ತರ ದಿನಾಂಕ : 23.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯಿಂದ ನೀರನ್ನು ಒದಗಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; | ನೆಲಮಂಗಲ ವಿಧಾನಸಭಾ ಕ್ಷೇತ್ರದಲ್ಲಿ ಯಾವುದೇ ಸುಸ್ಥಿರ ಜಲಮೂಲ ಇಲ್ಲದಿರುವ ಕಾರಣ ಬಹುಗ್ರಾಮ ಕುಡಿಯುವ ನೀರಿನ ಯೋಜನೆ ಕೈಗೊಂಡಿರುವುದಿಲ್ಲ |
| ಆ) | ಬಹುಗ್ರಾಮ ಕುಡಿಯುವ ನೀರು ಒದಗಿಸುವ ಯೋಜನೆ ಜಾರಿಗೆ ತರಲು ಇರುವ ಮಾನದಂಡಗಳೇನು; | |
| ಇ) | ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರು ಯೋಜನೆಯಡಿ 2019-20 ಹಾಗೂ 2020-21ನೇ ಸಾಲಿನಲ್ಲಿ ಎಂ.ವಿ.ಎಸ್. ಮತ್ತು ಕ್ಯಾಡ್ ಕ್ಯೂ ಘಟಕದಡಿ ಕೇಂದ್ರ ಮತ್ತು ರಾಜ್ಯದ ಪಾಲಿನ ಎಷ್ಟು ಅನುದಾನವನ್ನು ಕ್ಷೇತ್ರಕ್ಕೆ ಬಿಡುಗಡೆಗೊಳಿಸಲಾಗಿದೆ (ವಿವರ ನೀಡುವುದು); | 2019-20 ಹಾಗೂ 2020-21ನೇ ಸಾಲಿನಲ್ಲಿ ಎಂ.ವಿ.ಎಸ್. ಮತ್ತು ಕ್ಯಾಡ್ ಕ್ಯೂ ಘಟಕದಡಿ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. |
| ಈ) | ಸದರಿ ಕ್ಷೇತ್ರಕ್ಕೆ ತುರ್ತು ಕುಡಿಯುವ ನೀರಿನ ಪೂರೈಕೆಗಾಗಿ ಎನ್.ಆರ್.ಡಿ.ಡಬ್ಲ್ಯೂ.ಪಿ, ಟಾಸ್ಕ್‌ಫೋರ್ಸ್ ಯೋಜನೆಯಡಿ ಎಷ್ಟು ಅನುದಾನ ಬಿಡುಗಡೆಯಾಗಿದೆ (ವಿವರ ನೀಡುವುದು); | 2019-20 ನೇ ಸಾಲಿಗೆ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ NRDWP ಕ್ರಿಯಾ ಯೋಜನೆಯಡಿ ಒಟ್ಟು 22 ಮುಂದುವರೆದ ಕಾಮಗಾರಿಗಳು, ಹಾಗೂ 91 ಹೊಸ ಕಾಮಗಾರಿಗಳು ಒಟ್ಟಾರೆ 113 ಕಾಮಗಾರಿಗಳಿಗೆ ರೂ.676.33ಲಕ್ಷಗಳು ನಿಗಧಿಯಾಗಿದ್ದು, ಸದರಿ ಕಾಮಗಾರಿಗಳಿಗೆ ಮಾರ್ಚ್-2020ರ ಅಂತ್ಯದವರೆಗೆ ರೂ.534.39ಲಕ್ಷಗಳು ಬಿಡುಗಡೆಯಾಗಿರುತ್ತದೆ.<br><br>2019-20ನೇ ಸಾಲಿಗೆ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಅಧ್ಯಕ್ಷರ ವಿವೇಚನಾ ಅನುದಾನದಡಿ 10 ಕಾಮಗಾರಿಗಳಿಗೆ ಒಟ್ಟಾರೆ ರೂ.25.47ಲಕ್ಷಗಳು ಬಿಡುಗಡೆಯಾಗಿರುತ್ತದೆ.<br><br>2019-20ನೇ ಸಾಲಿಗೆ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಟಾಸ್ಕ್‌ಫೋರ್ಸ್ ಯೋಜನೆಯಡಿ ಒಟ್ಟು 55 ಕಾಮಗಾರಿಗಳಿಗೆ ರೂ.143.49ಲಕ್ಷಗಳು ಬಿಡುಗಡೆಯಾಗಿರುತ್ತದೆ.<br><br>2020-21ನೇ ಸಾಲಿಗೆ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ NRDWP ಕ್ರಿಯಾ ಯೋಜನೆಯಡಿ ಒಟ್ಟು 30 ಮುಂದುವರೆದ ಕಾಮಗಾರಿಗಳಿಗೆ ರೂ.74.04ಲಕ್ಷಗಳು ನಿಗಧಿಯಾಗಿದ್ದು, ರೂ.39.16ಲಕ್ಷಗಳು ಬಿಡುಗಡೆಯಾಗಿರುತ್ತದೆ.<br><br>2020-21ನೇ ಸಾಲಿಗೆ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಬರಪೀಡಿತ ತಾಲ್ಲೂಕುಗಳಲ್ಲಿ ತುರ್ತು ಕುಡಿಯುವ ನೀರಿನ ಕಾಮಗಾರಿಗಳನ್ನು ಕೈಗೊಳ್ಳಲು ತಾಲ್ಲೂಕು ಟಾಸ್ಕ್‌ಫೋರ್ಸ್ ಸಮಿತಿಗೆ ಒಟ್ಟು 28 ಕಾಮಗಾರಿಗಳಿಗೆ ರೂ.75.00ಲಕ್ಷಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ವಿವೇಚನಾ ಅನುದಾನದಡಿ ಒಟ್ಟು 9 ಕಾಮಗಾರಿಗಳಿಗೆ ರೂ.25.00ಲಕ್ಷಗಳಂತೆ ಒಟ್ಟಾರೆ 37 ಕಾಮಗಾರಿಗಳಿಗೆ ರೂ.100.00ಲಕ್ಷಗಳು ಬಿಡುಗಡೆಯಾಗಿರುತ್ತದೆ. |

| | | |
|---|---|---|
| ಉ) | "ಅಟಲ್ ಭೂ ಜಲ ಯೋಜನೆ" ಯಿಂದ ಕ್ಷೇತ್ರದ ಎಷ್ಟು ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಲಾಗಿದೆ (ವಿವರ ಒದಗಿಸುವುದು); | "ಅಟಲ್ ಭೂ ಜಲ ಯೋಜನೆ"ಅಡಿಯಲ್ಲಿ ಇಲಾಖೆಯಿಂದ ಯಾವುದೇ ಕುಡಿಯುವ ನೀರು ಯೋಜನೆಗಳನ್ನು ಕೈಗೊಂಡಿರುವುದಿಲ್ಲ. |
| ಊ) | "ಅಟಲ್ ಭೂ ಜಲ ಯೋಜನೆ" ಯಿಂದ ಎಷ್ಟು ಗ್ರಾಮಗಳಿಗೆ ಕುಡಿಯುವ ನೀರನ್ನು ಪೂರೈಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | "ಅಟಲ್ ಭೂ ಜಲ ಯೋಜನೆ"ಅಡಿಯಲ್ಲಿ ಇಲಾಖೆಯಿಂದ ಯಾವುದೇ ಕುಡಿಯುವ ನೀರು ಯೋಜನೆಗಳನ್ನು ಕೈಗೊಂಡಿರುವುದಿಲ್ಲ. |

ಸಂ:ಗ್ರಾಕುನೀ&ನೈಇ 30 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1048

ಸದಸ್ಯರ ಹೆಸರು : ಡಾ|| ಶ್ರೀನಿವಾಸಮೂರ್ತಿ ಕೆ. (ನೆಲಮಂಗಲ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ನೆಲಮಂಗಲ ನಗರದಲ್ಲಿ 39 ಕೋಟಿಯ ವೆಚ್ಚದ ಹೈಟೆಕ್ ಬಸ್ ನಿಲ್ದಾಣ ಮಂಜೂರು ಮಾಡಿದ್ದು, ಇದುವರೆಗೂ ಕಾಮಗಾರಿ ಪ್ರಾರಂಭವಾಗದಿರಲು ಕಾರಣವೇನು; | ನೆಲಮಂಗಲ ನಗರದಲ್ಲಿ ರೂ.47.54 ಕೋಟಿಗಳ ವೆಚ್ಚದಲ್ಲಿ ನೂತನ ಬಸ್ ನಿಲ್ದಾಣ ನಿರ್ಮಿಸಲು ಒಟ್ಟು 2 ಎಕರೆ 23 ಗುಂಟೆ ಪ್ರದೇಶವನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ 1998ರಲ್ಲಿ ಹಂಚಿಕೆ ಮಾಡಲಾಗಿರುತ್ತದೆ. ಸದರಿ ನಿವೇಶನದಲ್ಲಿ 01 ಎಕರೆ 15 ಗುಂಟೆ ನಿವೇಶನವನ್ನು ಕರ್ನಾಟಕ ವಕ್ಫ್ ಮಂಡಳಿಯಿಂದ ಪಡೆಯಲಾಗಿದ್ದು, ಅದರ ಖಾತಾ ಮತ್ತು ಋಣಭಾರ ದಾಖಲೆಗಳು ಸಾರಿಗೆ ನಿಗಮಕ್ಕೆ ವರ್ಗಾವಣೆಯಾಗಿರುತ್ತದೆ. ನೆಲಮಂಗಲ ಪುರಸಭೆಗೆ ಸೇರಿದ 1 ಎಕರೆ 8 ಗುಂಟೆ ವಿಸ್ತೀರ್ಣದ ನಿವೇಶನವನ್ನು ಸಾರಿಗೆ ನಿಗಮಕ್ಕೆ ಉಚಿತವಾಗಿ ಹಸ್ತಾಂತರಿಸಲಾಗಿದೆ. ಆದರೆ, ಈವರೆಗೂ ಈ ನಿವೇಶನಕ್ಕೆ ಸಂಬಂಧಿಸಿದ ಖಾತಾ ಮತ್ತು ಋಣಭಾರ ದಾಖಲೆಗಳು ಸಾರಿಗೆ ನಿಗಮಕ್ಕೆ ವರ್ಗಾವಣೆಯಾಗಿರುವುದಿಲ್ಲ. ಕ.ರಾ.ರ.ಸಾ.ನಿಗಮದಿಂದ ನಿರ್ಮಿಸುವ ಆಧುನಿಕ ಬಸ್ ನಿಲ್ದಾಣದಿಂದ ಬರುವ ವಾಣಿಜ್ಯ ಆದಾಯವನ್ನು ಸಾರಿಗೆ ನಿಗಮಗಳು ಮತ್ತು ನಗರಸಭೆ ಹಂಚಿಕೆ ಮಾಡಿಕೊಳ್ಳುವ ಬಗ್ಗೆ ಒಡಂಬಡಿಕೆ (MOU) ಮಾಡಿಕೊಂಡು ಖಾತಾ ಮತ್ತು ಋಣಭಾರ ದಾಖಲೆಗಳನ್ನು ಸಾರಿಗೆ ನಿಗಮಕ್ಕೆ ವರ್ಗಾವಣೆ ಮಾಡುವಂತೆ ತೀರ್ಮಾನಿಸಲಾಗಿರುತ್ತದೆ. ಅದರಂತೆ ಒಡಂಬಡಿಕೆ (MOU) ಮಾಡಿಕೊಳ್ಳುವ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಒಡಂಬಡಿಕೆ ಮಾಡಿಕೊಂಡ ನಂತರ ಬಸ್ ನಿಲ್ದಾಣ ನಿರ್ಮಾಣ ಕೆಲಸವನ್ನು ಪ್ರಾರಂಭಿಸಲಾಗುತ್ತದೆ. |
| ಆ. | ಹೈಟೆಕ್ ಬಸ್ ನಿಲ್ದಾಣದ ಕಾಮಗಾರಿಯನ್ನು ನಿರ್ವಹಿಸಲು ಯಾವ ಸಂಸ್ಥೆಗೆ ಗುತ್ತಿಗೆ ನೀಡಲಾಗಿದೆ; ಗುತ್ತಿಗೆ ಪಡೆದ ಸಂಸ್ಥೆಯು ಯಾವಾಗ ಕೆಲಸ ಪ್ರಾರಂಭ ಮಾಡಲಾಗುತ್ತದೆ; | ಬಸ್ ನಿಲ್ದಾಣ ನಿರ್ಮಾಣದ ಕಾಮಗಾರಿಯನ್ನು ಟೆಂಡರ್ ಮೂಲಕ ಮೆ|| ಕೆ.ಎಂ.ವಿ. ಪ್ರಾಜೆಕ್ಟ್ಸ್ ಲಿಮಿಟೆಡ್ ರವರಿಗೆ ವಹಿಸಲಾಗಿರುತ್ತದೆ.<br><br>ಸಾರಿಗೆ ನಿಗಮಗಳು ಮತ್ತು ನಗರಸಭೆ ನಡುವೆ ವಾಣಿಜ್ಯ ಆದಾಯ ಹಂಚಿಕೆ ಸಂಬಂಧ ಒಡಂಬಡಿಕೆ (MOU) ಮಾಡಿಕೊಂಡು, ಖಾತಾ ಮತ್ತು ಋಣಭಾರ ದಾಖಲೆಗಳನ್ನು ನಗರಸಭೆ ವತಿಯಿಂದ ಸಾರಿಗೆ ನಿಗಮಕ್ಕೆ ವರ್ಗಾವಣೆ ಮಾಡಿಕೊಂಡ ನಂತರ ಕೆಲಸವನ್ನು ಪ್ರಾರಂಭಿಸಲು ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಲಾಗುತ್ತದೆ. |

| | | |
|---|---|---|
| ಇ. | ಸದರಿ ಬಸ್ ನಿಲ್ದಾಣದ ಕಾಮಗಾರಿ ಪ್ರಾರಂಭ ಮಾಡುವ ಪ್ರದೇಶದ ವಿಸ್ತೀರ್ಣವೆಷ್ಟು (ನಿಲ್ದಾಣದ ರೂಪರೇಷೆ, ನಕ್ಷೆ ಇನ್ನಿತರ ಮಾಹಿತಿ ಒದಗಿಸುವುದು); | ನೂತನ ಬಸ್ ನಿಲಾಣವನ್ನು ಒಟ್ಟು 2 ಎಕರೆ 23 ಗುಂಟೆ ವಿಸ್ತೀರ್ಣದ ಪ್ರದೇಶದಲ್ಲಿ ನಿರ್ಮಿಸಲಾಗುವುದು.<br>ನಿಲ್ದಾಣದ ನಕ್ಷೆಯನ್ನು ಅನುಬಂಧದಲ್ಲಿರಿಸಿದೆ. |
| ಈ. | ನೆಲಮಂಗಲ ಹೈಟೆಕ್ ಬಸ್ ನಿಲ್ದಾಣಕ್ಕೆ ಶಂಕುಸ್ಥಾಪನೆ ಮಾಡಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; | ನಿವೇಶನದ ಖಾತಾ ಮತ್ತು ಋಣಭಾರ ದಾಖಲೆಗಳನ್ನು ಸಾರಿಗೆ ನಿಗಮಕ್ಕೆ ವರ್ಗಾವಣೆ ಮಾಡಿಕೊಂಡ ನಂತರ ಶಿಷ್ಟಾಚಾರದ ಪ್ರಕಾರ ಶಂಕುಸ್ಥಾಪನೆ ಸಮಾರಂಭ ಏರ್ಪಡಿಸಲು ಕ್ರಮ ಕೈಗೊಳ್ಳಲಾಗುತ್ತದೆ. |
| ಉ. | ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸೋಲೂರು, ತ್ಯಾಮಗೊಂಡ್ಲು, ದಾಬಸ್‌ಪೇಟೆ, ಸೋಂಪುರ ಪ್ರದೇಶಗಳಲ್ಲಿ ಬಸ್ ನಿಲ್ದಾಣ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸೋಲೂರು ಮತ್ತು ದಾಬಸ್‌ಪೇಟೆಯಲ್ಲಿ ಕ.ರಾ.ರ.ಸಾ.ನಿಗಮದ ಬಸ್ ನಿಲ್ದಾಣಗಳು ಕಾರ್ಯಾಚರಣೆಯಲ್ಲಿರುತ್ತದೆ.<br>ತ್ಯಾಮಗೊಂಡ್ಲು ಮತ್ತು ಸೋಂಪುರದಲ್ಲಿ ಬಸ್ ನಿಲ್ದಾಣ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಊ. | ಹೋಬಳಿ ಕೇಂದ್ರಗಳಲ್ಲಿ ಬಸ್ ನಿಲ್ದಾಣ ಪ್ರಾರಂಭ ಮಾಡಲು ಸರ್ಕಾರ ನಿಗದಿಪಡಿಸಿದ ಅನುದಾನವೆಷ್ಟು; ಇದರ ಮಂಜೂರಾತಿಗೆ ಇರುವ ಮಾನದಂಡವೇನು? | ಬಸ್ ನಿಲ್ದಾಣ/ಬಸ್ ಘಟಕ/ವಿಭಾಗೀಯ ಕಛೇರಿ ನಿರ್ಮಾಣದ ಬಗ್ಗೆ ಮಾರ್ಗಸೂಚಿಯನ್ನು ಹೊರಡಿಸಲಾಗಿರುವ ಸುತ್ತೋಲೆ ಸಂಖ್ಯೆ: 01/2015-16, ದಿನಾಂಕ: 06-06-2015ರ ಪ್ರಕಾರ ಹೋಬಳಿ ಕೇಂದ್ರಗಳಲ್ಲಿ ಬಸ್ ನಿಲ್ದಾಣ ನಿರ್ಮಿಸಲು ತಯಾರಿಸಲಾಗುವ ಅಂದಾಜು ಪಟ್ಟಿಯ ಮೊತ್ತವು 2014-15ನೇ ಸಾಲಿನ ಲೋಕೋಪಯೋಗಿ ಇಲಾಖೆಯ ದರಪಟ್ಟಿಯ ಪ್ರಕಾರ ರೂ.100.00 ಲಕ್ಷಗಳ ಮಿತಿಯಲ್ಲಿರಬೇಕಿರುತ್ತದೆ.<br>ಬಸ್ ನಿಲ್ದಾಣ ನಿರ್ಮಾಣಕ್ಕೆ ಕನಿಷ್ಠ 1 ಎಕರೆ ನಿವೇಶನ ಲಭ್ಯವಿರಬೇಕಿದ್ದು, ಕನಿಷ್ಠ 50 ಬಸ್‌ಗಳ ಆಗಮನ/ನಿರ್ಗಮನ ಇರುವಂತಹ ಹೋಬಳಿ ಕೇಂದ್ರಗಳಲ್ಲಿ, ನಿಗಮದ ಆರ್ಥಿಕ ಪರಿಸ್ಥಿತಿ ಹಾಗೂ ಸಾರಿಗೆ ಅವಶ್ಯಕತೆಗೆ ಅನುಗುಣವಾಗಿ ಬಸ್ ನಿಲ್ದಾಣ ನಿರ್ಮಿಸಲು ಕ್ರಮಕೈಗೊಳ್ಳಲಾಗುತ್ತದೆ. |

ಸಂಖ್ಯೆ: ಟಿಡಿ 150 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1053 |
| ಸದಸ್ಯರ ಹೆಸರು | ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | 23.09.2020. |
| ಉತ್ತರಿಸುವ ಸಚಿವರು | ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕರಾಜ್ಯದ ಕರಾವಳಿ ಜಿಲ್ಲೆಗಳಲ್ಲಿ ಹಾಗೂ ರಾಜ್ಯದಾದ್ಯಂತ ಇರುವ ಸದರಿ ಜಿಲ್ಲೆಗಳ ಜನರುಐತಿಹಾಸಿಕ ಕಾಲದಿಂದಲೂ ಬಳಸಿಕೊಂಡು ಬಂದ ಮಾತೃಭಾಷೆ ತುಳುವನ್ನು ರಾಜ್ಯದ ಅಧಿಕೃತಭಾಷೆಗಳಲ್ಲಿ ಒಂದೆಂದು ಘೋಷಿಸುವ ಕುರಿತ್ತಾಗಿ ಸರ್ಕಾರದ ಮುಂದಿರುವ ಪ್ರಸ್ತಾವನೆಗಳು ಹಾಗೂನಿಲುವುಗಳೇನು; | ತುಳುಭಾಷೆಯನ್ನು ರಾಜ್ಯದ ಅಧಿಕೃತ ಭಾಷೆಗಳಲ್ಲಿ ಒಂದೆಂದು ಘೋಷಿಸುವ ಕುರಿತಾಗಿ ಈ ಇಲಾಖೆಯಅಭಿಪ್ರಾಯದೊಂದಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರಿಗೆ ಮುಂದಿನ ಹಂತ್ಕ್ರಮಕ್ಕಾಗಿ ಸಲ್ಲಿಸಲಾಗಿರುತ್ತದೆ. |
| ಆ) | ಭಾರತದೇಶದ ವಿವಿಧ ರಾಜ್ಯಗಳಲ್ಲಿ ಇಂತಹ ಬಹುಸಂಖ್ಯಾತ ಭಾಷಿಕರುಳ್ಳ ಭಾಷೆಗಳನ್ನು ತಮ್ಮರಾಜ್ಯದ ಅಧಿಕೃತ ಭಾಷೆಗಳೆಂದು ಘೋಷಿಸಿ ಕೇಂದ್ರ ಸರ್ಕಾರದ ಅನುಮೋದನೆ ಪಡೆದ ರೀತಿನೀತಿಗಳನ್ವಯ ತುಳು ಭಾಷೆಯನ್ನು ನಮ್ಮ ರಾಜ್ಯದ ಭಾಷೆ ಎಂದು ಘೋಷಿಸುವ ಕುರಿತಾದ ಸಕಾಲಿಕಕ್ರಮಗಳೇನು; | |
| ಇ) | ರಾಜ್ಯ, ದೇಶ ಹಾಗೂ ವಿಶ್ವದಾದ್ಯಂತ ತಮ್ಮ ನೆಲೆ ಕಂಡುಕೊಂಡು ಅಲ್ಲೆಲ್ಲ ತಮ್ಮ ತಾಯಿನುಡಿಯನ್ನುಬಳಸಿಕೊಂಡು ಒಂದು ಭಾಷಾ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿಕೊಂಡು ಹೋಗುತ್ತಿರುವ ತುಳುವರಅತಿ ದೀರ್ಘಕಾಲಿನ ಬೇಡಿಕೆಗೆ ಸರ್ಕಾರದ ಕ್ರಮಗಳೇನು; | ತುಳುಭಾಷೆಯನ್ನು ಸಂವಿಧಾನದ 8ನೇ ಪರಿಚ್ಛೇಧದಲ್ಲಿ ಸೇರಿಸಲು ರಾಜ್ಯ ಸರ್ಕಾರದಶಿಫಾರಸ್ಸಿನೊಂದಿಗೆ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. ಪ್ರಸ್ತುತ ಕೇಂದ್ರಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಈ) | ಸಾಂವಿಧಾನಿಕ ರೀತ್ಯಾ ತುಳುಭಾಷೆಗೆ ಅಧಿಕೃತ ಮನ್ನಣೆ ನೀಡುವಲ್ಲಿ ಸರ್ಕಾರದ ನಿರ್ದಿಷ್ಟ ಕ್ರಮಗಳು ಯಾವುವು? | ತುಳು ಭಾಷೆಯನ್ನು ಸಂವಿಧಾನದ 8ನೇ ಪರಿಚ್ಛೇಧದಲ್ಲಿ ಸೇರಿಸಲು ಕೇಂದ್ರ ಸರ್ಕಾರಕ್ಕೆದಿನಾಂಕ: 13.09.2001, 30.11.2007, 29.05.2009, 19.06.2009, 31.10.2013, 02.12.2013, 28.08.2014, 29.10.2014, 12.12.2014, |

| | | |
|---|---|---|
| | | 11.09.2018 ಮತ್ತು 07.01.2020ರಂದು ಪತ್ರಗಳನ್ನು ಬರೆಯಲಾಗಿರುತ್ತದೆ. ಸಂವಿಧಾನದ 8ನೇ ಅನುಚ್ಛೇದದಲ್ಲಿ ಪ್ರಸ್ತುತ ಇರುವ 22 ಭಾಷೆಗಳೊಂದಿಗೆ ತುಳು ಭಾಷೆಯುಸೇರಿದಂತೆ ಇನ್ನೂ 38 ಭಾಷೆಗಳನ್ನು ಸೇರಿಸುವ ಬಗ್ಗೆ ಏಕರೂಪದ ಮಾನದಂಡಗಳನ್ನು ಸೂಚಿಸಲುರಚಿಸಲಾಗಿದ್ದ ಶ್ರೀ ಸೀತಾಕಾಂತ ಮಹೋಪಾತ್ರ ಇವರ ಸಮಿತಿಯು ಸಲ್ಲಿಸಿರುವ ವರದಿಯನ್ನುಯಶಿಫಾರಸ್ಸುಗಳನ್ನು ಅಧ್ಯಯನ ಮಾಡಲು ಅಂತರ್ ಸಚಿವಾಲಯ ಸಮಿತಿಯೊಂದ್ರನ್ನು ರಚಿಸಲಾಗಿದೆ. ಈಸಮಿತಿಯು ಅಧ್ಯಯನ ನಡೆಸುತ್ತಿದ್ದು, ಇದುವರೆಗೂ ಈ ಪ್ರಸ್ತಾವನೆಯು ಕೇಂದ್ರ ಸರ್ಕಾರದಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಕಸಂಪಾ 126 ಕೆಓಎಲ್ ಆಕ 2020.

(ಸಿ.ಟಿ. ರವಿ)
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು
ಸಂಸ್ಕೃತಿ ಹಾಗೂ ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1056 |
|---|---|---|
| 2 | ಸದಸ್ಯರ ಹೆಸರು | ಶ್ರೀ ಶಿವಣ್ಣ ಬಿ. (ಆನೇಕಲ್) |
| 3 | ಉತ್ತರಿಸಬೇಕಾದ ದಿನಾಂಕ | 23.09.2020 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಗ್ರಾಮಠಾಣ ಗಳನ್ನು ಸರ್ವೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು (ಮಾಹಿತಿ ನೀಡುವುದು); | **-: ರಾಜ್ಯದಲ್ಲಿನ ಗ್ರಾಮಠಾಣಗಳನ್ನು ಅಳತೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳು:-**<br>ಸರ್ಕಾರದ ಸುತ್ತೋಲೆ ಸಂ.ಆರ್.ಡಿ. 430 ಎಲ್.ಜಿಪಿ 2013 ದಿನಾಂಕ: 25-8-2014 ಮತ್ತು ಭೂಮಾಪನ ಇಲಾಖೆ ಸುತ್ತೋಲೆ ಸಂ.ಇಲಾಖೆ ಸುತ್ತೋಲೆ ಸಂ.ಪಿಎಂಯು.ಎಂಜೆ.ಸಿಐಆರ್.006/2014-15 ದಿನಾಂಕ:5-11-2014 ಗಳ ನ್ವಯ ಗ್ರಾಮಾ ಠಾಣಾ ಆಸ್ತಿಗಳನ್ನು ಅಳತೆ ಮಾಡಿ ಸದರಿ ಆಸ್ತಿಯು ಗ್ರಾಮ ಠಾಣಾದ ಒಳಗಡೆ ಬರುತ್ತಿದ್ದಲ್ಲಿ ಇ-ಸ್ವತ್ತು ನಕ್ಷೆ ತಯಾರಿಸಿ, ನಂತರ ಸದರಿ ನಕ್ಷೆಯನ್ನು ಸಂಬಂಧಿಸಿದ ಹೋಬಳಿ ಮಟ್ಟದಲ್ಲಿರುವ ಅಟಲ್-ಜೀ ಜನಸ್ನೇಹಿ ಕೇಂದ್ರದ ಮುಖಾಂತರ ಸಾರ್ವಜನಿಕರಿಗೆ ವಿತರಿಸಲಾಗುತ್ತಿದೆ.<br>ಒಂದು ವೇಳೆ ಆಸ್ತಿಯು ಗ್ರಾಮಠಾಣಾದ ಹೊರಗಡೆ ಬರುತ್ತಿದ್ದಲ್ಲಿ ಈ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ಸದರಿ ಆಸ್ತಿಯು ಗ್ರಾಮಠಾಣಾದ ಹೊರಗಡೆ ಬರುತ್ತಿರುವ ಬಗ್ಗೆ ಹಿಂಬರಹದ ಮೂಲಕ ತಿಳಿಸಲಾಗುತ್ತದೆ.<br>ಈ ರೀತಿ ಗ್ರಾಮ ಠಾಣಾ ವ್ಯಾಪ್ತಿಯ ಸ್ವತ್ತುಗಳಿಗೆ ನಕ್ಷೆ ಕೋರಿ ಸ್ವೀಕೃತ ವಾಗುವ ಅರ್ಜಿಗಳನ್ನು ಮೋಜಿಣಿ ತಂತ್ರಾಂಶದ ಮುಖಾಂತರ ಆನ್.ಲೈನ್.ನಲ್ಲಿ ಸ್ವೀಕರಿಸುತ್ತಿದ್ದು, ಮೋಜಿಣಿ ತಂತ್ರಾಂಶದ ಪ್ರತಿ - ಹಂತ ದಲ್ಲಿಯೂ **FIFO** (ಸರದಿ ಸಾಲಿನಂತೆ) ಅಳವಡಿಸಲಾಗಿದೆ, ಅದರಂತೆ ಮೋಜಿಣಿ. ತಂತ್ರಾಂಶದಲ್ಲಿ ಪ್ರಕರಣವನ್ನು ಅಳತೆಗಾಗಿ ಭೂಮಾಪಕರಿಗೆ ಆನ್.ಲೈನ್‌ನಲ್ಲಿ ವಿತರಿಸಲಾಗುತ್ತಿದ್ದು, ಪ್ರಕರಣದಲ್ಲಿ ಅಳತೆಯಾದ ನಂತರ ಭೂಮಾಪಕರು ಆನ್.ಲೈನ್‌ನಲ್ಲಿ ಕಡತಗಳನ್ನು ಅಪ್-ಲೋಡ್ ಮಾಡಲು ಹಾಗೂ ಅಪ್-ಲೋಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹ ಆನ್.ಲೈನ್ ನಲ್ಲಿ ನಿರ್ವಹಿಸಲಾಗುತ್ತಿದೆ. ಮೋಜಿಣಿ ತಂತ್ರಾಂಶದ ಮುಖಾಂತರ ಪ್ರಕರಣಗಳನ್ನು ನಿರ್ವಹಿಸುತ್ತಿದ್ದು, ಯಾವುದೇ ಹಂತದಲ್ಲಿ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮ ವಹಿಸಲಾಗುತ್ತಿದೆ,. |
| ಆ) | ಯಾವ ಕಾಲಮಿತಿಯಲ್ಲಿ ಅಳತೆ ಪೂರ್ಣಗೊಳಿಸ ಲಾಗುವುದು (ಮಾಹಿತಿ ನೀಡುವುದು); | |

| ಇ) | ಗ್ರಾಮ ಠಾಣಗಳ ಸರ್ವೆ ಕಾರ್ಯಕ್ಕಾಗಿ ಸರ್ಕಾರ ಮಾಡಿಕೊಂಡಿರುವ ಸಿದ್ಧತೆಗಳೇನು (ವಿವರವಾದ ಮಾಹಿತಿ ನೀಡುವುದು)? | **-: ರಾಜ್ಯದಲ್ಲಿಯ ಗ್ರಾಮ ಠಾಣಗಳ ಸರ್ವೆ ಕಾರ್ಯಕ್ಕಾಗಿ ಸರ್ಕಾರ ಮಾಡಿಕೊಂಡಿರುವ ಸಿದ್ಧತೆಗಳ ವಿವರ :-**<br>ರಾಜ್ಯದ ಗ್ರಾಮಗಳಲ್ಲಿನ ಜನ ವಸತಿ ಪ್ರದೇಶಗಳ ಆಸ್ತಿಗಳನ್ನು ಅಳತೆ ಮಾಡಿ, ಪ್ರಾಪರ್ಟಿ ಕಾರ್ಡ ನೀಡುವ ಉದ್ದೇಶದಿಂದ ಕೇಂದ್ರ ಸರ್ಕಾರವು **"ಸ್ವಮಿತ್ವ"** ಯೋಜನೆಯನ್ನು ಜಾರಿಗೊಳಿಸಿದ್ದು, ಈ ಯೋಜನೆಯಡಿಯಲ್ಲಿ ಡ್ರೋನ್ ಮೂಲಕ ಗ್ರಾಮವಾಸಿಗಳ ವಾಸಸ್ಥಳದ ಆಸ್ತಿಗಳ ಸರ್ವೆ ಮಾಡಿ, ಪ್ರಾಪರ್ಟಿ ಕಾರ್ಡ ವಿತರಿಸಲಾಗುವುದು.<br>2020-21 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯದ ಸುಮಾರು 16,600 ಗ್ರಾಮಗಳಲ್ಲಿ ಸ್ವಮಿತ್ವ ಯೋಜನೆಯನ್ನು ಜಾರಿಗೊಳಿಸಲು ಉದ್ದೇಶಿಸಲಾಗಿದ್ದು, ಪ್ರಥಮ ಹಂತದಲ್ಲಿ 16 ಜಿಲ್ಲೆಗಳಲ್ಲಿ ಸ್ವಮಿತ್ವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುತ್ತಿದೆ.<br>ಈ ರೀತಿಯಾಗಿ ರಾಜ್ಯದ ಉಳಿದ ಜಿಲ್ಲೆಗಳ ಎಲ್ಲಾ ಗ್ರಾಮಗಳಲ್ಲಿನ ಜನ ವಸತಿ ಪ್ರದೇಶಗಳನ್ನು ಈ ಯೋಜನೆಯಡಿ ಹಂತ ಹಂತವಾಗಿ ಆಯ್ಕೆ ಮಾಡಿಕೊಂಡು, ಆಸ್ತಿಗಳ ಸರ್ವೆ ಮಾಡಿ, ಪ್ರಾಪರ್ಟಿ ಕಾರ್ಡ್ ನೀಡಲು ಕ್ರಮ ಕೈಗೊಳ್ಳಲಾಗುವುದು. |
|---|---|---|

**ಸಂಖ್ಯೆ: ಕಂಇ 129 ಎಸ್‌ಎಸ್‌ಸಿ 2020**

**(ಆರ್.ಅಶೋಕ)**
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1057

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರ ಆಡಳಿತಾತ್ಮಕ ಅನುಮೋದನೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಮಾಹಿತಿ ನೀಡುವುದು); | ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 335 ಯುಸೇಕ್ರೀ 2016, ಬೆಂಗಳೂರು, ದಿನಾಂಕ: 14.02.2017ರನ್ವಯ ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ರೂ. 489.56 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ತಾತ್ವಿಕ ಅನುಮೋದನೆ ನೀಡಲಾಗಿರುತ್ತದೆ. ಸದರಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರ ಆಡಳಿತಾತ್ಮಕ ಅನುಮೋದನೆ ನೀಡಿರುವುದಿಲ್ಲ. |
| ಆ) | ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿದ್ದರೂ, ಇದುವರೆಗೂ ಕಾಮಗಾರಿಗಳನ್ನು ಕೈಗೊಳ್ಳದಿರಲು ಕಾರಣಗಳೇನು (ಮಾಹಿತಿ ನೀಡುವುದು); | ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ರೂ.489.56 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 335 ಯುಸೇಕ್ರೀ 2016, ದಿನಾಂಕ: 14.02.2017ರನ್ವಯ ತಾತ್ವಿಕ ಅನುಮೋದನೆ ನೀಡಲಾಗಿದ್ದು, ಅನುದಾನದ ಕೊರತೆಯಿಂದಾಗಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗಿರುವುದಿಲ್ಲ. |
| ಇ) | ತಾಲ್ಲೂಕು ಕೇಂದ್ರದಲ್ಲಿರುವ ಕ್ರೀಡಾಂಗಣದ ಕಾಮಗಾರಿಗಳನ್ನು ತುರ್ತಾಗಿ ಕೈಗೊಳ್ಳಬೇಕೆಂಬ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ (ಮಾಹಿತಿ ನೀಡುವುದು)? | ತಾಲ್ಲೂಕು ಕ್ರೀಡಾಂಗಣಗಳಲ್ಲಿ ಕ್ರೀಡಾ ಅಂಕಣಗಳು, ಆವರಣ ಗೋಡೆ/ತಂತಿ ಬೇಲಿ, ನೀರು ಸರಬರಾಜು, ವಿದ್ಯುತ್ ವ್ಯವಸ್ಥೆ, ಶೌಚಾಲಯ, ಪೆವಿಲಿಯನ್ ಕಟ್ಟಡ, ಮತ್ತಿತರ ಕನಿಷ್ಟ ಮೂಲ ಸೌಕರ್ಯಗಳನ್ನು ಕಲ್ಪಿಸಲು ಆದ್ಯತೆ ನೀಡಲಾಗುತ್ತಿದೆ. ಅನುದಾನದ ಲಭ್ಯತೆ ಆಧರಿಸಿ ತಾಲ್ಲೂಕು ಕ್ರೀಡಾಂಗಣಗಳ ಹೆಚ್ಚುವರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ.<br><br>ಬೆಂಗಳೂರು ನಗರದ ಆನೇಕಲ್ ತಾಲ್ಲೂಕು |

| | | |
|---|---|---|
| | | ಕ್ರೀಡಾಂಗಣದಲ್ಲಿ ಆಟದ ಮೈದಾನ, ಚೈನ್ ಲಿಂಕ್ ಬೇಲಿ, ವಿದ್ಯುತ್ ವ್ಯವಸ್ಥೆ, ನೀರು ಸರಬರಾಜು, ಶೌಚಾಲಯ ಹಾಗೂ ಪೆವಿಲಿಯನ್ ಕಟ್ಟಡ ಸೌಲಭ್ಯ ಕಲ್ಪಿಸಲಾಗಿದೆ. ಅಲ್ಲದೆ ರೂ. 50.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಪ್ರೇಕ್ಷಕರ ಗ್ಯಾಲರಿ ನಿರ್ಮಿಸಲು ದಿನಾಂಕ: 19.02.2020ರಂದು ಆಡಳಿತಾತ್ಮಕ ಅನುಮೋದನೆ ನೀಡಿ, ಮೊದಲನೇ ಕಂತಾಗಿ ರೂ. 25.00 ಲಕ್ಷಗಳ ಅನುದಾನವನ್ನು ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ನಿಗಮ ನಿಯಮಿತ ಸಂಸ್ಥೆಗೆ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದ್ದು, ಶೇ.50ರಷ್ಟು ಕಾಮಗಾರಿ ಪೂರ್ಣಗೊಂಡಿರುತ್ತದೆ. |

**ವೈಎಸ್ ಡಿ-/ಇಬಿಬಿ/86/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಕರ್ನಾಟಕ ವಿಧಾನಸಭೆ

15ನೇ ವಿಧಾನಸಭೆ

7ನೇ ಅಧಿವೇಶನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1078

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ರಿಜ್ವಾನ್ ಅರ್ಷದ್ (ಶಿವಾಜಿನಗರ)

ಉತ್ತರಿಸುವ ದಿನಾಂಕ : 23-09-2020

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲಾ ಪಂಚಾಯತ್ ರಾಜ್ ಅಧಿನಿಯಮದ ಅನ್ವಯ ಕೆಲಸ ಮಾಡದೇ ಇರುವುದರಿಂದ ಅಲ್ಲಿಯ ಆಡಳಿತ ಮಂಡಳಿ ವಿಸರ್ಜನೆ ಮಾಡುವ ಕುರಿತು ಸರ್ಕಾರಕ್ಕೆ ದೂರು ಸಲ್ಲಿಸಲಾಗಿದೆಯೇ; | ಹೌದು |
| ಆ) | ಸದರಿ ದೂರು ಯಾವ ಕಾರಣಕ್ಕೆ ಸಲ್ಲಿಸಲಾಗಿದೆ ಹಾಗೂ ಅದರ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ರಾಯಚೂರು ಜಿಲ್ಲಾ ಪಂಚಾಯತಿಯು ಕರ್ನಾಟಕ ಗ್ರಾಮ್ ಸ್ವರಾಜ್ ಮಾತ್ತು ಪಂಚಾಯತ್ ರಾಜ್ ಕಾಯ್ದೆ 1993ರ ಅಧಿನಿಯಮಗಳಡಿ ನಿಗಧಿಪಡಿಸಿರುವ ಕರ್ತವ್ಯಗಳನ್ನು ನಿರ್ವಹಿಸಲು ವಿಫಲಗೊಂಡಿರುವ ಬಗ್ಗೆ ದೂರನ್ನು ಸಲ್ಲಿಸಲಾಗಿದೆ. ಈ ಬಗ್ಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ವರದಿಯನ್ನು ಪಡೆದು ಪರಿಶೀಲಿಸಲಾಗುತ್ತಿದೆ. |
| ಇ) | ಅಧಿನಿಯಮದ ಪ್ರಕಾರ ಜಿಲ್ಲಾ ಪಂಚಾಯತ್ ಕಾರ್ಯನಿರ್ವಹಿಸದೇ ಇದ್ದರೂ ಸರ್ಕಾರ ಕ್ರಮ ಕೈಗೊಳ್ಳಲು ವಿಳಂಬ ಮಾಡುತ್ತಿರಲು ಕಾರಣಗಳೇನು; | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ಪಡೆದಿರುವ ವರದಿಯನ್ನಾಧರಿಸಿ ಜಿಲ್ಲಾ ಪಂಚಾಯತಿಯ ಅಧ್ಯಕ್ಷರು ಉಪಾಧ್ಯಕ್ಷರು ಹಾಗೂ ಎಲ್ಲಾ ಸದಸ್ಯರುಗಳಿಗು ಕಾರಣ ಕೇಳುವ ನೋಟಿಸನ್ನು ಜಾರಿಗೊಳಿಸಲಾಗಿತ್ತು. ಅವರುಗಳಿಂದ ವಿವರಣೆಯನ್ನು ಪಡೆದು ಪರಿಶೀಲಿಸಲಾಗಿರುತ್ತದೆ. ಚುನಾಯುತ ಸಂಸ್ಥೆಯೊಂದನ್ನು ವಿಸರ್ಜಿಸುವ ವಿಷಯದಲ್ಲಿ ವಿವರವಾಗಿ ಪರಿಶೀಲಿಸಬೇಕಾಗಿರುವುದು ಅತ್ಯಾವಶ್ಯಕವಾಗಿರುತ್ತದೆ. ಈ ಎಲ್ಲಾ ಪ್ರಕ್ರಿಯೆಗಳನ್ನು ನಿಯಮಾನುಸಾರ ನಿರ್ವಹಿಸಬೇಕಾಗಿರುವುದರಿಂದ ಕಾಲಾವಕಾಶ ಬೇಕಾಗಿರುತ್ತದೆ. |
| ಈ) | ನಿಯಮಿತವಾಗಿ ಸಾಮಾನ್ಯ ಸಭೆ ನಡೆಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮವೇನು; (ಪೂರ್ಣ ವಿವರ ನೀಡುವುದು) | ಅಧ್ಯಕ್ಷರು ಮತ್ತು ಸದಸ್ಯರಿಗೆ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 268ರಡಿ ನೋಟಿಸ್ ನೀಡಲಾಗಿದೆ. ಅಧ್ಯಕ್ಷರು ಮತ್ತು ಕೆಲವು ಸದಸ್ಯರುಗಳು ಮಾತ್ರ ವಿವರಣೆಯನ್ನು ಸಲ್ಲಿಸಿರುತ್ತಾರೆ. ವಿವರಣೆಯನ್ನು ಸರ್ಕಾರ ಸಮಗ್ರವಾಗಿ ಪರಿಶೀಲಿಸಿದೆ ಹಾಗೂ ಈ ಸಂಬಂಧವಾಗಿ ಅಂತಿಮ ನಿರ್ಧಾರವನ್ನು ಕೈಗೊಳ್ಳಲಾಗುವುದು. |

| ಉ) | ಜಿಲ್ಲಾ ಪಂಚಾಯತ್ ಸಮರ್ಪಕವಾಗಿ ಕಾರ್ಯನಿರ್ವಹಿಸದೇ ಇರುವುದರಿಂದ ಜಿಲ್ಲೆಯ ಅಭಿವೃದ್ಧಿಗೆ ಹಾಗೂ ಸರ್ಕಾರ ಯೋಜನೆಗಳು ಜನರಿಗೆ ತಲುಪಿಸಲು ತೊಂದರೆಯಾಗಿದೆಯೆಂದು ಸರ್ಕಾರಕ್ಕೆ ಮನವರಿಕೆಯಾಗಿದೆಯೇ; ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮವೇನು; | ಪ್ರಶ್ನೆಯ (ಈ) ಭಾಗದಲ್ಲಿ ನೀಡಲಾಗಿರುವ ಉತ್ತರವು ಈ ಪ್ರಶ್ನೆಗೂ ಅನ್ವಯವಾಗುತ್ತದೆ. |
|---|---|---|
| ಊ) | ಸದರಿ ಜಿಲ್ಲಾ ಪಂಚಾಯತ್ ಸರ್ಕಾರ ವಿಸರ್ಜನೆ ಮಾಡುತ್ತದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕ್ರಮ ಜರುಗಿಸುತ್ತದೆ? (ಮಾಹಿತಿ ನೀಡುವುದು) | ಪ್ರಶ್ನೆಯ (ಈ) ಭಾಗದಲ್ಲಿ ನೀಡಲಾಗಿರುವ ಉತ್ತರವು ಈ ಪ್ರಶ್ನೆಗೂ ಅನ್ವಯವಾಗುತ್ತದೆ. |

ಸಂಖ್ಯೆ:ಗ್ರಾಅಪಂರಾ 418 ಜಿಪಸ 2020

(ಕೆ.ಎಸ್.ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1081

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ರಾಜಾವೆಂಕಟಪ್ಪ ನಾಯಕ್ (ಮಾನ್ವಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಪ್ರದೇಶದ ವ್ಯಾಪ್ತಿಯ ರಾಯಚೂರು ಜಿಲ್ಲೆಯ ಮಾನ್ವಿ ವಿಧಾನಸಭಾ ಕ್ಷೇತ್ರದಲ್ಲಿ ಸಿರವಾರ ಹೊಸ ತಾಲ್ಲೂಕೆಂದು ಘೋಷಣೆ ಮಾಡಿದ್ದು, ಕ್ರೀಡಾ ಕ್ಷೇತ್ರದ ಅಭಿವೃದ್ಧಿಗಾಗಿ ಅನುದಾನ ಮಂಜೂರು ಮಾಡಲು ಸರ್ಕಾರ ಕ್ರಮವಹಿಸುವುದೇ; | ರಾಯಚೂರು ಜಿಲ್ಲೆಯ ಮಾನ್ವಿ ವಿಧಾನಸಭಾ ಕ್ಷೇತ್ರದಲ್ಲಿ ಸಿರವಾರ ಹೊಸ ತಾಲ್ಲೂಕೆಂದು ಘೋಷಣೆ ಮಾಡಲಾಗಿದ್ದು, ತಾಲ್ಲೂಕು ಕೇಂದ್ರದಲ್ಲಿ ಕ್ರೀಡಾಂಗಣ ನಿರ್ಮಾಣ ಮಾಡಲು ಸೂಕ್ತ ನಿವೇಶನವನ್ನು ಗುರುತಿಸಲು ಕ್ರಮವಹಿಸಲಾಗುತ್ತಿದೆ. ಸೂಕ್ತ ನಿವೇಶನವನ್ನು ಗುರುತಿಸಿ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಹಸ್ತಾಂತರಗೊಂಡ ನಂತರ ಕ್ರೀಡಾಂಗಣ ನಿರ್ಮಾಣ ಕೈಗೆತ್ತಿಕೊಳ್ಳಲು ಕ್ರಮವಹಿಸಲಾಗುವುದು. |
| ಆ) | ಸಿರವಾರ ತಾಲ್ಲೂಕು ಹೊರಾಂಗಣ ಕ್ರೀಡಾಂಗಣಕ್ಕೆ ಅವಶ್ಯವಿರುವ ಮೂಲಭೂತ ಸೌಕರ್ಯಕ್ಕಾಗಿ ಬಿಡುಗಡೆಗೊಳಿಸಲಾದ ಅನುದಾನವೆಷ್ಟು;<br><br>(ಗ್ರಾಮೀಣ ಭಾಗದ ಕ್ರೀಡಾ ಕ್ಷೇತ್ರದ ಅಭಿವೃದ್ಧಿಗಾಗಿ ಸರ್ಕಾರ ಕೈಗೊಳ್ಳಲಾಗುವ ಕಾರ್ಯಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಸಿರವಾರ ತಾಲ್ಲೂಕು ಹೊರಾಂಗಣ ಕ್ರೀಡಾಂಗಣ ನಿರ್ಮಾಣಕ್ಕೆ ಯಾವುದೇ ಅನುದಾನ ಬಿಡುಗಡೆ ಆಗಿರುವುದಿಲ್ಲ.<br><br>ಗ್ರಾಮೀಣ ಭಾಗದ ಕ್ರೀಡಾ ಕ್ಷೇತ್ರದ ಅಭಿವೃದ್ಧಿಗಾಗಿ ಸರ್ಕಾರವು ಕೆಳಕಾಣಿಸಿದ ಕ್ರಮಗಳನ್ನು ಕೈಗೊಂಡಿದೆ.<br><br>1. ಗ್ರಾಮೀಣ ಭಾಗದ ಗರಡಿ ಮನೆಗಳ ನಿರ್ಮಾಣಕ್ಕೆ ರೂ 10.00 ಲಕ್ಷ ಹಾಗೂ ದುರಸ್ಥಿಗೆ ರೂ 2.00 ಲಕ್ಷ ಅನುದಾನ ಒದಗಿಸಲಾಗುತ್ತಿದೆ.<br>2. ಗ್ರಾಮೀಣ ಭಾಗದ ಜನಪ್ರಿಯ ಕ್ರೀಡೆಯಾದ ಕಬಡ್ಡಿ ಕ್ರೀಡೆಯ ಉತ್ತೇಜನಕ್ಕಾಗಿ ಎಲ್ಲಾ ಜಿಲ್ಲೆಗಳಿಗೆ ಆಧುನಿಕ ಕಬಡ್ಡಿ ಮ್ಯಾಟ್ ಗಳನ್ನು ಒದಗಿಸಲಾಗಿದೆ.<br>3. ಗ್ರಾಮೀಣ ಮಣ್ಣಿನ ಕುಸ್ತಿ ಕ್ರೀಡಾಪಟುಗಳಿಗೆ ಉತ್ತೇಜನ ನೀಡಲು ಕರ್ನಾಟಕ ಕುಸ್ತಿ ಹಬ್ಬವನ್ನು ಆಯೋಜಿಸಲಾಗುತ್ತಿದೆ. |

| | | |
|---|---|---|
| | | 4. ಗ್ರಾಮೀಣ ಭಾಗದ ಸರ್ಕಾರಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿಗೆ ಕ್ರೀಡಾ ಸಾಮಗ್ರಿಗಳನ್ನು ನೀಡಲಾಗುತ್ತಿದೆ.<br>5. 'ಯುವ ಚೈತನ್ಯ' ಕಾರ್ಯಕ್ರಮದಡಿ ಗ್ರಾಮೀಣ ಭಾಗದ ಯುವ ಸಂಘಗಳಿಗೆ ಕ್ರೀಡಾ ಕಿಟ್ ನೀಡಲಾಗುತ್ತಿದೆ.<br>6. ಗ್ರಾಮೀಣ ಹಾಗೂ ಸಾಂಪ್ರದಾಯಿಕ ಕ್ರೀಡೆಗಳಲ್ಲಿ ಗಣನೀಯ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ 'ಕರ್ನಾಟಕ ಕ್ರೀಡಾ ರತ್ನ' ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿದೆ.<br>7. ಗ್ರಾಮೀಣ ಭಾಗದ ಕ್ರೀಡಾಪಟುಗಳು ಸೇರಿದಂತೆ ಪ್ರತಿಭಾವಂತ ಸಾಧಕ ಕ್ರೀಡಾಪಟುಗಳಿಗೆ ನಗದು ಪುರಸ್ಕಾರ, ಶೈಕ್ಷಣಿಕ ಶುಲ್ಕ ಮರುಪಾವತಿ ಹಾಗೂ ಕ್ರೀಡಾ ವಿದ್ಯಾರ್ಥಿ ವೇತನಗಳನ್ನು ನೀಡಲಾಗುತ್ತಿದೆ. |

**ವೈಎಸ್ ಡಿ-/ಇಬಿಬಿ/92/2020**

**(ಸಿ. ಟಿ. ರವಿ)**
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1089

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ರೇವಣ್ಣ, ಹೆಚ್. ಡಿ. (ಹೊಳೇನರಸೀಪುರ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳೆನರಸೀಪುರ ಪಟ್ಟಣದ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಒಳಾಂಗಣ ಕ್ರೀಡಾಂಗಣದ ನಿರ್ಮಾಣದ ಕಾಮಗಾರಿಗೆ ರೂ 450.00 ಲಕ್ಷಗಳ ಅನುದಾನ ಮಂಜೂರಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದ್ದು, ಒಳಾಂಗಣ ಕ್ರೀಡಾಂಗಣದ ಉಳಿಕೆ ಕಾಮಗಾರಿಗಳಾದ ಆಫೀಸ್ ರೂಂ, ಜನರೇಟರ್ ರೂಂ, ಸ್ಟೋರ್ ರೂಂ, ಗ್ಯಾಲರಿ ಮತ್ತು ಬಾಸ್ಕೆಟ್ ಬಾಲ್ ಮತ್ತು ಬ್ಯಾಟನ್ ಕೋರ್ಟ್ ಗಳಿಗೆ ವುಡನ್ ಫ್ಲೋರಿಂಗ್ ಅಳವಡಿಕೆ ಹಾಗೂ ಕೆಲವು ಮೂಲಭೂತ ಸೌಕರ್ಯಗಳ ಕಾಮಗಾರಿಗಳನ್ನು ನಿರ್ವಹಿಸಲು ಹೆಚ್ಚುವರಿಯಾಗಿ ರೂ 298.00 ಲಕ್ಷಗಳ ಅನುದಾನದ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಹೆಚ್ಚುವರಿ ಅನುದಾನದ ಬಿಡುಗಡೆ ಬಗ್ಗೆ, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಕೆಯಾಗಿದೆಯೇ; | ಹೌದು. |
| ಇ) | ಹಾಗಿದ್ದಲ್ಲಿ, ಸದರಿ ಒಳಾಂಗಣ ಕ್ರೀಡಾಂಗಣದ ನಿರ್ಮಾಣದ ಹೆಚ್ಚುವರಿ ಕಾಮಗಾರಿಗೆ ಅವಶ್ಯಕತೆ ಇರುವ ರೂ 298.00 ಲಕ್ಷಗಳ ಅನುದಾನದ ಬಿಡುಗಡೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆ ಹೊಳೇನರಸೀಪುರ ಪಟ್ಟಣದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಆವರಣದಲ್ಲಿ ರೂ 450.00 ಲಕ್ಷಗಳ ವೆಚ್ಚದಲ್ಲಿ ಒಳಾಂಗಣ ಈಜುಕೊಳ ಹಾಗೂ ಒಳಾಂಗಣ ಕ್ರೀಡಾಂಗಣವನ್ನು ನಿರ್ಮಿಸಲು ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 378 ಯುಸೇಕ್ರೀ 2016; ದಿನಾಂಕ: 29.08.2017ರನ್ವಯ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ಅದರಂತೆ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆ, ಹಾಸನ ಜಿಲ್ಲೆ ಇವರಿಗೆ ವಹಿಸಲಾಗಿದ್ದು, ಇಲ್ಲಿಯವರೆಗೂ |

| | | |
|---|---|---|
| | | ಒಟ್ಟು ರೂ.360.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ. ಈಗಾಗಲೆ ಮಂಜೂರು ಮಾಡಲಾಗಿರುವ ಕಾಮಗಾರಿಗಳಿಗೆ ಅಗತ್ಯವಿರುವ ರೂ90.00 ಲಕ್ಷಗಳನ್ನು ಬಿಡುಗಡೆ ಮಾಡಬೇಕಾಗಿರುತ್ತದೆ. ಈಗಾಗಲೇ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹೆಚ್ಚುವರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಬಗ್ಗೆ ಅನುದಾನದ ಲಭ್ಯತೆ ಆಧರಿಸಿ ಪರಿಗಣಿಸಲಾಗುವುದು. |

**ವೈಎಸ್ ಡಿ-/ಇಬಿಬಿ/90/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1090 |
| ಮಾನ್ಯ ವಿಧಾನ ಸಭೆಯ ಸದಸ್ಯರು | : | ಶ್ರೀ ರೇವಣ್ಣ ಹೆಚ್.ಡಿ. (ಹೊಳೆನರಸೀಪುರ) |
| ಉತ್ತರಿಸಬೇಕಾದ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯಲ್ಲಿ ಸುಪ್ರಸಿದ್ಧ ಶ್ರೀ ಚನ್ನಕೇಶವಸ್ವಾಮಿ ದೇವಾಲಯ, ಬಲಭಾಗದಲ್ಲಿ ಲಕ್ಷ್ಮೀ ದೇವಾಲಯ, ಎಡಭಾಗದಲ್ಲಿ ರಂಗನಾಯಕಿ ದೇವಾಲಯ, ಬಲಭಾಗದ ಮುಂಭಾಗದಲ್ಲಿ ಕಪ್ಪೆಚನ್ನಿಗರಾಯನ ದೇವಾಲಯ, ನಾಲ್ಕು ಮೂಲೆಯಲ್ಲಿ ಈಶ್ವರ ಹಾಗೂ ಬಸವಲಿಂಗಗಳನ್ನು ಹೊಂದಿರುವ ದೇವಾಲಯ ಆವರಣವನ್ನು ಹಾಗೂ ಹಳೇಬೀಡಿನಲ್ಲಿರುವ ಹೊಯ್ಸಳ ಶೈಲಿಯಲ್ಲಿ ಕಲ್ಲಿನಲ್ಲಿ ಕೆತ್ತಿ ನಿರ್ಮಿಸಿರುವ ಶ್ರೀ ಕೇದಾರೇಶ್ವರಸ್ವಾಮಿ ದೇವಸ್ಥಾನ ಮತ್ತು ಶಾಂತಲಾದೇವಿ ನಾಟ್ಯಮಂಟಪ ಹಾಗೂ ಜೈನ ಬಸದಿಗಳಿರುವ ದೇವಸ್ಥಾನಗಳ ಆವರಣವನ್ನು ಪ್ರವಾಸಿಗರ ಭೂಪಟದಲ್ಲಿ ಒಂದು ಮಹತ್ವ ಸ್ಥಾನವನ್ನು ಹೊಂದಿದ್ದು, ವಿಶ್ವಪ್ರಸಿದ್ಧ ಮತ್ತು ಅಪರೂಪದ ಕಲ್ಲುಕೆತ್ತನೆಯ ಈ ಕಲಾಕೃತಿಗಳನ್ನು ವಿಶ್ವಪರಂಪರೆಯ (World Heritage Sites) ಸ್ಥಳಗಳೆಂದು ಘೋಷಿಸಲು 1996-97ನೇ ಸಾಲಿನಲ್ಲಿ ಅವಶ್ಯವಿರುವ ಸೂಕ್ತ ದಾಖಲಾತಿಗಳೊಂದಿಗೆ ಒಂದು ಪ್ರಸ್ತಾವನೆಯನ್ನು ಭಾರತ ಸರ್ಕಾರಕ್ಕೆ ಮತ್ತು ಭಾರತದಲ್ಲಿರುವ ವಿಶ್ವಸಂಸ್ಥೆಯ ಅಂಗಸಂಸ್ಥೆ UNESCO ಗೆ ರಾಜ್ಯ ಸರ್ಕಾರವು ಕಳುಹಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹೌದು.<br><br>ಹೊಯ್ಸಳ ವಾಸ್ತುಶಿಲ್ಪ ಶೈಲಿಯ ಸ್ಮಾರಕಗಳ ಸಮೂಹಗಳನ್ನು **"SACRED ENSEMBLES OF HOYSALA" (HOYSALA ARCHITECTURE SERIES INCLUDING BELUR AND HALEBIDU)** ಎಂಬ ಶೀರ್ಷಿಕೆಯಡಿ UNESCO ವಿಧಿಸಿರುವ ಮಾಡದಂಡದನ್ವಯ ಮೊದಲಿಗೆ ವಿಶ್ವಪರಂಪರೆ **ತಾತ್ಕಾಲಿಕ ಪಟ್ಟಿಗೆ** . ಸೇರ್ಪಡೆಗೊಳಿಸಲು ವಿಶ್ವಪರಂಪರೆ ಸಲಹಾ ಸಮಿತಿಗೆ ಪ್ರಸ್ತಾವನೆಯನ್ನು ಫೆಬ್ರವರಿ 2014ರಲ್ಲಿ ಸಲ್ಲಿಸಲಾಗಿರುತ್ತದೆ. |

| | | |
|---|---|---|
| ಆ) | ರಾಜ್ಯ ಸರ್ಕಾರ ಈ ಪ್ರಸ್ತಾವನೆಗೆ ಭಾರತ ಸರ್ಕಾರ ಮತ್ತು ವಿಶ್ವಸಂಸ್ಥೆಯ UNESCO ಕೈಗೊಂಡಿರುವ ಅಗತ್ಯ ಕ್ರಮಗಳೇನು; ಈ ಪ್ರಸ್ತಾವನೆಯು ಭಾರತ ಸರ್ಕಾರದಲ್ಲಾಗಲೀ ವಿಶ್ವಸಂಸ್ಥೆ UNESCO ಯಲ್ಲಾಗಲೀ ಯಾವ ಹಂತದಲ್ಲಿದೆ; (ಸಂಪೂರ್ಣ ಮಾಹಿತಿ ನೀಡುವುದು) | ವಿಶ್ವ ಪರಂಪರೆ ತಾತ್ಕಾಲಿಕ ಪಟ್ಟಿಯಲ್ಲಿ ಸೇರ್ಪಡೆಗೆ ಮೊದಲ ಹಂತದ ಪರಿಷ್ಕರಣೆ ಪ್ರಕ್ರಿಯೆ ಸಮಿತಿ ಸಭೆಯು ದಿನಾಂಕ:15.04.2014ರಂದು ಯಶಸ್ವಿಯಾಗಿ ಜರುಗಿದ ನಂತರ ಇಲಾಖೆಯ ವತಿಯಿಂದ ಸಲ್ಲಿಸಲಾಗಿದ್ದ ಮೇಲ್ಕಂಡ ಪ್ರಸ್ತಾವನೆಯನ್ನು ವಿಶ್ವ ಪರಂಪರೆ ಸಮಿತಿಯು ಅಂಗೀಕರಿಸಿ ಈ ತಾಣವನ್ನು ವಿಶ್ವ ಪರಂಪರೆ ತಾತ್ಕಾಲಿಕ ಪಟ್ಟಿಗೆ ಸೇರ್ಪಡೆಗೊಳಿಸಿದೆ. |
| ಇ) | ಒಂದು ವೇಳೆ, ಹಾಸನ ಜಿಲ್ಲೆಯಲ್ಲಿ ಹೊಯ್ಸಳ ಶೈಲಿಯಲ್ಲಿ ರಾಜಾ ವಿಷ್ಣುವರ್ಧನ ದೇವರಾಯ 12ನೇ ಶತಮಾನದಲ್ಲಿ ಬೇಲೂರಿನಲ್ಲಿ ಕಟ್ಟಿಸಿರುವ ಸುಪ್ರಸಿದ್ಧ ಶ್ರೀ ಚನ್ನಕೇಶವಸ್ವಾಮಿ ದೇವಾಲಯದ ಆವರಣವನ್ನು ಹಾಗೂ ಹಳೇಬೀಡಿನಲ್ಲಿರುವ ಹೊಯ್ಸಳ ಶೈಲಿಯಲ್ಲಿ ಕಲ್ಲಿನಲ್ಲಿ ಕೆತ್ತಿ ನಿರ್ಮಿಸಿರುವ ಶ್ರೀ ಕೇದಾರೇಶ್ವರಸ್ವಾಮಿ ದೇವಸ್ಥಾನ ಮತ್ತು ಶ್ರೀ ಶಾಂತಲದೇವಿ ನಾಟ್ಯಮಂಟಪ ದೇವಸ್ಥಾನಗಳ ಆವರಣವನ್ನು ವಿಶ್ವಪರಂಪರೆಯ (World Heritage Sites) ಸ್ಥಳಗಳೆಂದು ಘೋಷಿಸಲು ಕಳುಹಿಸಲಾಗಿದ್ದ ಪ್ರಸ್ತಾವನೆಯು ರಾಜ್ಯ ಸರ್ಕಾರಕ್ಕೆ ಹಿಂತಿರುಗಿಸಿದ್ದಲ್ಲಿ, ಈ ಪ್ರಸಿದ್ಧ ದೇವಾಲಯಗಳ ಆವರಣಗಳನ್ನು ವಿಶ್ವಪರಂಪರೆಯ (World Heritage Sites) ಸ್ಥಳಗಳೆಂದು ಘೋಷಿಸಲು ಮತ್ತೆ ಯಾವ ವರ್ಷದಲ್ಲಿ ಭಾರತ ಸರ್ಕಾರಕ್ಕೆ ಸಲ್ಲಿಸಲಾಗಿದೆ; ಪ್ರಸ್ತುತ ಈ ಪ್ರಸ್ತಾವನೆ ಯಾವ ಹಂತದಲ್ಲಿದೆ? (ಸಂಪೂರ್ಣ ಮಾಹಿತಿ ನೀಡುವುದು) | ತಾತ್ಕಾಲಿಕ ಪಟ್ಟಿಗೆ ಆಯ್ಕೆಗೊಂಡಿದ್ದ ಈ ತಾಣವನ್ನು ವಿಶ್ವಪರಂಪರೆ ಅಂತಿಮ ಪಟ್ಟಿಗೆ ಸೇರ್ಪಡೆಗೊಳಿಸಲು ಇನ್ ಟ್ಯಾಕ್ (Indian National Trust for Art and Culture Heritage), Bangalore ಇವರ ಮೂಲಕ UNESCO ವಿಧಿಸಿರುವ ಮಾಡದಂಡದನ್ವಯ ಸಿದ್ಧಪಡಿಸಿದ ಡೋಸಿಯರ್ ಬಗ್ಗೆ ದಿನಾಂಕ:08.09.2020ರಂದು ಮಹಾನಿರ್ದೇಶಕರು, ಭಾರತೀಯ ಪುರಾತತ್ತ್ವ ಸರ್ವೇಕ್ಷಣೆ, ನವದೆಹಲಿ, ಇವರಿಗೆ ಪ್ರಾತ್ಯಕ್ಷಿಕೆಯನ್ನು ನೀಡಲಾಗಿದೆ.<br><br>ಸದರಿ ಸಭೆಯಲ್ಲಿ ಚರ್ಚಿತವಾದಂತೆ ಕರಡು ಡೋಸಿಯರ್ ಅನ್ನು ಭಾರತೀಯ ಪುರಾತತ್ತ್ವ ಸರ್ವೇಕ್ಷಣೆಯ ಪರಿಶೀಲನೆಗೆ ಮತ್ತು ಅವರ ಶಿಫಾರಸ್ಸಿನೊಂದಿಗೆ ಪ್ಯಾರಿಸ್‌ನಲ್ಲಿರುವ ವಿಶ್ವಪರಂಪರೆ ಸಮಿತಿಯ ಪರಿಶೀಲನೆಗೆ ಕಳುಹಿಸಿಕೊಡಲು ದಿನಾಂಕ 15.09.2020ರಂದು ಸಲ್ಲಿಸಲಾಗಿರುತ್ತದೆ.<br><br>ಸದ್ಯ ಈ ಪ್ರಸ್ತಾವನೆಯು ಭಾರತೀಯ ಪುರಾತತ್ತ್ವ ಸರ್ವೇಕ್ಷಣೆಯ ಪರಿಶೀಲನೆಯಲ್ಲಿರುತ್ತದೆ. |

ಕಡತ ಸಂಖ್ಯೆ: ಟಿಓಆರ್ 159 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1092

ಸದಸ್ಯರ ಹೆಸರು : ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ (ಬೀಳಗಿ)

ಉತ್ತರಿಸುವ ದಿನಾಂಕ : 23-09-2020.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಹೊಸದಾಗಿ ಗ್ರಾಮ ಪಂಚಾಯಿತಿಗಳನ್ನು ರಚಿಸುವಾಗ ಅನುಸರಿಸುವ ನಿಯಮಗಳೇನು; | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ಅಧಿನಿಯಮ, 1993 ಪ್ರಕರಣ 4 ರಲ್ಲಿ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು ಜಿಲ್ಲಾಧಿಕಾರಿಗಳು 5000 ಕ್ಕಿಂತ ಕಡಿಮೆ ಇಲ್ಲದ ಮತ್ತು 7000 ಕ್ಕೆ ಹೆಚ್ಚಿಗೆ ಇಲ್ಲದ ಜನಸಂಖ್ಯೆಯುಳ್ಳ ಒಂದು ಗ್ರಾಮವನ್ನು ಅಥವಾ ಗ್ರಾಮಗಳ ಗುಂಪನ್ನು ಒಳಗೊಂಡಿರುವ ಯಾವುದೇ ಪ್ರದೇಶವನ್ನು ಪಂಚಾಯತಿ ಪ್ರದೇಶವೆಂದು ಘೋಷಿಸುವುದು ಯುಕ್ತವೆಂದು ಅಭಿಪ್ರಾಯಪಟ್ಟರೆ, ಮೊದಲೆ ಪ್ರಕಟಣೆ ಹೊರಡಿಸಿದ ತರುವಾಯ ಅಂತಹ ಪ್ರದೇಶವನ್ನು ಪಂಚಾಯತಿ ಪ್ರದೇಶವೆಂದು ಘೋಷಿಸಬಹುದು ಮತ್ತು ಅದರ ಕೇಂದ್ರ ಕಾರ್ಯ ಸ್ಥಾನವನ್ನು ನಿರ್ದಿಷ್ಟಪಡಿಸಬಹುದಾಗಿದೆ. |
| (ಆ) | ಗ್ರಾಮ ಪಂಚಾಯಿತಿಗಳ ಪುನರ್ ವಿಂಗಡನೆ ಸಂದರ್ಭದಲ್ಲಿ ರಾಜ್ಯಾದ್ಯಂತ ಎಷ್ಟು ಹೊಸ ಗ್ರಾಮ ಪಂಚಾಯಿತಿಗಳನ್ನು ರಚಿಸಲಾಗಿದೆ; | ಗ್ರಾಮ ಪಂಚಾಯಿತಿಗಳ ಪುನರ್ ವಿಂಗಡನೆ ಸಂದರ್ಭದಲ್ಲಿ ರಾಜ್ಯಾದ್ಯಂತ 461 ಹೊಸ ಗ್ರಾಮ ಪಂಚಾಯಿತಿಗಳನ್ನು ರಚಿಸಲಾಗಿದೆ; |
| (ಇ) | ಬೀಳಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬಾಗಲಕೋಟೆ ಜಿಲ್ಲೆಯ "ರೊಳ್ಳಿ" ಗ್ರಾಮದಲ್ಲಿ ಹೊಸ ಗ್ರಾಮ ಪಂಚಾಯಿತಿಯನ್ನು ರಚಿಸಬೇಕೆನ್ನುವ ಬೇಡಿಕೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಈ) | ಹಾಗಿದ್ದಲ್ಲಿ, ಸದರಿ "ರೊಳ್ಳಿ" ಗ್ರಾಮದಲ್ಲಿ ಇಲ್ಲಿಯವರೆಗೂ ಹೊಸ ಗ್ರಾಮ ಪಂಚಾಯಿತಿಯನ್ನು ರಚಿಸದೇ ಇರುವುದಕ್ಕೆ ಕಾರಣಗಳೇನು; ಹಾಗೂ ಗ್ರಾಮದ ಜನರು ಗ್ರಾಮ ಪಂಚಾಯಿತಿಯನ್ನು ಬಹಿಷ್ಕರಿಸಿರುವುದನ್ನು ಸರ್ಕಾರ ಗಮನಿಸಿದೆಯೇ; | ರಾಜ್ಯದಲ್ಲಿ ಹಾಲಿ ಇರುವ ಕೆಲವು ಗ್ರಾಮ ಪಂಚಾಯತಿಗಳನ್ನು ವಿಭಜಿಸಿ ಹೊಸ ಗ್ರಾಮ ಪಂಚಾಯತಿಗಳನ್ನು ರಚಿಸಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ:15-04-2020 ರಂದು ಸಂಖ್ಯೆ: ಆಇ 107 ವೆಚ್ಚ 6/2020 (ಇ-ಆಫೀಸ್) ರಲ್ಲಿ ನೀಡಿರುವ ಅಭಿಪ್ರಾಯದಲ್ಲಿ ಶೀಘ್ರದಲ್ಲಿ ಜನಗಣತಿ ಕಾರ್ಯ ಮತ್ತು ಸ್ಥಳೀಯ ಸಂಸ್ಥೆಗಳ ಚುನಾವಣೆ ನಡೆಯಲಿದ್ದು, ಇಂತಹ ವೇಳೆಯಲ್ಲಿ ಹೊಸದಾಗಿ ಗ್ರಾಮ ಪಂಚಾಯತಿಗಳನ್ನು ಸೃಜಿಸುವುದಕ್ಕೆ ಅವಕಾಶವಿರುವುದಿಲ್ಲ. ಜನಗಣತಿ ಮತ್ತು ಚುನಾವಣೆ ಪ್ರಕ್ರಿಯೆಗಳು ಪೂರ್ಣಗೊಂಡ ನಂತರ ಇಂತಹ ಪ್ರಸ್ತಾವನೆಗಳನ್ನು ಸಲ್ಲಿಸುವಂತೆ ತಿಳಿಸಿದೆ.<br><br>ರೊಳ್ಳಿ ಗ್ರಾಮದ ಜನರು ಗ್ರಾಮ ಪಂಚಾಯಿತಿ ಚುನಾವಣೆಯನ್ನು ಬಹಿಷ್ಕರಿಸಿರುವುದನ್ನು ಸರ್ಕಾರ ಗಮನಿಸಿದೆ. |

| (ಉ) | ಯಾವ ಕಾಲಮಿತಿಯಲ್ಲಿ ಸದರಿ "ರೊಳ್ಳಿ" ಗ್ರಾಮಕ್ಕೆ ಹೊಸ ಗ್ರಾಮ ಪಂಚಾಯಿತಿಯನ್ನು ರಚಿಸಲಾಗುವುದು? | ಕಾಲಮಿತಿ ಇರುವುದಿಲ್ಲ. |
|---|---|---|

ಸಂ. ಗ್ರಾಅಪ 710 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1103
ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಟಿ. ಶೇಖರ್ (ಹೊಸದುರ್ಗ)
ಉತ್ತರಿಸುವ ದಿನಾಂಕ : 23-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಗ್ರಾಮ ಪಂಚಾಯಿತಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗ್ರಂಥಾಲಯ ಮೇಲ್ವಿಚಾರಕರ ನೌಕರರ ಸಂಖ್ಯೆ ಎಷ್ಟು; ಇವರಿಗೆ ಪ್ರತಿ ತಿಂಗಳು ಎಷ್ಟು ವೇತನವನ್ನು ನೀಡಲಾಗಿತ್ತಿದೆ; | ರಾಜ್ಯದ ಗ್ರಾಮ ಪಂಚಾಯಿತಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗ್ರಂಥಾಲಯ ಮೇಲ್ವಿಚಾರಕರ ನೌಕರರ ಸಂಖ್ಯೆ:5622.<br><br>ಗ್ರಂಥಾಲಯ ಮೇಲ್ವಿಚಾರಕರಿಗೆ ಪ್ರತಿ ತಿಂಗಳು ರೂ.7,000/- ಗೌರವ ಸಂಭಾವನೆ ನೀಡಲಾಗುತ್ತಿದೆ. |
| (ಆ) | 2016 ರಲ್ಲಿ ಕಾರ್ಮಿಕ ಇಲಾಖೆ ಅನುಸಾರ ರೂ.13,200 ಕನಿಷ್ಟ ವೇತನ ಇನ್ನೂ ಜಾರಿಯಾಗದೇ ವಿಳಂಬಕ್ಕೆ ಕಾರಣಗಳೇನು? (ಯಾವಾಗ ಮಾಡಲಾಗುವುದು) | ಗ್ರಾಮ ಪಂಚಾಯತಿ ಗ್ರಂಥಾಲಯ ಮೇಲ್ವಿಚಾರಕರಿಗೆ ಈ ಹಿಂದೆ ಕಾರ್ಮಿಕ ಇಲಾಖೆಯ ಅಧಿಸೂಚನೆ ಸಂ: ಕಾಇ 71 ಎಲ್‌ಡಬ್ಲ್ಯೂಎ 2015 ದಿ: 05.08.2016 ರಂತೆ ಮೇಲ್ವಿಚಾರಕರಿಗೆ ಮಾಸಿಕ ರೂ. 13200/- ಗಳಂತೆ ಕನಿಷ್ಠ ವೇತನವನ್ನು ನಿಗಧಿಪಡಿಸಿ ಆದೇಶ ಹೊರಡಿಸಲಾಗಿರುತ್ತದೆ. ನಂತರ ಪ್ರಸ್ತಾಪಿತ ಕಾರ್ಮಿಕ ಇಲಾಖೆಯ ಅಧಿಸೂಚನೆಯನ್ನು ಕಾರ್ಮಿಕ ಇಲಾಖೆಯ ಅಧಿಸೂಚನೆ ಸಂ; ಕಾಇ 85 ಎಲ್‌ಡಬ್ಲ್ಯೂಎ 2017 ದಿ: 04.09.2017 ರಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಮೇಲ್ವಿಚಾರಕರು ಗೌರವ ಸಂಭಾವನೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಕಾರಣ ಮತ್ತು ಸದರಿ ಅಧಿಸೂಚನೆಯನ್ನು ಹೊರಡಿಸುವ ಪೂರ್ವದಲ್ಲಿ ಆಡಳಿತ ಇಲಾಖೆಯಾದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯನ್ನು ಸಂಪರ್ಕಿಸಿ ಅವರ ಅಭಿಪ್ರಾಯ ಪಡೆದಿರುವುದಿಲ್ಲವಾದ ಕಾರಣ, ಕನಿಷ್ಟ ವೇತನಕಾಯ್ದೆ 1948ರ ಕಾಲಂ 26 (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಅಧಿಸೂಚನೆ ಸಂ: ಕಾಇ 71 ಎಲ್‌ಡಬ್ಲ್ಯೂಎ 2015 ದಿ: 05.08.2016 ರ ಅಧಿಸೂಚನೆಯ ಪಟ್ಟಿಯಕ್ರಮ ಸಂಖ್ಯೆ 1 ರ ಗ್ರಂಥಪಾಲಕ/ಗ್ರಂಥಾಲಯ ಮೇಲ್ವಿಚಾರಕರು ಇವರಿಗೆ ಸಂಬಂಧಿಸಿದಂತೆ, ಅಧಿಸೂಚನೆಯನ್ನು ಹಿಂಪಡೆಯಲಾಗಿರುತ್ತದೆ.<br><br>ಗ್ರಾಮೀಣ ಪ್ರದೇಶಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಮೇಲ್ವಿಚಾರಕರ ಕೆಲಸದ ಅವಧಿ ಮತ್ತು ನಿರ್ವಹಣೆಯ ಜವಾಬ್ದಾರಿಗನುಗುಣವಾಗಿ ನೀಡಲಾಗಿರುವ ಒಂದು ಗೌರವ ಸಂಭಾವನೆಯಾಗಿದ್ದು, ಗ್ರಂಥಾಲಯ ಮೇಲ್ವಿಚಾರಕರು |

| | | ಪೂರ್ಣಕಾಲಿಕ ನೌಕರರ ವ್ಯಾಪ್ತಿಗೆ ಬರುವುದಿಲ್ಲ. ಸದರಿಯವರನ್ನು ಕಾರ್ಮಿಕರೆಂದು ಪರಿಗಣಿಸುವುದು ಸೂಕ್ತವಾಗಿರುವುದಿಲ್ಲವೆಂಬ ಅಂಶವನ್ನು ಕಾರ್ಮಿಕ ಇಲಾಖಾ ಪತ್ರ ಸಂಖ್ಯೆ: ಕಾಇ 212 ಎಲ್‌ಡಬ್ಲ್ಯೂಎ 2013, ದಿ: 18.12.2013 ರಲ್ಲಿ ತಿಳಿಸಿರುತ್ತಾರೆ.<br><br>ಮೇಲ್ವಿಚಾರಕರುಗಳ ಕಾರ್ಯನಿರ್ವಹಣಾ ಅವಧಿಯು ಕೇವಲ 04 ಗಂಟೆಯಾಗಿರುವುದರಿಂದ ಹಾಗೂ ಗ್ರಾಮ ಪಂಚಾಯತಿ ಗ್ರಂಥಾಲಯ ಮೇಲ್ವಿಚಾರಕರ ಸ್ಥಾನಗಳು ಮಂಜೂರಾದ ಹುದ್ದೆಗಳಾಗಿರುವುದಿಲ್ಲ ಮತ್ತು ಮಂಜೂರಾದ ಹುದ್ದೆಗಳ ಎದುರಿಗೆ ಕಾರ್ಯನಿರ್ವಹಿಸುತ್ತಿಲ್ಲವಾದ ಕಾರಣ, ಮೇಲ್ವಿಚಾರಕರು ಕನಿಷ್ಠ ವೇತನದಡಿ ಬರುವುದಿಲ್ಲ. |
|---|---|---|

ಸಂ. ಗ್ರಾಅಪ 708 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1108

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ರಾಮಚಂದ್ರ ಎಸ್.ವಿ.(ಜಗಳೂರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23/09/2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಅಡುಗೆ ಸಹಾಯಕರುಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು.) | ರಾಜ್ಯದಲ್ಲಿರುವ ಅಂಗನವಾಡಿ ಕಾರ್ಯಕರ್ತೆಯರು : 65911<br>ರಾಜ್ಯದಲ್ಲಿರುವ ಅಂಗನವಾಡಿ ಸಹಾಯಕಿಯರು : 62580<br><br>(ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ.) |
| ಆ. | ಇವರುಗಳನ್ನು ಖಾಯಂಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇವರುಗಳನ್ನು ಖಾಯಂಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಇ. | ಹಾಗಿದ್ದಲ್ಲಿ, ಯಾವಾಗ ಖಾಯಂಗೊಳಿಸಲಾಗುವುದು; | ಅನ್ವಯಿಸುವುದಿಲ್ಲ. |
| ಈ. | ಹಾಗಿಲ್ಲದಿದ್ದಲ್ಲಿ, ಇವರುಗಳನ್ನು ಖಾಯಂಗೊಳಿಸಲು ಸರ್ಕಾರಕೀರುವ ತೊಂದರೆಗಳೇನು? (ವಿವರಗಳನ್ನು ನೀಡುವುದು) | ಕೇಂದ್ರ ಪುರಸ್ಕೃತ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿಯಲ್ಲಿ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ಹುದ್ದೆಗಳು ಗೌರವಧನ ಸೇವೆಯ ಹುದ್ದೆಗಳಾಗಿರುತ್ತದೆ. ಇವರುಗಳನ್ನು ಖಾಯಂಗೊಳಿಸುವ ಬಗ್ಗೆ ಕೇಂದ್ರ ಸರ್ಕಾರ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 178 ಐಸಿಡಿ 2020

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಮಚಂದ್ರ ಎಸ್.ವಿ (ಜಗಳೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ: 1108 ಕ್ಕೆ ಅನುಬಂಧ

ರಾಜ್ಯದಲ್ಲಿರುವ ಅಂಗನವಾಡಿ ಕಾರ್ಯಕತೆ ಮತ್ತು ಸಹಾಯಕಿಯರ ಜಿಲ್ಲಾವಾರು ವಿವರ

| ಕ್ರಸಂ | ಜಿಲ್ಲೆ | ಅಂಗನವಾಡಿ ಕಾರ್ಯಕರ್ತೆ | ಅಂಗನವಾಡಿ ಸಹಾಯಕಿ |
|---|---|---|---|
| 1 | ಬಾಗಲಕೋಟೆ | 2221 | 2164 |
| 2 | ಬೆಂಗಳೂರು | 1229 | 1108 |
| 3 | ಬೆಂಗಳೂರು ನಗರ | 2420 | 2329 |
| 4 | ಬೆಳಗಾಂ | 5294 | 5235 |
| 5 | ಬಳ್ಳಾರಿ | 2784 | 2715 |
| 6 | ಬೀದರ್ | 1893 | 1866 |
| 7 | ಬಿಜಾಪೂರ | 2313 | 2269 |
| 8 | ಚಾಮರಾಜನಗರ | 1421 | 1371 |
| 9 | ಚಿಕ್ಕಬಳ್ಳಾಪುರ | 1961 | 1848 |
| 10 | ಚಿಕ್ಕಮಗಳೂರು | 1825 | 1667 |
| 11 | ಚಿತ್ರದುರ್ಗ | 2324 | 2208 |
| 12 | ದಾವಣಗೆರೆ | 1721 | 1656 |
| 13 | ದಕ್ಷಿಣ ಕನ್ನಡ | 2104 | 2084 |
| 14 | ಧಾರವಾಡ | 1505 | 1495 |
| 15 | ಗದಗ | 1166 | 1162 |
| 16 | ಗುಲ್ಬರ್ಗ | 3098 | 3025 |
| 17 | ಹಾಸನ | 2523 | 2248 |
| 18 | ಹಾವೇರಿ | 1918 | 1891 |
| 19 | ಕೊಡಗು | 871 | 848 |
| 20 | ಕೋಲಾರ | 2061 | 1980 |
| 21 | ಕೊಪ್ಪಳ | 1850 | 1800 |
| 22 | ಮಂಡ್ಯ | 2546 | 2240 |
| 23 | ಮೈಸೂರು | 2860 | 2691 |
| 24 | ರಾಯಚೂರು | 2662 | 2621 |
| 25 | ರಾಮನಗರ | 1543 | 1301 |
| 26 | ಶಿವಮೊಗ್ಗ | 2439 | 2125 |
| 27 | ತುಮಕೂರು | 4095 | 3576 |
| 28 | ಉಡುಪಿ | 1191 | 1191 |
| 29 | ಉತ್ತರಕನ್ನಡ | 2687 | 2530 |
| 30 | ಯಾದಗಿರಿ | 1386 | 1336 |
|  | **ಒಟ್ಟು:** | **65911** | **62580** |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 1116
2. ಉತ್ತರಿಸಬೇಕಾದ ದಿನಾಂಕ : 23.09.2020
3. ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ)
4. ಉತ್ತರಿಸುವ ಸಚಿವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಪ್ರಸ್ತುತ ಎಷ್ಟು ಎಲೆಕ್ಟ್ರಿಕಲ್ ಇಂಜಿನಿಯರುಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ. (ಉಪವಿಭಾಗವಾರು ಮಾಹಿತಿ ನೀಡುವುದು) | ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ವ್ಯಾಪ್ತಿಯಲ್ಲಿ ಮಂಜೂರಾದ ಇಲೆಕ್ಟ್ರಿಕಲ್ ಇಂಜಿನಯರ್ ಹುದ್ದೆಗಳು ಇರುವುದಿಲ್ಲ. |
| ಆ) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಸಂಬಂಧಿಸಿದ ಕಟ್ಟಡಗಳಲ್ಲಿ ಗ್ರಾಮ ಪಂಚಾಯತಿಗಳ ಕುಡಿಯುವ ನೀರು ಸರಬರಾಜು ಯೋಜನೆಗಳಿಗೆ ಸಂಬಂಧಿಸಿದ ಎಲೆಕ್ಟ್ರಿಕಲ್ ಕಾಮಗಾರಿಗಳಿಗೆ ಅಂದಾಜುಪಟ್ಟಿ ತಯಾರಿಸಿ ಕಾಮಗಾರಿಗಳ ಪರಿಶೀಲನೆ, ಅಳತೆ ಪುಸ್ತಕ ದಾಖಲಾತಿ ಇತ್ಯಾದಿ ಕೆಲಸಗಳನ್ನು ಪ್ರಸ್ತುತ ಯಾರಿಂದ ಮಾಡಿಸಲಾಗುತ್ತಿದೆ (ಮಾಹಿತಿ ನೀಡುವುದು); | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ನಿರ್ಮಿಸುವ ಕಟ್ಟಡಗಳಲ್ಲಿ ಎಲೆಕ್ಟ್ರಿಕಲ್ ಮತ್ತು ಕುಡಿಯುವ ನೀರು ಸರಬರಾಜಿಗೆ ಸಂಬಂಧಿಸಿದ ಅಂಶಗಳನ್ನು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸಿವಿಲ್ ಇಂಜಿನಿಯರುಗಳಿಂದಲೇ ನಿರ್ವಹಿಸಲಾಗುತ್ತಿದೆ.<br><br>ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಕುಡಿಯುವ ನೀರು ಸರಬರಾಜು ಯೋಜನೆ ಕಾಮಗಾರಿಗಳ ಎಲೆಕ್ಟ್ರಿಕಲ್ ಕಾಮಗಾರಿಗಳಿಗೆ ಅಂದಾಜು ಪಟ್ಟಿ ತಯಾರಿಸಿ ಕಾಮಗಾರಿಗಳ ಪರಿಶೀಲನೆ, ಅಳತೆ ಪುಸ್ತಕ ದಾಖಲಾತಿ ಇತ್ಯಾದಿ ಕೆಲಸಗಳನ್ನು ಪ್ರಸ್ತುತ ಇಲಾಖಾ ಇಂಜಿನಿಯರ್‌ಗಳ ಮುಖಾಂತರವೇ ಮಾಡಿಸಲಾಗುತ್ತಿದೆ. ಮೆಸ್ಕಾಂ ಸಂಬಂಧಿಸಿದಂತೆ ಕಾಮಗಾರಿಗಳನ್ನು ಮೆಸ್ಕಾಂ ಇಂಜಿನಿಯರ್‌ಗಳ ವತಿಯಿಂದಲೇ ನಿರ್ವಹಿಸಲಾಗುತ್ತಿದೆ. |

| ಇ) | ಇಲಾಖೆಯಲ್ಲಿನ ಎಲೆಕ್ಟ್ರಿಕಲ್ ಕಾಮಗಾರಿಗಳಿಗೆ ಪ್ರತ್ಯೇಕ ಇಂಜಿನಿಯರುಗಳು ಇಲ್ಲದೆ ಕಳಪೆ ಗುಣಮಟ್ಟದ ಕಾಮಗಾರಿಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು (ಮಾಹಿತಿ ನೀಡುವುದು)? | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಹಾಗೂ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಲ್ಲಿ ಎಲೆಕ್ಟ್ರಿಕಲ್ ಮತ್ತು ಕುಡಿಯುವ ನೀರು ಸರಬರಾಜು ಅಂಶಗಳನ್ನು ತೃಪ್ತಿಕರವಾಗಿ ನಿರ್ವಹಿಸಲಾಗುತ್ತಿದೆ. |
|---|---|---|

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1125

ವಿಧಾನ ಸಭಾ ಸದಸ್ಯರ ಹೆಸರು : ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳ್ಕರ್ (ಬೆಳಗಾಂ ಗ್ರಾಮಾಂತರ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 23/09/2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಅಂಗನವಾಡಿ ಕಾರ್ಯಕರ್ತೆಯರನ್ನು ಕಂದಾಯ ಇಲಾಖೆಯ ವಿವಿಧ ಸರ್ವೆಗಳಲ್ಲಿ ಮತ್ತು ವರ್ಷದಾದ್ಯಂತ ಚುನಾವಣೆ ಗುರುತಿನ ಚೀಟಿ ಮತದಾರರ ಪಟ್ಟಿಯಲ್ಲಿ ಹೆಸರು ಸೇರ್ಪಡೆ ಮತ್ತು ರದ್ದುಗೊಳಿಸಲು ಬಿ.ಎಲ್.ಓ ಕಾರ್ಯಕ್ಕೆ ಬಳಸಿಕೊಳ್ಳುವುದರಿಂದ ಶಾಲಾ ಪೂರ್ವ ಮಕ್ಕಳ ಶಿಕ್ಷಣ ಗುಣಮಟ್ಟ ಸಂಪೂರ್ಣವಾಗಿ ಕುಸಿಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ |
| ಆ. | ಹಾಗಿದ್ದಲ್ಲಿ ಅಂಗನವಾಡಿಯಲ್ಲಿ ಕಾರ್ಯಕರ್ತೆಯರನ್ನು ಅವೈಜ್ಞಾನಿಕವಾಗಿ ವರ್ಷಪೂರ್ತಿ ಬಿ.ಎಲ್.ಓ ಕಾರ್ಯಕ್ಕೆ ಬಳಸಿಕೊಳ್ಳದಂತೆ ಶಾಲಾಪೂರ್ವ ಶಿಕ್ಷಣ ಮಟ್ಟ ಸುಧಾರಿಸಲು ಈ ಬಿ.ಎಲ್.ಓ ಕೆಲಸದಿಂದ ಮುಕ್ತಿಗೊಳಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ. | ಆದಾಗ್ಯೂ ಶಾಲಾ ಪೂರ್ವ ಮಕ್ಕಳ ಶಿಕ್ಷಣದ ಹಿತದೃಷ್ಟಿಯಿಂದ ಅಂಗನವಾಡಿ ಕಾರ್ಯಕರ್ತೆಯರನ್ನು ಶಿಶು ಅಭಿವೃದ್ಧಿ ಯೋಜನೇತರ ಕೆಲಸಗಳಿಗೆ ನಿಯೋಜಿಸಬಾರದೆಂದು ಅನೇಕ ಬಾರಿ ಜಿಲ್ಲಾಧಿಕಾರಿಗಳಿಗೆ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ತಿಳಿಸಲಾಗಿದೆ. |
| ಇ. | ಅಂಗನವಾಡಿ ಕಾರ್ಯಕರ್ತೆಯರನ್ನು ಬಿ.ಎಲ್.ಓ ಕಾರ್ಯಕ್ಕೆ ಬಳಸಿಕೊಳ್ಳಬೇಕೆಂದು ಸರ್ಕಾರದ ಆದೇಶವಿದೆಯೇ; (ಆದೇಶ ಪ್ರತಿಯನ್ನು ಒದಗಿಸುವುದು). | ಈ ಬಗ್ಗೆ ಪ್ರತ್ಯೇಕ ಆದೇಶವಿರುವುದಿಲ್ಲ. |

| ಈ | ಬಿ.ಎಲ್.ಒ ಕಾರ್ಯದಿಂದ ಅಂಗನವಾಡಿ ಕಾರ್ಯಕರ್ತೆಯರನ್ನು ಬಿಡುಗಡೆಗೊಳಿಸಿ ಆಯಾ ಗ್ರಾಮಗಳಲ್ಲಿ ವಿದ್ಯಾವಂತ ನಿರುದ್ಯೋಗ ಯುವಕರನ್ನು ಗೌರವಧನದ ಆಧಾರದ ಮೇಲೆ ನೇಮಿಸಿಕೊಳ್ಳುವಂತೆ ಕಟ್ಟುನಿಟ್ಟಿನ ಆದೇಶವನ್ನು ಯಾವ ಕಾಲಮಿತಿಯೊಳಗೆ ಮಾಡಲಾಗುವುದು? | ಅನ್ವಯಿಸುವುದಿಲ್ಲ. |
|---|---|---|

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 177 ಐಸಿಡಿ 2020

# ಕರ್ನಾಟಕ ವಿಧಾನ ಸಭೆ

1. ಸದಸ್ಯರ ಹೆಸರು – ಶ್ರೀ ಸುಕುಮಾರ್‌ಶೆಟ್ಟಿ ಬಿ.ಎಂ.(ಬೈಂದೂರು)
2. ಪ್ರಶ್ನೆ ಸಂಖ್ಯೆ – 1239
3. ಉತ್ತರಿಸಬೇಕಾದ ದಿನಾಂಕ: – 23.09.2020.
4. ಉತ್ತರಿಸುವ ಸಚಿವರು – ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೈಂದೂರು ವಿಧಾನಸಭಾ ಕ್ಷೇತ್ರದ ಗ್ರಾಮೀಣ ಕುಡಿಯುವ ನೀರು ಹಾಗೂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಕಛೇರಿಗಳಲ್ಲಿ ಸಹಾಯಕ ಹಾಗೂ ಕಿರಿಯ ಇಂಜಿನಿಯರುಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು, ಬೈಂದೂರು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ ಹಾಗೂ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಉಪವಿಭಾಗಗಳಿಗೆ ಸಂಬಂಧಪಟ್ಟಂತೆ ಸಹಾಯಕ ಇಂಜಿನಿಯರ್ / ಕಿರಿಯ ಇಂಜಿನಿಯರುಗಳ ಹುದ್ದೆಗಳು ಮಂಜೂರಾಗಿದ್ದು, ಕಾರ್ಯನಿರತ ವಿವರಗಳು ಈ ಕೆಳಕಂಡಂತಿರುತ್ತವೆ. (ಕೆಳಗಿನ ಕೋಷ್ಟಕಗಳನ್ನು ನೋಡಿ) |

ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬೈಂದೂರು:-

| ಹುದ್ದೆ | ಮಂಜೂರಾದ ಹುದ್ದೆಗಳ ಸಂಖ್ಯೆ | ಕಾರ್ಯನಿರ್ವಹಿಸುತ್ತಿರುವವರ ಸಂಖ್ಯೆ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|---|
| ಸಹಾಯಕ ಇಂಜಿನಿಯರ್ | 1 | 1 | – |
| ಕಿರಿಯ ಇಂಜಿನಿಯರ್ | 3 | 2 | 1 |

ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಉಪವಿಭಾಗ, ಬೈಂದೂರು:-

| ಹುದ್ದೆ | ಮಂಜೂರಾದ ಹುದ್ದೆಗಳ ಸಂಖ್ಯೆ | ಕಾರ್ಯನಿರ್ವಹಿಸುತ್ತಿರುವವರ ಸಂಖ್ಯೆ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|---|
| ಸಹಾಯಕ ಇಂಜಿನಿಯರ್ | 1 | 1 | – |
| ಕಿರಿಯ ಇಂಜಿನಿಯರ್ | 3 | – | 3 |

| | | |
|---|---|---|
| ಆ) | ಹಾಗಿದ್ದಲ್ಲಿ, ಕಾಮಗಾರಿಗಳನ್ನು ಸಮಯಕ್ಕೆ ಸರಿಯಾಗಿ ಅನುಷ್ಠಾನ ಮಾಡಲು ಇಂಜಿನಿಯರುಗಳ ಕೊರತೆ ಇರುವುದರಿಂದ ಆಡಳಿತದ ಮೇಲೆ ಹಾಗೂ ಕಾಮಗಾರಿಗಳ ಗುಣಮಟ್ಟದಲ್ಲಿ ದುಷ್ಪರಿಣಾಮವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಲಭ್ಯವಿರುವ ಇಂಜಿನಿಯರುಗಳ ಸೇವೆಯನ್ನು ಬಳಸಿಕೊಂಡು ಗುಣಮಟ್ಟದಲ್ಲಿ ಕಾಮಗಾರಿಗಳನ್ನು ಅನುಷ್ಠಾನಗೊಳಸಲಾಗುತ್ತಿದೆ.<br><br>ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಉಪವಿಭಾಗ, ಬೈಂದೂರು ಕಛೇರಿಯಲ್ಲಿ ಖಾಲಿ ಇರುವ 3 ಕಿರಿಯ ಇಂಜಿನಿಯರ್ ಹುದ್ದೆಗಳ ಪೈಕಿ, ಕಾರ್ಕಳ ಗ್ರಾ.ಕು.ನೀ.&ನೈ. ಉ.ವಿಭಾಗ ಹಾಗೂ ಬೈಂದೂರು ಪಂ.ರಾ.ಇಂ. ಉ.ವಿಭಾಗ ಕಛೇರಿಗಳಿಂದ ಇಬ್ಬರು ಸಹಾಯಕ ಇಂಜಿನಿಯರ್‌ಗಳು ಹಾಗೂ ಒಬ್ಬರು ಕಿರಿಯ ಇಂಜಿನಿಯರ್‌ಗಳು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವುದರಿಂದ ಕಾಮಗಾರಿಗಳ ಗುಣಮಟ್ಟದಲ್ಲಿ ದುಷ್ಪರಿಣಾಮವಾಗಿರುವುದಿಲ್ಲ. |
| ಇ) | ಬಂದಿದ್ದಲ್ಲಿ, ಈ ಬಗ್ಗೆ ತೆಗೆದುಕೊಂಡ ಕ್ರಮಗಳೇನು? | ಇಲಾಖೆಯಲ್ಲಿ ಖಾಲಿಯಿರುವ ಕಿರಿಯ ಇಂಜಿನಿಯರ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಸ್ತಾವನೆ ಶಾಖೆಯಲ್ಲಿ ಚಾಲ್ತಿಯಲ್ಲಿಯಲ್ಲಿತ್ತು. ಆದರೆ ರಾಜ್ಯದಲ್ಲಿ ಕೋವಿಡ್-19 ನಿಂದ ಉಂಟಾದ ಪರಿಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುವುದರಿಂದ ಆರ್ಥಿಕ ಇಲಾಖೆಯ ಸೂಚನೆಯ ಮೇರೆಗೆ ನೇರನೇಮಕಾತಿ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ. ಆರ್ಥಿಕ ಪರಿಸ್ಥಿತಿ ಸುಧಾರಿಸಿದ ನಂತರ ಮುಂದುವರೆಸಲಾಗುವುದು. |

**(ಕೆ.ಎಸ್.ಈಶ್ವರಪ್ಪ)**
**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು**

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1726 |
| ಸದಸ್ಯರ ಹೆಸರು | : | ಶ್ರೀ ಬಸನಗೌಡ ಆರ್.ಪಾಟೀಲ್ (ಯತ್ನಾಳ್) (ವಿಜಯಪುರ ನಗರ) |
| ಉತ್ತರಿಸಬೇಕಾದ ದಿನಾಂಕ | : | 23-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯದಲ್ಲಿರುವ ಒಟ್ಟು ಮಸೀದಿಗಳ ಸಂಖ್ಯೆ ಎಷ್ಟು (ಜಿಲ್ಲಾವಾರು ವಿವರ ನೀಡುವುದು). | ರಾಜ್ಯದಲ್ಲಿರುವ ಒಟ್ಟು ಮಸೀದಿಗಳ ಸಂಖ್ಯೆ 15,856, ಜಿಲ್ಲಾವಾರು ವಿವರ "ಅನುಬಂಧ-1"ರಲ್ಲಿ ನೀಡಲಾಗಿದೆ. |
| ಆ. | ಈ ಪೈಕಿ ಸರ್ಕಾರದಿಂದ ಅನುಮತಿ ಪಡೆದಿರುವ ಮತ್ತು ಅನುಮತಿ ಪಡೆಯದಿರುವ ಮಸೀದಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು.) | ಜಿಲ್ಲಾವಾರು ಇರುವ ಮಸೀದಿಗಳು ವಕ್ಫ್‌ಕಾಯ್ದೆಯಂತೆ ಅಧಿಸೂಚಿತ ಹಾಗೂ ನೋಂದಾಯಿತ ವಕ್ಫ್ ಆಸ್ತಿಗಳಾಗಿರುತ್ತವೆ. |
| ಇ | ಪ್ರತಿ ವರ್ಷ ಈ ಮಸೀದಿಗಳಲ್ಲಿ ಭಕ್ತಾದಿಗಳಿಂದ ಸಂಗ್ರಹವಾಗುತ್ತಿರುವ ಹಣ ಎಷ್ಟು; ಸದರಿ ಹಣವನ್ನು ಯಾವ ಉದ್ದೇಶಗಳಿಗೆ ಬಳಸಿಕೊಳ್ಳಲಾಗುತ್ತಿದೆ; | ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಸೇರಿದ ಮಸೀದಿಗಳಲ್ಲಿ ಭಕ್ತಾದಿಗಳಿಂದ ಪ್ರತಿ ವರ್ಷ ಅಂದಾಜು ರೂ.9.00 ಕೋಟಿ ಹಣವನ್ನು ಸಂಗ್ರಹಿಸಲಾಗುತ್ತಿದೆ. ಸದರಿ ಹಣವನ್ನು ಮಸೀದಿ ಮತ್ತು ಮದರಸದ ಸಿಬ್ಬಂದಿಗಳ ವೇತನ, ನಿರ್ವಹಣೆ, ಅಭಿವೃದ್ಧಿ, ನಿರ್ಮಾಣ ಹಾಗೂ ದುರಸ್ಥಿ ಮತ್ತು ಜೀರ್ಣೋದ್ಧಾರದ ಉದ್ದೇಶಗಳಿಗೆ ಬಳಸಿಕೊಳ್ಳಲಾಗುತ್ತಿದೆ. |
| ಈ | ದೇವಸ್ಥಾನಗಳಲ್ಲಿ ಸಂಗ್ರಹವಾಗುವ ಹಣವನ್ನು ಸರ್ಕಾರ ವಿವಿಧ ಉದ್ದೇಶಗಳಿಗೆ ಬಳಸಿಕೊಳ್ಳುವ ರೀತಿ ಮಸೀದಿಗಳಿಂದ ಸಂಗ್ರಹವಾಗುವ ಹಣವನ್ನು ಬಳಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದೇ? | ದೇವಸ್ಥಾನಗಳಲ್ಲಿ ಸಂಗ್ರಹವಾಗುವ ಹಣವನ್ನು ಮುಜರಾಯಿ ಇಲಾಖೆಯ ಮೂಲಕ ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿ ಚಟುವಟಿಕೆಗಳಿಗೆ ಬಳಸುತ್ತಿದ್ದು, ಇದೇ ರೀತಿ ಮಸೀದಿಗಳಲ್ಲಿ ಸಂಗ್ರಹವಾಗುವ ಹಣವನ್ನು ಮಸೀದಿಗಳ ನಿರ್ವಹಣೆಗಾಗಿ ಬಳಸಲಾಗುತ್ತಿದೆ. |

ಸಂಖ್ಯೆ: **MWD 93 LMQ 2020**

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು
ವಕ್ಫ್ ಸಚಿವರು

Qn. 1726

ಅನುಬಂಧ-1

Total No.s of Mosque in Karnataka

| SL No. | Districts | No. of Mosque |
|---|---|---|
| 1 | Bagalkote | 560 |
| 2 | Bangalore | 758 |
| 3 | Bangalore Rural | 219 |
| 4 | Belgaum | 921 |
| 5 | Bellary | 992 |
| 6 | Bidar | 397 |
| 7 | Bijapur | 1010 |
| 8 | Chamaraj Nagar | 224 |
| 9 | Chikkaballapur | 145 |
| 10 | Chitradurga | 160 |
| 11 | Dakshina Kannada | 1412 |
| 12 | Davangere | 321 |
| 13 | Dharwad | 1147 |
| 14 | Gadag | 572 |
| 15 | Gulbarga | 1076 |
| 16 | Hassan | 271 |
| 17 | Haveri | 1346 |
| 18 | Kodagu | 165 |
| 19 | Kolar | 372 |
| 20 | Koppal | 284 |
| 21 | Mandya | 133 |
| 22 | Mysore | 418 |
| 23 | Raichur | 623 |
| 24 | Ramnagaram | 253 |
| 25 | Shimogga | 324 |
| 26 | Tumkur | 450 |
| 27 | Udupi | 216 |
| 28 | Uttara Kannda | 746 |
| 29 | Yadgir | 341 |
| 30 | **Total** | **15856** |



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 31

ಸದಸ್ಯರ ಹೆಸರು : ಶ್ರೀ ಉಮೇಶ್ ವಿಶ್ವನಾಥ್ ಕತ್ತಿ (ಹುಕ್ಕೇರಿ)

ಉತ್ತರಿಸಬೇಕಾದ ದಿನಾಂಕ : 23-09-2020

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಬೆಳಗಾವಿ ಜಿಲ್ಲೆ ಹುಕ್ಕೇರಿ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹುಕ್ಕೇರಿ ಪಟ್ಟಣದಲ್ಲಿ ಮೌಲಾನ ಆಜಾದ್ ಆಂಗ್ಲ (ಇಂಗ್ಲೀಷ್) ಮಾಧ್ಯಮ ಪ್ರೌಢಶಾಲೆ ಮಂಜೂರು ಮಾಡಲಾಗಿದೆಯೇ; (ಮಾಡಿದ್ದಲ್ಲಿ ಮಂಜೂರಾತಿ ಆದೇಶದ ಪ್ರತಿ ಒದಗಿಸುವುದು.) | ಮಂಜೂರು ಮಾಡಲಾಗಿದೆ, ಆದೇಶದ ಪ್ರತಿ ಲಗತ್ತಿಸಿದೆ. |
| ಆ. | ಮಂಜೂರು ಮಾಡಲಾಗಿರುವ ಶಾಲೆಯನ್ನು ಬೇರೆ ಕಡೆಗೆ ಸ್ಥಳಾಂತರಿಸಲಾಗಿದೆಯೇ ಅಥವಾ ಮಂಜೂರಾತಿ ರದ್ದು ಮಾಡಲಾಗಿದೆಯೇ; ಈ ಸ್ಥಳಾಂತರ ಅಥವಾ ರದ್ದತಿಗೆ ಕಾರಣಗಳೇನು; | ಮಂಜೂರಾದ ಶಾಲೆಯನ್ನು ಸ್ಥಳಾಂತರಿಸುವ ಅಥವಾ ರದ್ದು ಮಾಡುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ | ಸದರಿ ಶಾಲೆಯನ್ನು ಮರು ಮಂಜೂರಾತಿ ಮಾಡಲು ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; ಇದ್ದಲ್ಲಿ ಯಾವಾಗ ಮಂಜೂರು ಮಾಡಲು ಉದ್ದೇಶಿಸಲಾಗಿದೆ? | ಅನ್ವಯಿಸುವುದಿಲ್ಲ. |

ಸಂಖ್ಯೆ: **MWD 105 LMQ 2020**

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 413 |
| ಸದಸ್ಯರ ಹೆಸರು | ಶ್ರೀ ಸತೀಶ್ ಎಲ್. ಜಾರಕಿಹೊಳಿ (ಯಮಕನಮರಡಿ) |
| ಉತ್ತರಿಸಬೇಕಾದ ದಿನಾಂಕ | 23.09.2020. |
| ಉತ್ತರಿಸುವ ಸಚಿವರು | ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಗಡಿ ಅಭಿವೃದ್ಧಿ ಪ್ರಾಧಿಕಾರದಿಂದ ಬೆಳಗಾವಿ ಜಿಲ್ಲೆಗೆ ಬಿಡುಗಡೆಯಾದ ಅನುದಾನವೆಷ್ಟು (ತಾಲ್ಲೂಕುವಾರು ವಿವರ ನೀಡುವುದು)? | ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಕಳೆದ ಮೂರು ವರ್ಷಗಳಲ್ಲಿ ಬೆಳಗಾವಿ ಜಿಲ್ಲೆಗೆ ಬಿಡುಗಡೆ ಮಾಡಲಾದ ತಾಲ್ಲೂಕುವಾರು ಅನುದಾನದ ವಿವರವನ್ನು ಅನುಬಂಧ-1, 2 ಮತ್ತು 3ರಲ್ಲಿ ಇರಿಸಿದೆ. |

ಸಂಖ್ಯೆ: ಕಸಂವಾ 124 ಕೆಬಿಎಲ್ ಆಕ 2020.

(ಸಿ.ಟಿ. ರವಿ)
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು
ಸಂಸ್ಕೃತಿ ಹಾಗೂ ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 433 |
| ಸದಸ್ಯರ ಹೆಸರು | ಶ್ರೀ ಪುಟ್ಟರಂಗಶೆಟ್ಟಿ, ಸಿ (ಚಾಮರಾಜನಗರ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | 2018–19ನೇ ಹಾಗೂ 2019–20ನೇ ಸಾಲಿನಲ್ಲಿ 3054 ಮತ್ತು 5054 ಲೆಕ್ಕ ಶೀರ್ಷಿಕೆ ಯೋಜನೆಯ ಅಡಿಯಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆಗೊಳಿಸಲಾದ ಅನುದಾನದ ಮೊತ್ತವೆಷ್ಟು; | 2018–19ನೇ ಹಾಗೂ 2019–20ನೇ ಸಾಲಿನಲ್ಲಿ ಲೆ.ಶೀ. 3054 ಮತ್ತು 5054 ರಡಿಯಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆಗೊಳಿಸಲಾದ ಅನುದಾನದ ವಿವರಗಳು ಕೆಳಕಂಡಂತಿವೆ: (ರೂ. ಕೋಟಿಗಳಲ್ಲಿ) (see table below) |
| ಆ. | ಹಾಗಿದ್ದಲ್ಲಿ, ಯಾವ ವಿಧಾನಸಭಾ ಕ್ಷೇತ್ರಗಳಿಗೆ ಎಷ್ಟು ಮೊತ್ತದ ಕಾಮಗಾರಿಗಳಿಗೆ ಅನುದಾನ ಮಂಜೂರು ಮಾಡಲಾಗಿದೆ; ಮಂಜೂರಾದ ಮೊತ್ತವನ್ನು ಬಿಡುಗಡೆ ಮಾಡಲಾಗಿದೆಯೇ; | 2018–19 ಮತ್ತು 2019–20ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3054 ಮತ್ತು 5054 ರಡಿ ಮಂಜೂರು ಮಾಡಿ ಬಿಡುಗಡೆ ಮಾಡಿದ ಅನುದಾನದ ವಿವರಗಳನ್ನು ಅನುಬಂಧ–1 ರಲ್ಲಿ ಲಗತ್ತಿಸಿದೆ. |
| ಇ. | ಹಾಗಿದ್ದಲ್ಲಿ, ಯಾವ ವಿಧಾನಸಭಾ ಕ್ಷೇತ್ರಗಳಿಗೆ ಎಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | |
| ಈ. | ಪ್ರಸ್ತುತ ಸಾಲಿನಲ್ಲಿ ಪ್ರತಿಯೊಂದು ವಿಧಾನಸಭಾ ಕ್ಷೇತ್ರಗಳಿಗೆ ಬಿಡುಗಡೆ ಮಾಡಲಾಗಿರುವ/ಮಾಡಬೇಕಿರುವ ಹಣ ಎಷ್ಟು? (ಪ್ರತ್ಯೇಕವಾಗಿ ವಿವರ ನೀಡುವುದು) | ಪ್ರಸ್ತುತ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3054 ರಡಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು ಅನುಬಂಧ–2 ರಲ್ಲಿ ಲಗತ್ತಿಸಿದೆ. |

(ರೂ. ಕೋಟಿಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವರ್ಷ | ಬಿಡುಗಡೆಗೊಳಿಸಲಾದ ಅನುದಾನ |
|---|---|---|---|
| 01 | 3054–80–196–1–03 | 2018–19 | 255.17 |
| | | 2019–20 | 269.03 |
| 02 | 3054–80–196–1–01 | 2018–19 | 206.46 |
| 03 | | 2019–20 | 217.73 |
| 04 | 5054–03–337–0–75 | 2018–19 | 1502.52 |
| 04 | | 2019–20 | 2252.40 |
| ಒಟ್ಟು | | | **3200.79** |

ಕಡತ ಸಂಖ್ಯೆ: ಗ್ರಾಅಪ:ಅಧಿ07/07:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 443

ಮಾನ್ಯ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)

ವಿಷಯ : 'ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಅನುದಾನ ಬಿಡುಗಡೆ'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

ಉತ್ತರಿಸುವ ದಿನಾಂಕ: : 23-09-2020.

****

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಪ್ರವಾಸಿಗರಿಗೆ ಮೂಲಭೂತ ಸೌಲಭ್ಯ ಇಲ್ಲದೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸದರಿ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಕಳೆದ ಮೂರು ವರ್ಷಗಳಿಂದ ಯಾವ ಯೋಜನೆಗೆ ಎಷ್ಟೆಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ (ಪೂರ್ಣ ವಿವರ ನೀಡುವುದು). | ಬಂದಿದೆ.<br><br>ಕೊಡಗು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಕಳೆದ ಮೂರು ವರ್ಷಗಳಿಂದ ಬಿಡುಗಡೆ ಮಾಡಲಾದ ಅನುದಾನಗಳ ವಿವರವನ್ನು ಅನುಬಂಧ-1ರಲ್ಲಿ ವಿವರಿಸಲಾಗಿದೆ. |
| ಆ) | ಕೊಡಗು ಜಿಲ್ಲೆಯಲ್ಲಿ ಕೊರೊನಾ ಸಂದರ್ಭದಲ್ಲಿ ಕಾನೂನು ಉಲ್ಲಂಘಿಸಿ ಪ್ರವಾಸಿಗರಿಗೆ ಅನಧಿಕೃತವಾಗಿ ವಾಸ್ತವ್ಯ ಹೂಡಲು ಅವಕಾಶ ನೀಡಿದ ಹೋಂಸ್ಟೇ ಮತ್ತು ರೆಸಾರ್ಟ್‌ಗಳು ಯಾವುವು; ಅವರ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ (ಪೂರ್ಣ ವಿವರ ನೀಡುವುದು). | ಅನುಬಂಧ-2ರಲ್ಲಿ ವಿವರಿಸಲಾಗಿದೆ. |
| ಇ) | ಸದರಿ ಜಿಲ್ಲೆಯಲ್ಲಿ ಯಾವ ಪ್ರದೇಶವನ್ನು ಪ್ರವಾಸಿ ತಾಣವಾಗಿ ಇಲಾಖೆಯಿಂದ ಗುರುತಿಸಲಾಗಿದೆ; ಯಾವ ಮಾನದಂಡ ಆಧಾರದಡಿಯಲ್ಲಿ ಗುರುತಿಸಲಾಗಿದೆ; ಇದಕ್ಕಾಗಿ ಸರ್ಕಾರದ ಕಳೆದ ಮೂರು ವರ್ಷಗಳಿಂದ ಎಷ್ಟು ಅನುದಾನ ಖರ್ಚು ಮಾಡಿದೆ (ಪೂರ್ಣ ವಿವರ ನೀಡುವುದು). | ಕೊಡಗು ಜಿಲ್ಲೆಯಲ್ಲಿ 2015-20ರ ಪ್ರವಾಸೋದ್ಯಮ ನೀತಿ ಅಡಿಯಲ್ಲಿ ಒಟ್ಟು 15 ಪ್ರವಾಸಿ ತಾಣಗಳನ್ನು ಗುರುತಿಸಲಾಗಿದೆ. ಅವುಗಳ ವಿವರ ಕೆಳಗಿನಂತಿದೆ.<br><br>ಮಡಿಕೇರಿ: ಮಡಿಕೇರಿ, ಅಬ್ಬಿಜಲಪಾತ, ತಲಕಾವೇರಿ, ನಾಲ್ಕುನಾಡು ಅರಮನೆ, ಭಾಗಮಂಡಲ, ಓಂಕರೇಶ್ವರ ದೇವಸ್ಥಾನ, ಕಕ್ಕಬ್ಬೆ ಶ್ರೀ ಇಗ್ಗುತಪ್ಪ<br>ಸೋಮವಾರಪೇಟೆ: ಕಾವೇರಿ ನಿಸರ್ಗಧಾಮ, ಹಾರಂಗಿ ಅಣೆಕಟ್ಟು, ಕೂಡಿಗೆ, ಚಟ್ಟಹಳ್ಳಿ ಕೃಷಿಕ್ಷೇತ್ರ, ನಿಸರ್ಗಧಾಮ<br>ವಿರಾಜಪೇಟೆ: ನಾಗರಹೊಳೆ ರಾಷ್ಟ್ರೀಯ ಉದ್ಯಾನವನ, ಇರ್ಪು ಜಲಪಾತ, ಕುಂದದ ಬೆಟ್ಟ<br><br>ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು ಅನುಬಂಧ-3ರಲ್ಲಿ ಒದಗಿಸಿದೆ. |

ಸಂಖ್ಯೆ: ಟಿಓಆರ್ 173 ಟಿಡಿವಿ 2020

(ಸಿ.ಟಿ.ರವಿ)

ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 471
ಮಾನ್ಯ ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ)
ವಿಷಯ : ಯಾತ್ರಿನಿವಾಸ ನಿರ್ಮಾಣಕ್ಕೆ ಅನುದಾನ
ಉತ್ತರಿಸುವ ದಿನಾಂಕ : 23/09/2020
ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 01/01/2018 ರಿಂದ 31/08/2020 ರ ಅವಧಿಯಲ್ಲಿ ರಾಜ್ಯದಲ್ಲಿ ಕೈಗೊಂಡಿರುವ ಅಭಿವೃದ್ಧಿ ಕಾಮಗಾರಿಗಳು ಯಾವುವು; (ಮತಕ್ಷೇತ್ರವಾರು ಕಾಮಗಾರಿಗಳ ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆಯಲ್ಲಿ ಪ್ರವಾಸಿ ಸ್ಥಳಗಳ ಪ್ರಾಮುಖ್ಯತೆ ಮತ್ತು ಪ್ರವಾಸಿಗರು ಭೇಟಿ ನೀಡುವ ಅಂಕಿ ಅಂಶಗಳ ಆಧಾರದಲ್ಲಿ ಆದ್ಯತೆ ಮೇರೆಗೆ ಕಾಮಗಾರಿಗಳನ್ನು ಮಂಜೂರು ಮಾಡಲಾಗುವುದೆ ಹೊರತು ಮತಕ್ಷೇತ್ರವಾರು ಕಾಮಗಾರಿಗಳನ್ನು ಮಂಜೂರು ಮಾಡುವುದಿಲ್ಲ.<br><br>2018–19 ರಿಂದ ಈವರೆಗೆ ರಾಜ್ಯದ ವಿವಿಧ ಪ್ರವಾಸಿ ತಾಣ ಹಾಗೂ ಧಾರ್ಮಿಕ ಕ್ಷೇತ್ರಗಳ ಬಳಿ ಕೈಗೊಂಡಿರುವ ಅಭಿವೃದ್ಧಿ ಕಾಮಗಾರಿಗಳ ಜಿಲ್ಲಾವಾರು ವಿವರವನ್ನು ಅನುಬಂಧ–1 ರಲ್ಲಿ ಒದಗಿಸಿದೆ. |
| ಆ) | ಸದರಿ ಅವಧಿಯಲ್ಲಿ ಮಂಜೂರು ಮಾಡಿದ ಯಾತ್ರಿ ನಿವಾಸಗಳು ಎಷ್ಟು; ಅವು ಯಾವುವು; ಮಂಜೂರು ಮಾಡಿದ ಅನುದಾನವೆಷ್ಟು; (ಮತಕ್ಷೇತ್ರವಾರು ವಿವರ ನೀಡುವುದು) | ಸದರಿ ಅವಧಿಯಲ್ಲಿ 122 ಯಾತ್ರಿ ನಿವಾಸಗಳನ್ನು ಮಂಜೂರು ಮಾಡಿದ್ದು, ಅನುದಾನದ ಜಿಲ್ಲಾವಾರು ವಿವರವನ್ನು ಅನುಬಂಧ–2 ರಲ್ಲಿ ಒದಗಿಸಿದೆ. |
| ಇ) | ಬೆಳಗಾವಿ ದಕ್ಷಿಣ ಮತಕ್ಷೇತ್ರಕ್ಕೆ ಹಲವಾರು ಬಾರಿ ಯಾತ್ರಿ ನಿವಾಸಗಳ ನಿರ್ಮಾಣಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಿದ್ದಾಗ್ಯೂ ಯಾತ್ರಿ ನಿವಾಸವನ್ನು ಕ್ಷೇತ್ರಕ್ಕೆ ಮಂಜೂರು ಮಾಡದೇ ಇರಲು ಕಾರಣವೇನು; ಇದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗ ಮಂಜೂರು ಮಾಡಲಾಗುವುದು; | ಪ್ರವಾಸಿ ತಾಣಗಳ ಸಮಗ್ರ ಅಭಿವೃದ್ಧಿಗೆ ಆದ್ಯತೆ ನೀಡಿ, ವಾರ್ಷಿಕವಾಗಿ ಲಭ್ಯವಾಗುವ ಅನುದಾನದ ಆಧಾರದಲ್ಲಿ ಕಾಮಗಾರಿ ಮಂಜೂರು ಮಾಡಲಾಗುತ್ತಿದೆ. |
| ಈ) | ಬೆಳಗಾವಿ ದಕ್ಷಿಣ ಮತಕ್ಷೇತ್ರಕ್ಕೆ ಯಾತ್ರಿ ನಿವಾಸ ಮಂಜೂರು ಮಾಡಲು ಸರ್ಕಾರದಲ್ಲಿ ಅನುದಾನದ ಕೊರತೆ ಇದೆಯೇ; ಇದ್ದಲ್ಲಿ ತಿಳಿಸುವುದು; (ವಿವರ ಒದಗಿಸುವುದು) | ಪ್ರಸಕ್ತ ಸಾಲಿನಲ್ಲಿ ಇಲಾಖೆಗೆ ಹೊಸ ಯೋಜನೆಗಳಿಗೆ ಒದಗಿಸುವ ಅನುದಾನದ ಲಭ್ಯತೆಯನುಸಾರ ಪರಿಶೀಲಿಸಲಾಗುವುದು. |
| ಉ) | ಸದರಿ ಅವಧಿಯಲ್ಲಿ ರಾಜ್ಯದಲ್ಲಿ ಮಂಜೂರಾದ ಗರಡಿಮನೆಗಳು ಎಷ್ಟು; ಮತ್ತು ಸಂಸ್ಥೆಗಳಿಗೆ ವ್ಯಾಯಾಮ ಸಲಕರಣೆಗಳನ್ನು ಪೂರೈಸಲಾಗಿದೆ? (ವಿವರಗಳನ್ನು ಮತಕ್ಷೇತ್ರವಾರು ನೀಡುವುದು) | ಸದರಿ ಅವಧಿಯಲ್ಲಿ ರಾಜ್ಯದಲ್ಲಿ 32 ಗರಡಿ ಮನೆಗಳಿಗೆ ಅನುದಾನ ಮಂಜೂರು ಮಾಡಲಾಗಿದೆ ಮತ್ತು ಗರಡಿ ಮನೆಗಳಿಗೆ ವ್ಯಾಯಾಮ ಸಲಕರಣೆಗಳನ್ನು ಪೂರೈಸಲು ಇಲಾಖೆಯಲ್ಲಿ ಯೋಜನೆಗಳು ಇರುವುದಿಲ್ಲ.<br><br>ಮಂಜೂರಾದ ಗರಡಿ ಮನೆಗಳ ವಿವರಗಳನ್ನು ಅನುಬಂಧ–3ರಲ್ಲಿ ಒದಗಿಸಿದೆ. |

ಸಂಖ್ಯೆ: ಟಿಓಆರ್ 171 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 815

ಮಾನ್ಯ ಸದಸ್ಯರ ಹೆಸರು : ಶ್ರೀ. ಖಾದರ್ ಯು.ಟಿ. (ಮಂಗಳೂರು)

ವಿಷಯ : 'ಪ್ರವಾಸೋದ್ಯಮ ಅಭಿವೃದ್ಧಿ ಪಡಿಸುವುದು'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ : 23.09.2020

*****

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಕೈಗೊಂಡ ಕ್ರಮಗಳೇನು; (ವಿವರ ಒದಗಿಸುವುದು) | ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಹಾಗೂ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಸಲುವಾಗಿ ರೂ.6536.90 ಲಕ್ಷಗಳ ವೆಚ್ಚದಲ್ಲಿ ಒಟ್ಟು 73 ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ಈವರೆವಿಗೂ ರೂ.2866.04 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ವಿವರಿಸಿದೆ. |
| ಆ) | ಉಳ್ಳಾಲ ಮತ್ತು ಸೋಮೇಶ್ವರ ಬೀಚ್‌ಗಳ ಅಭಿವೃದ್ಧಿಗಾಗಿ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ? (ವಿವರ ಒದಗಿಸುವುದು) | ಪ್ರಸಕ್ತ ಸಾಲಿನಲ್ಲಿ ಬಂಡವಾಳ ಲೆಕ್ಕ ಶೀರ್ಷಿಕೆ ಯೋಜನೆಯಡಿ ರೂ.20.00 ಕೋಟಿಗಳ ಅನುದಾನ ಮಾತ್ರ ಒದಗಿಸಿದ್ದು, ಮುಂದುವರೆದ ಕಾಮಗಾರಿಗಳಿಗೆ ಈ ಅನುದಾನವನ್ನು ವಿನಿಯೋಗಿಸಬೇಕಾಗಿದ್ದು, ಅನುದಾನದ ಲಭ್ಯತೆಗನುಗುಣವಾಗಿ ನೂತನ ಪ್ರಸ್ತಾವನೆಗಳನ್ನು ಪರಿಶೀಲಿಸಲಾಗುವುದು. |

ಸಂಖ್ಯೆ: ಟಿಓಆರ್ 179 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

always with C.D

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 819

ಸದಸ್ಯರ ಹೆಸರು : ಶ್ರೀ ಅಖಂಡ ಶ್ರೀನಿವಾಸಮೂರ್ತಿ ಆರ್.(ಪುಲಿಕೇಶಿ ನಗರ)

ಉತ್ತರಿಸಬೇಕಾದ ದಿನಾಂಕ : 23-09-2020.

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | 2017 ರಿಂದ ಇಲ್ಲಿಯವರೆಗೆ ವಿವಿಧ ಯೋಜನೆಗಳಿಗೆ ಬಿಡುಗಡೆ ಮಾಡಿದ ಅನುದಾನವೆಷ್ಟು; ಈ ಅನುದಾನದಲ್ಲಿ ವ್ಯಯಿಸಿದ ಹಾಗೂ ವ್ಯವಹಾರವಾಗದೆ ಉಳಿದಿರುವ ಅನುದಾನವೆಷ್ಟು; | (ಕೆಳಗಿನ ಕೋಷ್ಟಕ ನೋಡಿ) |
| 2 | ಕಳೆದ ವರ್ಷಗಳಲ್ಲಿ ಇಲಾಖೆಯಿಂದ ಎಷ್ಟು ರಂಗಮಂದಿರ ಮತ್ತು ಸಾಂಸ್ಕೃತಿಕ ಭವನಗಳನ್ನು ನಿರ್ಮಾಣ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಕಳೆದ ವರ್ಷಗಳಲ್ಲಿ ಇಲಾಖೆಯಿಂದ ಒಟ್ಟು 329 ರಂಗಮಂದಿರ / ಸಾಂಸ್ಕೃತಿಕ ಭವನಗಳನ್ನು ನಿರ್ಮಾಣ ಮಾಡಲಾಗಿದೆ. ವಿವರಗಳನ್ನು ಅನುಬಂಧ – 1 ರಲ್ಲಿ ನೀಡಿದೆ. |
| 3 | ಪ್ರಸಕ್ತ ಸಾಲಿನಲ್ಲಿ ರಂಗಮಂದಿರ ಹಾಗೂ ಸಾಂಸ್ಕೃತಿಕ ಭವನಗಳನ್ನು ನಿರ್ಮಾಣ ಮಾಡಲು ಇರುವ ಪ್ರಸ್ತಾವನೆಗಳ ವಿವರಗಳನ್ನು ನೀಡುವುದು? | ಪ್ರಸಕ್ತ ಸಾಲಿನಲ್ಲಿ ರಂಗಮಂದಿರ ಹಾಗೂ ಸಾಂಸ್ಕೃತಿಕ ಭವನಗಳನ್ನು ನಿರ್ಮಾಣ ಮಾಡಲು ಇರುವ ಪ್ರಸ್ತಾವನೆಗಳ ವಿವರಗಳನ್ನು ಅನುಬಂಧ – 2 ರಲ್ಲಿ ನೀಡಿದೆ. |

ಉತ್ತರ 1:

| ಕ್ರ.ಸಂ. | ವರ್ಷ / ಸಾಲು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) | ವೆಚ್ಚ (ರೂ. ಲಕ್ಷಗಳಲ್ಲಿ) | ಉಳಿಕೆ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | 2017-18 | 32314.00 | 31676.00 | 638.00 |
| 2 | 2018-19 | 19636.00 | 17321.00 | 2315.00 |
| 3 | 2019-20 | 26278.00 | 19704.00 | 6574.00 |
| 4 | 2020-21 | 6106.00 | 2534.00 | 3572.00 |
| ಒಟ್ಟು | | 84334 | 71235 | 13099 |

ಕಸಂವಾ 69 ಕವಿಸ 2020

(ಸಿ.ಟಿ.ರವಿ)

ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

along with C.D

**ಕರ್ನಾಟಕ ವಿಧಾನ ಸಭೆ**

**15ನೇ ವಿಧಾನ ಸಭೆ – 7ನೇ ಅಧಿವೇಶನ**

| | | |
|---|---|---|
| **ಕರ್ನಾಟಕ ವಿಧಾನ ಸಭೆ ಸದಸ್ಯರ ಹೆಸರು** | : | **ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ)** |
| **ಚುಕ್ಕೆ ಗುರುತಿಲ್ಲದ ಪ್ರಶ್ನೆ** | : | **824** |
| **ಉತ್ತರಿಸಬೇಕಾದ ದಿನಾಂಕ** | : | **23.09.2020** |
| **ಉತ್ತರಿಸುವ ಸಚಿವರು** | : | **ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಸಚಿವರು.** |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ 2019-20ನೇ ಸಾಲಿನಲ್ಲಿ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ಸರ್ಕಾರದಿಂದ ಬಿಡುಗಡೆಯಾದ ಅನುದಾನದ ಮೊತ್ತವೆಷ್ಟು? (ಲೆಕ್ಕ ಶೀರ್ಷಿಕೆವಾರು ಅನುದಾನದ ವಿವರ ನೀಡುವುದು) | 2019-20ನೇ ಸಾಲಿನ ವಿವಿಧ ಲೆಕ್ಕ ಶೀರ್ಷಿಕೆಯಡಿ ಚಿಕ್ಕ ಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ಸರ್ಕಾರದಿಂದ ಒಟ್ಟು ರೂ. 2,548.94 ಲಕ್ಷಗಳು ಬಿಡುಗಡೆಯಾಗಿದ್ದು, ಸದರಿ ಲೆಕ್ಕ ಶೀರ್ಷಿಕೆವಾರು ಹಾಗೂ ತಾಲ್ಲೂಕುವಾರು ಬಿಡುಗಡೆಯಾದ ಅನುದಾನದ ವಿವರವನ್ನು ಅನುಬಂಧ-1 ಹಾಗೂ ಅನುಬಂಧ-1(ಎ)ರಲ್ಲಿ ಲಗತ್ತಿಸಿದೆ. |
| ಆ) | ಸದರಿ ಸಾಲಿನಲ್ಲಿ ಬಿಡುಗಡೆಯಾದ ವಿವಿಧ ಲೆಕ್ಕ ಶೀರ್ಷಿಕೆಯಡಿ ತಾಲ್ಲೂಕುವಾರು ಹಂಚಿಕೆ ಮಾಡಿದ ವಿವರ ನೀಡುವುದು; | 2019-20ನೇ ಸಾಲಿಗೆ ಲೆಕ್ಕ ಶೀರ್ಷಿಕೆಯಡಿ ತಾಲ್ಲೂಕುವಾರು ಹಂಚಿಕೆ ಮಾಡಿದ ಅನುದಾನದ ವಿವರಗಳನ್ನು ಅನುಬಂಧ-1(ಎ) ಹಾಗೂ ಅನುಬಂಧ-2 ರಲ್ಲಿ ಲಗತ್ತಿಸಿದೆ. |
| ಇ) | ಯಾವ ಕಾಮಗಾರಿಗಳಿಗೆ ಅನುದಾನ ಖರ್ಚು ಮಾಡಲಾಗಿದೆ? (ಪೂರ್ಣ ವಿವರ ನೀಡುವುದು) | ಸದರಿ ಅನುದಾನದಲ್ಲಿ ವೆಚ್ಚ ಭರಿಸಿರುವ/ಕೈಗೊಂಡ ಕಾಮಗಾರಿಗಳ ತಾಲ್ಲೂಕು ಪಂಚಾಯಿತಿವಾರು ವಿವರಗಳನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಗ್ರಾಅಪ 51 ಎಎಫ್ಎಸ್ 2020**

**(ಶ್ರೀ ಕೆಎಸ್ ಈಶ್ವರಪ್ಪ)**
**ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ,**
**ಸಚಿವರು**

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 901 |
| ಸದಸ್ಯರ ಹೆಸರು | ಶ್ರೀ ಬಸವರಾಜ ಮತ್ತಿಮುಡ (ಗುಲ್ಬರ್ಗ ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಕಳೆದ ಮೂರು ವರ್ಷಗಳಲ್ಲಿ ಕಲಬುರಗಿ ಗ್ರಾಮೀಣ ವಿಧಾನಸಭಾ ಕ್ಷೇತ್ರದಲ್ಲಿ ಕೆ.ಆರ್.ಐ.ಡಿ.ಎಲ್ ವತಿಯಿಂದ ಕೈಗೊಂಡ ಕಾಮಗಾರಿಗಳು ಯಾವುವು; | ಕಳೆದ ಮೂರು ವರ್ಷಗಳಲ್ಲಿ ಕಲಬುರಗಿ ಗ್ರಾಮೀಣ ವಿಧಾನಸಭಾ ಕ್ಷೇತ್ರದಲ್ಲಿ ಕೆ.ಆರ್.ಐ.ಡಿ.ಎಲ್ ವತಿಯಿಂದ ಕೈಗೊಂಡ ಕಾಮಗಾರಿಗಳು ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಆ. | ಅದರಲ್ಲಿ ಪ್ರಾರಂಭಗೊಂಡ/ ಮುಕ್ತಾಯಗೊಂಡ ಕಾಮಗಾರಿಗಳು ಯಾವುವು ಹಾಗೂ ಇನ್ನು ಕಾರ್ಯಾರಂಭವಾಗದಿರುವ ಕಾಮಗಾರಿಗಳು ಯಾವುವು; (ಸಂಪೂರ್ಣ ಮಾಹಿತಿ ಒದಗಿಸುವುದು) | ಪ್ರಾರಂಭಗೊಂಡ / ಮುಕ್ತಾಯಗೊಂಡ ಕಾರ್ಯಾರಂಭವಾಗದಿರುವ ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಇ. | ಸದರಿ ಕಾಮಗಾರಿಗಳಿಗೆ ಬಿಡುಗಡೆಯಾದ ಅನುದಾನವೆಷ್ಟು; (ಕಾಮಗಾರಿಗಳ ಹೆಸರು ಮತ್ತು ಸ್ಥಳಗಳ ವಿವರಣೆಯೊಂದಿಗೆ ಸಂಪೂರ್ಣ ಮಾಹಿತಿ ಒದಗಿಸುವುದು) | ಕೆಆರ್‌ಐಡಿಎಲ್ ವತಿಯಿಂದ ಕಲಬುರಗಿ ಗ್ರಾಮೀಣ ವಿಧಾನಸಭಾ ಕ್ಷೇತ್ರದಲ್ಲಿ 101 ಕಾಮಗಾರಿಗಳನ್ನು ಅಂದಾಜು ಮೊತ್ತ ರೂ.1858.08 ಲಕ್ಷಗಳಲ್ಲಿ ನಿರ್ವಹಿಸಲಾಗುತ್ತಿದ್ದು, ರೂ.1500.97 ಲಕ್ಷ ಅನುದಾನ ಬಿಡುಗಡೆಯಾಗಿರುತ್ತದೆ.<br><br>ಸಂಪೂರ್ಣ ಕಾಮಗಾರಿಗಳ ವಿವರಗಳನ್ನು ಸಿ.ಡಿ. ರೂಪದಲ್ಲಿ ನೀಡಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-07/13:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

along with CD

**ಕರ್ನಾಟಕ ವಿಧಾನ ಸಭೆ**

**15ನೇ ವಿಧಾನ ಸಭೆ – 7ನೇ ಅಧಿವೇಶನ**

**ಕರ್ನಾಟಕ ವಿಧಾನ ಸಭೆ ಸದಸ್ಯರ ಹೆಸರು** : **ಶ್ರೀ ಹೂಲಗೇರಿ ಡಿ.ಎಸ್ (ಲಿಂಗಸೂಗೂರು)**

**ಚುಕ್ಕೆ ಗುರುತಿಲ್ಲದ ಪ್ರಶ್ನೆ** : **904**

**ಉತ್ತರಿಸಬೇಕಾದ ದಿನಾಂಕ** : **23.09.2020**

**ಉತ್ತರಿಸುವ ಸಚಿವರು** : **ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಸಚಿವರು.**

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2018–19, 2019–20 ಮತ್ತು 2020–21ನೇ ಸಾಲಿನ ಆಯವ್ಯಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಮಂಜೂರಾದ ಅನುದಾನ ಎಷ್ಟು; (ಲೆಕ್ಕ ಶೀರ್ಷಿಕೆವಾರು ವಿವರ ನಿಡುವುದು) | 2018–19, 2019–20 ಮತ್ತು 2020–21ನೇ ಸಾಲಿನ ಆಯವ್ಯಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಮಂಜೂರಾದ ಅನುದಾನ ವಿವರವನ್ನು (ಲೆಕ್ಕ ಶೀರ್ಷಿಕೆವಾರು ವಿವರ ನಿಡಲಾಗಿದೆ) ಅನುಬಂಧ–ಅ ರಲ್ಲಿ ಲಗತ್ತಿಸಿದೆ. |
| ಆ) | ಸದರಿ ಸಾಲಿನ ಆಯವ್ಯಯದಲ್ಲಿ ಮಂಜೂರಾದ / ಬಿಡುಗಡೆಯಾದ / ಖರ್ಚು ಮಾಡಲಾದ ಅನುದಾನ ಎಷ್ಟು; (ಲೆಕ್ಕ ಶೀರ್ಷಿಕೆವಾರು ಮತ್ತು ಕಾಮಗಾರಿಗಳ ಸಂಪೂರ್ಣ ಮಾಹಿತಿ ಒದಗಿಸುವುದು) | ಸದರಿ ಸಾಲಿನ ಆಯವ್ಯಯದಲ್ಲಿ ಮಂಜೂರಾದ / ಬಿಡುಗಡೆಯಾದ / ಖರ್ಚು ಮಾಡಲಾದ ಅನುದಾನದ (ಲೆಕ್ಕ ಶೀರ್ಷಿಕೆವಾರು ಮತ್ತು ಕಾಮಗಾರಿಗಳ ಸಂಪೂರ್ಣ ಮಾಹಿತಿ ಒದಗಿಸಲಾಗಿದೆ) ವಿವರವನ್ನು ಅನುಬಂಧ–ಆ ರಲ್ಲಿ ಲಗತ್ತಿಸಿದೆ. |
| ಇ) | ರಾಯಚೂರು ಜಿಲ್ಲೆಯಲ್ಲಿ 2018–19, 2019–20 ಮತ್ತು ಇಲ್ಲಿಯವರೆಗೆ ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಮಂಜೂರಾದ ಕಾಮಗಾರಿಗಳು ಎಷ್ಟು; (ಕಾಮಗಾರಿಗಳ ಸಂಪೂರ್ಣ ಪ್ರಗತಿ ಮಾಹಿತಿ ಒದಗಿಸುವುದು) | ರಾಯಚೂರು ಜಿಲ್ಲೆಯಲ್ಲಿ 2018–19, 2019–20 ಮತ್ತು ಇಲ್ಲಿಯವರೆಗೆ ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಮಂಜೂರಾದ ಕಾಮಗಾರಿಗಳ ವಿವರವನ್ನು ಅನುಬಂಧ–ಇ ರಲ್ಲಿ ಲಗತ್ತಿಸಿದೆ. |
| ಈ) | 2018–19,2019–20 ಮತ್ತು 2020–21ನೇ ಸಾಲಿನ ವಿವಿಧ ಲೆಕ್ಕ ಶೀರ್ಷಿಕೆಯಲ್ಲಿ ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ ಇಂಜಿನಿಯರಿಗೆ ಉಪ ವಿಭಾಗ ಲಿಂಗಸೂಗೂರು ಇವರ ಮುಖಾಂತರ ಅನುಷ್ಠಾನಗೊಳಿಸಲಾಗುತ್ತಿರುವ ಕಾಮಗಾರಿಗಳು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ಕಾಮಗಾರಿಗಳ ಸಂಪೂರ್ಣ ಮಾಹಿತಿ ಮತ್ತು ಪ್ರಗತಿ ವಿವರ ನೀಡುವುದು) | 2018–19,2019–20 ಮತ್ತು 2020–21ನೇ ಸಾಲಿನ ವಿವಿಧ ಲೆಕ್ಕ ಶೀರ್ಷಿಕೆಯಲ್ಲಿ ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ ಇಂಜಿನಿಯರಿಗೆ ಉಪ ವಿಭಾಗ ಲಿಂಗಸೂಗೂರು ಇವರ ಮುಖಾಂತರ ಅನುಷ್ಠಾನಗೊಳಿಸಲಾಗುತ್ತಿರುವ ಕಾಮಗಾರಿಗಳ ವಿವರವನ್ನು ಅನುಬಂಧ–ಈ ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಗ್ರಾಅಪ 67 ಐಎಫ್ಎ 2020**

**(ಕೆಎಸ್ ಈಶ್ವರಪ್ಪ)**
**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ,**
**ಸಚಿವರು.**

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 906 |
| ಸದಸ್ಯರ ಹೆಸರು | : | ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು) |
| ಉತ್ತರಿಸಬೇಕಾದ ದಿನಾಂಕ | : | 23-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಯಚೂರು ಜಿಲ್ಲೆಯಲ್ಲಿರುವ ವಕ್ಫ್‌ನ ಹೆಸರಿನಲ್ಲಿರುವ ಆಸ್ತಿಗಳು ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು.) | ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಸಂಬಂಧಿಸಿದಂತೆ ರಾಯಚೂರು ಜಿಲ್ಲೆಯಲ್ಲಿರುವ ವಕ್ಫ್‌ನ ಹೆಸರಿನಲ್ಲಿರುವ ಆಸ್ತಿಗಳ ವಿವರವನ್ನು "ಅನುಬಂಧ-1" ರಲ್ಲಿ ನೀಡಲಾಗಿದೆ. |
| ಆ. | ಸದರಿ ವಕ್ಫ್ ಆಸ್ತಿಗಳನ್ನು ಅಭಿವೃದ್ಧಿಪಡಿಸಲು ಸರ್ಕಾರ ಬಿಡುಗಡೆ ಮಾಡಿರುವ ಅನುದಾನ ಎಷ್ಟು; (ಲೆಕ್ಕ ಶೀರ್ಷಿಕೆವಾರು ಸಂಪೂರ್ಣ ಕಾಮಗಾರಿಗಳ ಮಾಹಿತಿ ನೀಡುವುದು) | ರಾಯಚೂರು ಜಿಲ್ಲೆಗೆ ಸಂಬಂಧಪಟ್ಟಂತೆ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಿಂದ ಬಿಡುಗಡೆ ಮಾಡಿರುವ ಅನುದಾನದ ವಿವರವನ್ನು "ಅನುಬಂಧ-2, 2 'ಅ' ಮತ್ತು 2 'ಆ' ರಲ್ಲಿ ನೀಡಲಾಗಿದೆ. |
| ಇ | 2018-19 ಮತ್ತು 2019-20ನೇ ಸಾಲಿನಲ್ಲಿ ವಕ್ಫ್ ಇಲಾಖೆಗೆ ಆಯವ್ಯಯದಲ್ಲಿ ಮಂಜೂರಾದ ಅನುದಾನ ಎಷ್ಟು; ಬಿಡುಗಡೆ ಆಗಿರುವ ಅನುದಾನ ಎಷ್ಟು? (ಲೆಕ್ಕಶೀರ್ಷಿಕೆ ಮತ್ತು ಕಾಮಗಾರಿವಾರು ಮಾಹಿತಿ ನೀಡುವುದು.) | 2018-19 ಮತ್ತು 2019-20ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ರಾಜ್ಯ ಸರ್ಕಾರದಿಂದ ಆಯವ್ಯಯದಲ್ಲಿ ಮಂಜೂರಾದ ಹಾಗೂ ಬಿಡುಗಡೆಯಾದ ವಿವರವನ್ನು "ಅನುಬಂಧ-3" ರಲ್ಲಿ ನೀಡಲಾಗಿದೆ. |

ಸಂಖ್ಯೆ: MWD 100 LMQ 2020

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು
ವಕ್ಫ್ ಸಚಿವರು



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಡಾ॥ ಅನ್ನದಾನಿ .ಕೆ.(ಮಳವಳ್ಳಿ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1021

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 23.09.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 03 ವರ್ಷಗಳಿಂದ ಇಲ್ಲಿಯವರೆಗೆ ಕೈಮಗ್ಗ ಮತ್ತು ಜವಳಿ ಇಲಾಖೆ ವತಿಯಿಂದ ವಿವಿಧ ಯೋಜನೆಗಳಡಿಯಲ್ಲಿ ಅನುಷ್ಠಾನಗೊಳಿಸ ಲಾಗುತ್ತಿರುವ ಯೋಜನೆಗಳು ಯಾವುವು(ಮಾಹಿತಿ ನೀಡುವುದು); | ಅನುಬಂಧ–1ರಲ್ಲಿ ಒದಗಿಸಿದೆ. |
| ಆ) | ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಈ ಇಲಾಖೆಗೆ ಒದಗಿಸಿರುವ ಅನುದಾನವೆಷ್ಟು ಹಾಗೂ ಒದಗಿಸಿರುವ ಅನುದಾನದಲ್ಲಿ ವರ್ಷವಾರು ಎಷ್ಟು ಖರ್ಚು ಮಾಡಲಾಗಿದೆ (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು). | 2017–18ನೇ ಸಾಲಿನಿಂದ ರಾಜ್ಯದಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆ ಅನುದಾನದಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಇಲ್ಲಿಯವರೆಗೆ ವಿಧಾನಸಭಾ ಕ್ಷೇತ್ರವಾರು ಖರ್ಚು ಮಾಡಲಾದ ಸಂಪೂರ್ಣ ಮಾಹಿತಿಯನ್ನು ಅನುಬಂಧ–2 ಮತ್ತು ಅನುಬಂಧ–3ರಲ್ಲಿ ಒದಗಿಸಿದೆ. |
| ಇ) | ಸದರಿ ಇಲಾಖಾವತಿಯಿಂದ ವಿವಿಧ ಯೋಜನೆ ಗಳಡಿಯಲ್ಲಿ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ನೀಡುರುವ ಸಹಾಯಧನವನ್ನು ಯಾವ ಯೋಜನೆ ಅಡಿಯಲ್ಲಿ ಯಾವ ಸಂಸ್ಥೆಗಳಿಗೆ ನೀಡಲಾಗಿದೆ (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು); | ಅನುಬಂಧ–4, 4ಅ ಮತ್ತು ಅನುಬಂಧ–5ರಲ್ಲಿ ಒದಗಿಸಿದೆ. |
| ಈ) | ರಾಜ್ಯದಲ್ಲಿ ನೇಕಾರರಿಗೆ ಕೈಮಗ್ಗ ಮತ್ತು ಜವಳಿ ಇಲಾಖೆ ವತಿಯಿಂದ ವಿವಿಧ ಯೋಜನೆ ಗಳಡಿಯಲ್ಲಿ ಕಳೆದ 03 ವರ್ಷಗಳಿಂದ ಇಲ್ಲಿಯವರೆಗೆ ನೀಡುರುವ ಸಹಾಯಧನವೆಷ್ಟು (ಯೋಜನಾವಾರು ಹಾಗೂ ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು)? | ಅನುಬಂಧ–4, 4ಅ ಮತ್ತು ಅನುಬಂಧ–5ರಲ್ಲಿ ಒದಗಿಸಿದೆ. |

ಸಂಖ್ಯೆ: CI 212 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

along with C.D

**ಕರ್ನಾಟಕ ವಿಧಾನ ಸಭೆ**

**15ನೇ ವಿಧಾನ ಸಭೆ– 7ನೇ ಅಧಿವೇಶನ**

**ಕರ್ನಾಟಕ ವಿಧಾನ ಸಭೆ ಸದಸ್ಯರ ಹೆಸರು** : ಶ್ರೀ ಅಜಯ್ ಧರ್ಮಸಿಂಗ್ (ಜೇವರ್ಗಿ)
**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1023
**ಉತ್ತರಿಸುವ ದಿನಾಂಕ** : **23–09–2020**
**ಉತ್ತರಿಸುವ ಸಚಿವರು** : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ವಿವಿಧ ಯೋಜನೆಯಡಿಯಲ್ಲಿ ರಾಜ್ಯದ ಗ್ರಾಮ ಪಂಚಾಯಿತಿಗಳಿಗೆ ಬಂದಿರುವ ಅನುದಾನವೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ಸ್ವಚ್ಛ ಭಾರತ್ ಮಿಷನ್ (ಗ್ರಾ), ನರೇಗಾ ಯೋಜನೆ, 14 ನೇ ಹಣಕಾಸು ಆಯೋಗ ಹಾಗೂ ರಾಷ್ಟ್ರೀಯ ಜೈವಾನೀಲ ಹಾಗೂ ಸಾವಯವ ಗೊಬ್ಬರ ಕಾರ್ಯಕ್ರಮಗಳಡಿ ರಾಜ್ಯದ ಗ್ರಾಮ ಪಂಚಾಯಿತಿಗಳಿಗೆ ಅನುದಾನ ಬಿಡುಗಡೆಯಾಗಿರುತ್ತದೆ.<br>ಕಳೆದ ಮೂರು ವರ್ಷಗಳಲ್ಲಿ ರಾಜ್ಯದ ಗ್ರಾಮ ಪಂಚಾಯಿತಿಗಳಿಗೆ ಯೋಜನಾವಾರು ಅನುದಾನ ಬಿಡುಗಡೆ (ತಾಲ್ಲೂಕುವಾರು)ವಿವರವನ್ನು ಈ ಕೆಳಕಂಡಂತೆ ಅನುಬಂಧದಲ್ಲಿ ಲಗತ್ತಿಸಿದೆ.<br>• ಸ್ವಚ್ಛ ಭಾರತ್ ಮಿಷನ್ (ಗ್ರಾ): ಅನುಬಂಧ–1 ಹಾಗೂ ಅನುಬಂಧ–2<br>• ನರೇಗಾ ಯೋಜನೆ: ಅನುಬಂಧ–3<br>• 14 ನೇ ಹಣಕಾಸು ಆಯೋಗ: ಅನುಬಂಧ–4<br>• ರಾಷ್ಟ್ರೀಯ ಜೈವಾನೀಲ ಹಾಗೂ ಸಾವಯವ ಗೊಬ್ಬರ ಅನುಬಂಧ–5 |
| ಆ) | ಕೇಂದ್ರ ಸರ್ಕಾರದಿಂದ ಬಂದಿರುವ ಸದರಿ ಅನುದಾನದಲ್ಲಿ ಯಾವ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಸದರಿ ಅನುದಾನದಲ್ಲಿ ಯೋಜನಾವಾರು ಕೈಗೊಂಡಿರುವ ಕಾಮಗಾರಿಗಳ ವಿವರ, ಸದರಿ ಅನುದಾನವನ್ನು ಸಮರ್ಪಕವಾಗಿ ಬಳಸಿಕೊಳ್ಳದಿರುವ ಹಾಗೂ ಅಧಿಕಾರಿಗಳ ವಿರುದ್ಧ ಕೈಗೊಂಡ ಕ್ರಮದ ಕುರಿತಾದ ವಿವರಗಳನ್ನು ಅನುಬಂಧ 1 ರಿಂದ 5 ರಲ್ಲಿ ಲಗತ್ತಿಸಿದೆ. |
| ಇ) | ಸದರಿ ಅನುದಾನವನ್ನು ಸಮರ್ಪಕವಾಗಿ ಬಳಸಿಕೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗೂ ಸದರಿ ಅನುದಾನವನ್ನು ಸಮರ್ಪಕವಾಗಿ ಬಳಸಿಕೊಳ್ಳದಿರುವ ಅಧಿಕಾರಿಗಳ ವಿರುದ್ಧ ಸರ್ಕಾರವು ಕ್ರಮ ಕೈಗೊಂಡಿದೆಯೇ; | |
| ಈ) | ಹಾಗಿದ್ದಲ್ಲಿ, ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ? (ವಿವರಗಳನ್ನು ನೀಡುವುದು) | |

**ಸಂಖ್ಯೆ: ಗ್ರಾಅಪ 52 ಎಎಫ್‌ಎನ್ 2020**

( ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್
ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1025

ಮಾನ್ಯ ಸದಸ್ಯರ ಹೆಸರು : ಶ್ರೀ ರಾಜ್‌ಕುಮಾರ್ ಪಾಟೇಲ್ (ಸೇಡಂ)

ವಿಷಯ : 'ಪ್ರವಾಸೋದ್ಯಮ ಇಲಾಖೆಯಿಂದ ಕೈಗೊಂಡ ಯೋಜನೆಗಳು'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ : 23.09.2020

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸಕ್ತ ಸಾಲಿನಲ್ಲಿ ಕಲಬುರಗಿ ಜಿಲ್ಲೆಯಲ್ಲಿ ಕೈಗೊಂಡಿರುವ ಅಭಿವೃದ್ಧಿ ಯೋಜನೆಗಳು ಯಾವುವು. (ತಾಲ್ಲೂಕಾವಾರು ವಿವರ ನೀಡುವುದು.) | 2020-21ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಕಲಬುರಗಿ ಜಿಲ್ಲೆಯಲ್ಲಿ ಕೈಗೊಳ್ಳುತ್ತಿರುವ ಯೋಜನೆಗಳ ವಿವರಗಳನ್ನು **ಅನುಬಂಧದಲ್ಲಿ** ಒದಗಿಸಿದೆ. |
| ಆ) | ಪ್ರಸಕ್ತ ಸಾಲಿನಲ್ಲಿ ಜಿಲ್ಲೆಗೆ ಹಂಚಿಕೆಯಾದ ಅನುದಾನವೆಷ್ಟು? | 2020-21ನೇ ಸಾಲಿನಲ್ಲಿ ಬಂಡವಾಳ ವೆಚ್ಚಗಳ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ರೂ.20.00 ಕೋಟಿಗಳ ಅನುದಾನವನ್ನು ಒದಗಿಸಿದ್ದು, ಸದರಿ ಅನುದಾನವನ್ನು ಮುಂದುವರೆದ ಕಾಮಗಾರಿಗಳಿಗಾಗಿ ವಿನಿಯೋಗಿಸಲು ಉದ್ದೇಶಿಸಲಾಗಿದೆ. |
| ಇ) | ಅನುದಾನವನ್ನು ಯಾವ ಅಭಿವೃದ್ಧಿ ಯೋಜನೆಗಳಿಗೆ ವಿನಿಯೋಗಿಸಲಾಗಿದೆ. (ಕಾರ್ಯಕ್ರಮವಾರು ವಿವರ ಒದಗಿಸುವುದು) | **ಅನುಬಂಧದಲ್ಲಿ ಒದಗಿಸಿದೆ.** |
| ಈ) | ಯಾತ್ರಿ ನಿವಾಸಗಳ ಕಾಮಗಾರಿ ಯಾವ ಹಂತದಲ್ಲಿದೆ. ಅವುಗಳನ್ನು ಯಾವ ಇಲಾಖೆಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. (ವಿವರ ನೀಡುವುದು) | 2020-21ನೇ ಸಾಲಿನ ಮುಂದುವರೆದ ಕಾಮಗಾರಿಗಳ ಕ್ರಿಯಾ ಯೋಜನೆಯಲ್ಲಿ ಕಲಬುರಗಿ ಜಿಲ್ಲೆಗೆ ಸಂಬಂಧಿಸಿದಂತೆ ಯಾತ್ರಿನಿವಾಸ ಕಾಮಗಾರಿಗಳ ವಿವರವನ್ನು **ಅನುಬಂಧದಲ್ಲಿ** ಒದಗಿಸಿದೆ. |
| ಉ) | ಸೇಡಂ ತಾಲ್ಲೂಕಿಗೆ ಮಂಜೂರಾದ ಒಟ್ಟು ಯಾತ್ರಿ ನಿವಾಸಗಳ ಸಂಖ್ಯೆ ಎಷ್ಟು? (ವಿವರಗಳೊಂದಿಗೆ) | 2020-21ನೇ ಸಾಲಿನ ಮುಂದುವರೆದ ಕಾಮಗಾರಿಗಳ ಕ್ರಿಯಾ ಯೋಜನೆಯಲ್ಲಿ ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕಿಗೆ ಸಂಬಂಧಿಸಿದಂತೆ 06 ಯಾತ್ರಿ ನಿವಾಸಗಳನ್ನು ಕೈಗೊಳ್ಳಲಾಗುತ್ತಿದೆ. ವಿವರವನ್ನು **ಅನುಬಂಧದಲ್ಲಿ** ಒದಗಿಸಿದೆ. |

ಸಂಖ್ಯೆ: ಟಿಓಆರ್ 181 ಟಿಡಿವಿ 2020

(ಸಿ.ಟಿ.ರವಿ)

ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

<u>ಕರ್ನಾಟಕ ವಿಧಾನ ಸಭೆ</u>

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1026 |
|---|---|
| ಸದಸ್ಯರ ಹೆಸರು | ಶ್ರೀ ರಾಜ್‌ಕುಮಾರ್ ಪಾಟೀಲ್ (ಸೇಡಂ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಪ್ರಧಾನ ಮಂತ್ರಿಗಳ ಗ್ರಾಮ್ ಸಡಕ್ ಯೋಜನೆ ಅನುಷ್ಠಾನಕ್ಕಿರುವ ಮಾನದಂಡವೇನು; | ರಾಜ್ಯದಲ್ಲಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ-3 ರ ಅನುಷ್ಠಾನಕ್ಕಿರುವ ಮಾನದಂಡದ ವಿವರವನ್ನು ಅನುಬಂಧ-1ರಲ್ಲಿ ನೀಡಿದೆ. |
| ಆ. | 2020-21ನೇ ಸಾಲಿನಲ್ಲಿ ಯಾವ ರಸ್ತೆಗಳನ್ನು ಈ ಯೋಜನೆಯಡಿ ಅಭಿವೃದ್ಧಿಪಡಿಸಲಾಗುತ್ತಿದೆ; (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು) ಹಾಗೂ ಸೇಡಂ ವಿಧಾನಸಭಾ ಕ್ಷೇತ್ರದಲ್ಲಿ ಈ ಯೋಜನೆಯಡಿ ಯಾವ ರಸ್ತೆಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ; (ವಿವರ ನೀಡುವುದು) | • ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ ಹಂತ-3ರ ಬ್ಯಾಚ್-1ರಲ್ಲಿ ಅನುಮೋದನೆಗೊಂಡ 3226.12 ಕಿ.ಮೀ ರಸ್ತೆ ಕಾಮಗಾರಿಗಳನ್ನು 305 ಪ್ಯಾಕೇಜುಗಳನ್ನಾಗಿ ಮಾಡಿ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ಕರೆದು, ಈಗಾಗಲೇ 301 ಪ್ಯಾಕೇಜ್‌ಗಳಿಗೆ ಅನುಮೋದನೆಯನ್ನು ನೀಡಲಾಗಿದ್ದು, ಕಾಮಗಾರಿಗಳು ಪ್ರಾರಂಭಿಕ ಹಂತದಲ್ಲಿರುತ್ತದೆ. ಇನ್ನುಳಿದ 4 ಪ್ಯಾಕೇಜ್ ಕಾಮಗಾರಿಗಳ ಟೆಂಡರ್‌ಗಳನ್ನು ಇತ್ಯರ್ಥಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ವಿವರಗಳನ್ನು ಅನುಬಂಧ-2(A) ರಲ್ಲಿ ನೀಡಿದೆ. ಹಾಗೂ<br>• ಸೇಡಂ ವಿಧಾನಸಭಾ ಕ್ಷೇತ್ರದ ರಸ್ತೆ ಕಾಮಗಾರಿಗಳ ವಿವರಗಳನ್ನು ಅನುಬಂಧ-2(B) ರಲ್ಲಿ ನೀಡಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-07/17:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1028
ಮಾನ್ಯ ವಿಧಾನಸಭೆ ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್. ಕೆ.
ಉತ್ತರಿಸಬೇಕಾದ ದಿನಾಂಕ : 23.09.2020
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಂಖ್ಯೆ ಎಷ್ಟು; (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು)</td><td>2011ರ ಜನಗಣತಿಯ ಪ್ರಕಾರ ಒಟ್ಟು 1324205 ವಿವಿಧ ವಿಕಲಚೇತನರಿರುತ್ತಾರೆ. ಕರ್ನಾಟಕದಲ್ಲಿ ಒಟ್ಟು 61095297 ಜನಸಂಖ್ಯೆಯಲ್ಲಿ ಶೇ.9.60ರಷ್ಟು ಜನ 60 ವರ್ಷ ಮೀರಿರುವ ಹಿರಿಯ ನಾಗರಿಕರು ಇರುತ್ತಾರೆ. ವಿಧಾನಸಭಾ ಕ್ಷೇತ್ರವಾರು ಮಾಹಿತಿ ಲಭ್ಯವಿರುವುದಿಲ್ಲ.</td></tr>
<tr><td>ಆ)</td><td>ಸದರಿ ಇಲಾಖೆಯಿಂದ ಜಾರಿಯಲ್ಲಿರುವ ವಿವಿಧ ಯೋಜನೆಗಳಡಿಯಲ್ಲಿ ನೀಡುತ್ತಿರುವ ಸೌಲಭ್ಯಗಳು ಯಾವುವು ಹಾಗೂ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು; (ಮಾಹಿತಿ ನೀಡುವುದು)</td><td>ವಿವಿಧ ಯೋಜನೆಗಳಡಿಯಲ್ಲಿ ನೀಡುತ್ತಿರುವ ಸೌಲಭ್ಯಗಳು ಹಾಗೂ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯಲ್ಲಿ ಅನುಸರಿಸುತ್ತಿರುವ ಮಾನದಂಡಗಳ ವಿವರವನ್ನು ಅನುಬಂಧದಲ್ಲಿ ನೀಡಿದೆ.</td></tr>
<tr><td>ಇ)</td><td>ಹಾಸನ ಜಿಲ್ಲೆಯಲ್ಲಿ ವಿಕಲಚೇತನರ ಶ್ರೇಯೋಭಿವೃದ್ಧಿಗೆ ನೋಂದಣಿಯಾಗಿರುವ ಸಂಸ್ಥೆಗಳೆಷ್ಟು; ಈ ಪೈಕಿ ಎಷ್ಟು ಸಂಸ್ಥೆಗಳು ವಿಕಲಚೇತನರ ಏಳಿಗೆಗೆ ಶ್ರಮಿಸುತ್ತಿವೆ; (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು)</td><td>ಹಾಸನ ಜಿಲ್ಲೆಯಲ್ಲಿ ವಿಕಲಚೇತನರ ಶ್ರೇಯೋಭಿವೃದ್ಧಿಗೆ 7 ಸಂಸ್ಥೆಗಳು ನೊಂದಣಿಯಾಗಿರುತ್ತವೆ. ವಿಧಾನಸಭಾ ಕ್ಷೇತ್ರವಾರು ಮಾಹಿತಿ ಕೆಳಗಿನಂತಿದೆ.
<table>
<tr><th colspan="7">ತಾಲ್ಲೂಕುಗಳ ಹೆಸರು</th></tr>
<tr><th>ಹಾಸನ</th><th>ಆಲೂರು–ಸಕಲೇಶಪುರ</th><th>ಬೇಲೂರು</th><th>ಅರಕಲಗೂಡು</th><th>ಅರಸೀಕೆರೆ</th><th>ಹೊಳೆನರಸೀಪುರ</th><th>ಶ್ರವಣಬೆಳಗೊಳ</th></tr>
<tr><td>5</td><td>1</td><td>–</td><td>–</td><td>–</td><td>–</td><td>1</td></tr>
</table></td></tr>
<tr><td>ಈ)</td><td>ರಾಜ್ಯದಲ್ಲಿ ಹಾಗೂ ಪ್ರತ್ಯೇಕವಾಗಿ ಹಾಸನ ಜಿಲ್ಲೆಯಲ್ಲಿ ಪ್ರಸಕ್ತ ಸಾಲಿನಲ್ಲಿ ವಿವಿಧ ರೀತಿಯ ಎಷ್ಟು ವಿಕಲಚೇತನರಿಗೆ ವೀಲ್ ಚೇರ್ ಮತ್ತು ಮೂರು ಚಕ್ರಗಳ ಮೋಟಾರ್ ವಾಹನಗಳನ್ನು ವಿತರಣೆ ಮಾಡಲಾಗಿದೆ ಹಾಗೂ ಈ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯಲ್ಲಿ ಅನುಸರಿಸುವ ಮಾನದಂಡಗಳೇನು? (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು)</td><td>ಪ್ರಸಕ್ತ ಸಾಲಿನಲ್ಲಿ ಯಂತ್ರಚಾಲಿತ ದ್ವಿಚಕ್ರ ವಾಹನಗಳ ಖರೀದಿ ಸಂಬಂಧ ಟೆಂಡರ್ ಕರೆಯುವ ಬಗ್ಗೆ ಸಚಿವ ಸಂಪುಟದ ಅನುಮೋದನೆ ಪಡೆಯಲು ಕ್ರಮವಹಿಸಲಾಗುತ್ತಿದೆ. ವೀಲ್ ಚೇರ್ ಖರೀದಿ ಸಂಬಂಧ ಜಿಲ್ಲಾ ಕಛೇರಿಗಳಿಗೆ ಆಯವ್ಯಯವನ್ನು ಬಿಡುಗಡೆ ಮಾಡಲಾಗಿದ್ದು ಹಾಸನ ಜಿಲ್ಲೆಗೆ ಪ್ರಸಕ್ತ ಸಾಲಿನಲ್ಲಿ ರೂ.7.00ಲಕ್ಷಗಳ ಆಯವ್ಯಯವನ್ನು ಸಾಧನ ಸಲಕರಣೆ ಯೋಜನೆಯಡಿ ಬಿಡುಗಡೆ ಮಾಡಲಾಗಿದೆ.</td></tr>
</table>

**ಸಂಖ್ಯೆ: ಮಮಇ 213 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ
ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1029

ಮಾನ್ಯ ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)

ವಿಷಯ : ವಿಶ್ವಪ್ರಸಿದ್ಧ ದೇವಸ್ಥಾನಗಳ ಅಭಿವೃದ್ಧಿಗಾಗಿ ಒದಗಿಸಿರುವ ಅನುದಾನ'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ : 23.09.2020

*****

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಹಾಸನ ಜಿಲ್ಲೆಯ ವಿಶ್ವ ಪ್ರಸಿದ್ಧ ಗೊಮ್ಮಟೇಶ್ವರ ವಿಗ್ರಹ ಮತ್ತು ಹೊಯ್ಸಳ ಶೈಲಿಯಲ್ಲಿ ಕಟ್ಟಿರುವ ಬೇಲೂರು ಮತ್ತು ಹಳೇಬೀಡಿನಲ್ಲಿರುವ ಸುಪ್ರಸಿದ್ಧ ಶ್ರೀಚನ್ನಕೇಶವಸ್ವಾಮಿ ದೇವಸ್ಥಾನಗಳಿದ್ದು, ಪ್ರವಾಸಿಗರ ಭೂಪಟದಲ್ಲಿ ಒಂದು ಮಹತ್ವದ ಸ್ಥಾನವನ್ನು ಹೊಂದಿದ್ದು, ಪ್ರವಾಸೋದ್ಯಮ ಇಲಾಖೆಯಿಂದ 2018-19 ಮತ್ತು 2019-20ನೇ ಸಾಲಿನಲ್ಲಿ ಮೇಲ್ಕಂಡ ಜಿಲ್ಲೆಯ ವಿಶ್ವಪ್ರಸಿದ್ಧ ಯಾತ್ರಾಸ್ಥಳಗಳ ಅಭಿವೃದ್ಧಿ ಮತ್ತು ಯಾತ್ರಿಕರಿಗೆ ಸೌಲಭ್ಯ ಹಾಗೂ ಮೂಲಭೂತ ಸೌಕರ್ಯಗಳಿಗಾಗಿ ಒದಗಿಸಿರುವ ಇಲಾಖಾ ಆಯ-ವ್ಯಯದಲ್ಲಿ ಒದಗಿಸಿರುವ ಅನುದಾನವೆಷ್ಟು; (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)</td><td>ಹಾಸನ ಜಿಲ್ಲೆಗೆ 2018-19 ಮತ್ತು 2019-20ನೇ ಸಾಲಿನಲ್ಲಿ ಮಂಜೂರಾಗಿರುವ ಕಾಮಗಾರಿಗಳ ಅಂದಾಜು ಮೊತ್ತ ಮತ್ತು ಬಿಡುಗಡೆ ಮಾಡಿರುವ ಅನುದಾನದ ವರ್ಷವಾರು ವಿವರ ಕೆಳಗಿನಂತಿದೆ.<br><table><tr><th>ವರ್ಷ</th><th>ಅಂದಾಜು ಮೊತ್ತ</th><th>ಬಿಡುಗಡೆ ಮಾಡಿರುವ ಮೊತ್ತ</th></tr><tr><td>2018-19</td><td>2261.00</td><td>1040.00</td></tr><tr><td>2019-20</td><td>615.00</td><td>203.00</td></tr><tr><td>ಒಟ್ಟು</td><td>2876.00</td><td>1243.00</td></tr></table><br>ತಾಲ್ಲೂಕುವಾರು ವಿವರ ಅನುಬಂಧದಲ್ಲಿ ಒದಗಿಸಿದೆ.</td></tr>
<tr><td>ಆ)</td><td>ಹಾಗಿದ್ದಲ್ಲಿ, ಮೂಲಭೂತ ಸೌಕರ್ಯಗಳಿಗಾಗಿ ಇಲಾಖಾ ಆಯ-ವ್ಯಯದಲ್ಲಿ ಒದಗಿಸಲಾಗಿದ್ದ ಅನುದಾನವನ್ನು ಬದಲಾವಣೆ ಮಾಡಿ ಈ ಅನುದಾನವನ್ನು ಇತರೆ ಜಿಲ್ಲೆಗಳಿಗೆ ವರ್ಗಾಯಿಸಿರುವುದು ನಿಜವೇ? (ಸಂಪೂರ್ಣ ಮಾಹಿತಿ ನೀಡುವುದು)</td><td>ಇಲಾಖೆಗೆ ಒದಗಿಸುವ ಅನುದಾನದಲ್ಲಿ ಪ್ರವಾಸಿ ತಾಣಗಳಲ್ಲಿ ಅತ್ಯಾವಶ್ಯಕವಾಗಿ ಒದಗಿಸಬೇಕಾಗಿರುವ ಮೂಲಭೂತ ಸೌಲಭ್ಯ ಕಾಮಗಾರಿಗಳಿಗಾಗಿ ಅಗತ್ಯತೆಯ ಆಧಾರದ ಮೇಲೆ ಅನುದಾನವನ್ನು ಬಳಸಲಾಗುತ್ತದೆ.</td></tr>
</table>

ಸಂಖ್ಯೆ: ಟಿಓಆರ್ 183 ಟಿಡಿವಿ 2020

(ಸಿ.ಟಿ.ರವಿ)

ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1034

ಉತ್ತರ ದಿನಾಂಕ : 23.09.2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯಿಂದ ಎಷ್ಟು ಕುಡಿಯುವ ನೀರಿನ ಘಟಕಗಳನ್ನು ಪ್ರಾರಂಭಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಒಟ್ಟು 17997 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಪ್ರಾರಂಭಿಸಲಾಗಿದೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ) | ಬೆಳಗಾವಿ ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯಿಂದ ಎಷ್ಟು ಕುಡಿಯುವ ನೀರಿನ ಘಟಕಗಳನ್ನು ಪ್ರಾರಂಭಿಸಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | ಬೆಳಗಾವಿ ಜಿಲ್ಲೆಯ ಬೆಳಗಾವಿ ವಿಭಾಗ ವ್ಯಾಪ್ತಿಯಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯಿಂದ 604 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಪ್ರಾರಂಭಿಸಲಾಗಿದೆ. ತಾಲ್ಲೂಕುವಾರು ಮಾಹಿತಿ ಅನುಬಂಧ-2ರಲ್ಲಿ ಲಗತ್ತಿಸಿದೆ |
| ಇ) | ಬೈಲಹೊಂಗಲ ವಿಧಾನಸಭಾ ಮತಕ್ಷೇತ್ರದ ವ್ಯಾಪ್ತಿಯಲ್ಲಿನ ಬೈಲಹೊಂಗಲ ಹಾಗೂ ಸವದತ್ತಿ ತಾಲ್ಲೂಕುಗಳಲ್ಲಿ ಎಷ್ಟು ಕುಡಿಯುವ ನೀರಿನ ಘಟಕಗಳಿರುತ್ತವೆ; (ಗ್ರಾಮವಾರು ಮಾಹಿತಿ ನೀಡುವುದು) | ಬೈಲಹೊಂಗಲ ವಿಧಾನಸಭಾ ಮತಕ್ಷೇತ್ರದ ವ್ಯಾಪ್ತಿಯಲ್ಲಿನ ಬೈಲಹೊಂಗಲ ಸವದತ್ತಿ ತಾಲ್ಲೂಕುಗಳಲ್ಲಿ 91 ಕುಡಿಯುವ ನೀರಿನ ಘಟಕಗಳಿರುತ್ತವೆ. ಗ್ರಾಮವಾರು ಮಾಹಿತಿ ಅನುಬಂಧ-3ರಲ್ಲಿ ಲಗತ್ತಿಸಿದೆ. |
| ಈ) | ಕ್ಷೇತ್ರದ ವ್ಯಾಪ್ತಿಯಲ್ಲಿನ ಶುದ್ಧ ಕುಡಿಯುವ ನೀರಿನ ಘಟಕಗಳು ಸರಿಯಾಗಿ ಕಾರ್ಯನಿರ್ವಹಿಸದೇ ಇರುವ ಸಂಗತಿ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಉ) | ಯಾವ ಗ್ರಾಮಗಳಲ್ಲಿರುವ ಘಟಕಗಳು ಸರಿಯಾಗಿ ಕಾರ್ಯನಿರ್ವಹಿಸುತ್ತಿರುವುದಿಲ್ಲ; (ವಿವರ ನೀಡುವುದು) | ಅನುಬಂಧ-4ರಲ್ಲಿ ಲಗತ್ತಿಸಲಾಗಿದೆ. |
| ಊ) | ಗುತ್ತಿಗೆದಾರರು ಸರಿಯಾಗಿ ಕೆಲಸ ನಿರ್ವಹಿಸದೇ ಇರುವುದರಿಂದ ಈ ಘಟಕಗಳು ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಋ) | ದುರಸ್ತಿಯಲ್ಲಿರುವ ಘಟಕಗಳನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ದುರಸ್ಥಿಯಲ್ಲಿರುವ ಘಟಕಗಳನ್ನು ಸುಸ್ಥಿತಿಯಲ್ಲಿಡಲು ಸಂಬಂಧಪಟ್ಟ ಗುತ್ತಿಗೆದಾರರಿಗೆ ಸೂಚನೆ ನೀಡಲಾಗಿದ್ದು, ದುರಸ್ಥಿ ಕಾರ್ಯ ಪ್ರಗತಿಯಲ್ಲಿದೆ. |

ಸಂ:ಗ್ರಾಕುನೀ&ನೈಇ 29 ಗ್ರಾನೀಸ(4) 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

along with C.D

**ಕರ್ನಾಟಕ ವಿಧಾನ ಸಭೆ**

**15ನೇ ವಿಧಾನ ಸಭೆ– 7ನೇ ಅಧಿವೇಶನ**

**ಕರ್ನಾಟಕ ವಿಧಾನ ಸಭೆ ಸದಸ್ಯರ ಹೆಸರು** : ಶ್ರೀ ಮಹದೇವ .ಕೆ (ಪಿರಿಯಾಪಟ್ಟಣ)
**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1038
**ಉತ್ತರಿಸುವ ದಿನಾಂಕ** : **23-09-2020**
**ಉತ್ತರಿಸುವ ಸಚಿವರು** : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಗೆ ಈ ಸಾಲಿನ ಆಯವ್ಯಯದಲ್ಲಿ ನಿಗದಿ ಮಾಡಿರುವ ಒಟ್ಟು ಅನುದಾನ ಎಷ್ಟು; (ಲೆಕ್ಕ ಶೀರ್ಷಿಕೆವಾರು ವಿವರ ನೀಡುವುದು). | ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಗೆ ಈ ಸಾಲಿನ ಆಯವ್ಯಯದಲ್ಲಿ ರೂ.15,59,521.15 ಲಕ್ಷಗಳ ಅನುದಾನ ನಿಗದಿಯಾಗಿದ್ದು, ಸದರಿ ಅನುದಾನದ ಲೆಕ್ಕ ಶೀರ್ಷಿಕೆವಾರು ವಿವರವನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ) | ಈ ಸಾಲಿನ ಆಯವ್ಯಯದಲ್ಲಿ ಮುಜೂರಾಗಿರುವ ಅನುದಾನಕ್ಕೆ ಯಾವ ಲೆಕ್ಕ ಶೀರ್ಷಿಕೆಯಡಿ ಯಾವ ಕಾರ್ಯಕ್ರಮ ಮಾಡಲು ಉದ್ದೇಶಿಸಲಾಗಿದೆ; | ಈ ಸಾಲಿನ ಆಯವ್ಯಯದಲ್ಲಿ ಮುಜೂರಾಗಿರುವ ಅನುದಾನದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಅಧೀನದ ವಿವಿಧ ಸಂಸ್ಥೆ/ ಇಲಾಖೆಗಳಿಂದ ವಿವಿಧ ಲೆಕ್ಕ ಶೀರ್ಷಿಕೆಗಳಡಿ ಮಾಡಲು ಉದ್ದೇಶಿಸಲಾಗಿರುವ ವಿವಿಧ ಕಾರ್ಯಕ್ರಮಗಳ ವಿವರಗಳನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ. |
| ಇ) | ಪಿರಿಯಾಪಟ್ಟಣ ಮತಕ್ಷೇತ್ರದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯಿಂದ ಈ ಸಾಲಿನಲ್ಲಿ ಯಾವ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುವುದು? (ವಿವರ ನೀಡುವುದು) | ಪಿರಿಯಾಪಟ್ಟಣ ಮತಕ್ಷೇತ್ರದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯಿಂದ ಈ ಸಾಲಿನಲ್ಲಿ ಅನುಷ್ಠಾನಗೊಳಿಸಲಾಗುವ ಅಭಿವೃದ್ಧಿ ಯೋಜನೆಗಳ ವಿವರಗಳನ್ನು ಅನುಬಂಧ-3 ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಗ್ರಾಅಪ 30 ಎಎಆರ್2020**

**(ಶ್ರೀ ಕೆ.ಎಸ್ ಈಶ್ವರಪ್ಪ)**
**ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು.**

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1044

ಮಾನ್ಯ ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)

ವಿಷಯ : ಪ್ರವಾಸಿ ಟ್ಯಾಕ್ಸಿಗಳ ಖರೀದಿ ಕುರಿತು

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

******

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಿಂದ ಕೊಪ್ಪಳ ಜಿಲ್ಲೆಯ ಪ್ರವಾಸೋದ್ಯಮ ಇಲಾಖೆಯಲ್ಲಿ ನೀಡಲಾದ ಪ್ರವಾಸಿ ಟ್ಯಾಕ್ಸಿಗಳ ಸಂಖ್ಯೆ ಎಷ್ಟು. (ಫಲಾನುಭವಿಗಳ ವಿವರಗಳನ್ನು ನೀಡುವುದು) | 2017-18, 2018-19 ಮತ್ತು 2019-20ನೇ ಸಾಲಿನಲ್ಲಿ ಕೊಪ್ಪಳ ಜಿಲ್ಲೆಯ ಪ್ರವಾಸೋದ್ಯಮ ಇಲಾಖೆಯಲ್ಲಿ ನೀಡಲಾದ ಪ್ರವಾಸಿ ಟ್ಯಾಕ್ಸಿಗಳ ಸಂಖ್ಯೆ ಈ ಕೆಳಕಂಡಂತಿರುತ್ತದೆ. (ಕೆಳಗಿನ ಕೋಷ್ಟಕ ನೋಡಿ) ಫಲಾನುಭವಿಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ | ಪ್ರವಾಸಿ ಟ್ಯಾಕ್ಸಿಗಳಲ್ಲಿ ಯಾವ ಮಾದರಿಯ ವಾಹನಗಳನ್ನು ಖರೀದಿಸಲು ಯೋಜನೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. | ಫಲಾನುಭವಿಗಳು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಲು ಅವಕಾಶವಿರುತ್ತದೆ. |
| ಇ | ಕಳೆದ ಮೂರು ವರ್ಷಗಳಲ್ಲಿ ಖರೀದಿಸಲಾದ ವಾಹನಗಳ ಮಾದರಿಗಳು ಯಾವುವು: ಇವುಗಳು ಸಾರಿಗೆ ಇಲಾಖೆಯಲ್ಲಿ ನೊಂದಾಯಿಸಲ್ಪಟ್ಟಿದೆಯೇ: (ವಿವರ ನೀಡುವುದು) | 2017-18, 2018-19 ಮತ್ತು 2019-20ನೇ ಸಾಲಿನಲ್ಲಿ ಖರೀದಿಸಲಾದ ವಾಹನಗಳ ಮಾದರಿಗಳ ವಿವರಗಳು ಅನುಬಂಧದಲ್ಲಿ ಲಗತ್ತಿಸಿದೆ. ಇವುಗಳನ್ನು ಸಾರಿಗೆ ಇಲಾಖೆಯಲ್ಲಿ ನೊಂದಾಯಿಸಲ್ಪಟ್ಟಿದೆ |
| ಈ | ಮಂಜೂರು ಮಾಡಲಾದ ಮಾದರಿಯ ವಾಹನಗಳನ್ನು ಹೊರತುಪಡಿಸಿ ಬೇರೆ ಮಾದರಿಯ ವಾಹನಗಳನ್ನು ಖರೀದಿಸುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೆ: ಹಾಗಿದ್ದಲ್ಲಿ, ಇದಕ್ಕೆ ಅವಕಾಶವಿದೆಯೇ: | ಫಲಾನುಭವಿಗಳು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಲು ಅವಕಾಶವಿರುತ್ತದೆ. |
| ಉ | ಹಾಗಿದ್ದಲ್ಲಿ, ಇದಕ್ಕೆ ಅವಕಾಶವಿದೆಯೇ: ಈ ಅಕ್ರಮಕ್ಕೆ ಕಡಿವಾಣ ಹಾಕಲು ಕೈಗೊಂಡ ಕ್ರಮಗಳೇನು? | |

| ವರ್ಷ | SC | ST | OBC |
|---|---|---|---|
| 2017-18 | 13 | 06 | 17 |
| 2018-19 | 10 | 05 | 07 |
| 2019-20 | 05 | 02 | 06 |
| Total | 28 | 13 | 30 |

ಸಂಖ್ಯೆ: ಟಿಓಆರ್ 177 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1046 |
| ಸದಸ್ಯರ ಹೆಸರು | : ಡಾ|| ಶ್ರೀನಿವಾಸಮೂರ್ತಿ ಕೆ. (ನೆಲಮಂಗಲ) |
| ಉತ್ತರಿಸಬೇಕಾದ ದಿನಾಂಕ | : 23-09-2020. |
| ಉತ್ತರಿಸುವ ಸಚಿವರು | : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಿಂದ ನೆಲಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಅಲ್ಪಸಂಖ್ಯಾತರರು ವಾಸಿಸುವ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ (ಕಾಮಗಾರಿಗಳ ಸಹಿತ ಮಾಹಿತಿ ನೀಡುವುದು); | ಕಳೆದ ಮೂರು ವರ್ಷಗಳಲ್ಲಿ ನೆಲಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಅಲ್ಪಸಂಖ್ಯಾತರು ವಾಸಿಸುವ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಬಿಡುಗಡೆ ಮಾಡಿರುವ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತದೆ.<br>(see table below)<br>(ಅನುಬಂಧ-A ಲಗತ್ತಿಸಿದೆ) |
| ಆ | ನೆಲಮಂಗಲ ವಿಧಾನಸಭಾ ಕ್ಷೇತ್ರದಲ್ಲಿ ಎಷ್ಟು ಅಲ್ಪಸಂಖ್ಯಾತರರು ವಾಸ ಮಾಡುವ ಪ್ರದೇಶಗಳನ್ನು ಗುರುತಿಸಲಾಗಿದೆ (ಮಾಹಿತಿ ಒದಗಿಸುವುದು); | ಗುರುತಿಸುವ ಕ್ರಮ ಪ್ರಗತಿಯಲ್ಲಿರುತ್ತದೆ. |
| ಇ | ನೆಲಮಂಗಲ ವಿಧಾನಸಭಾ ಕ್ಷೇತ್ರದಲ್ಲಿರುವ ಅಲ್ಪಸಂಖ್ಯಾತರ ಜನಸಂಖ್ಯೆ ಎಷ್ಟು (ಗ್ರಾಮವಾರು ಮಾಹಿತಿ ಒದಗಿಸುವುದು); | 2011ರ ಜನಗಣತಿಯ ಪ್ರಕಾರ ನೆಲಮಂಗಲ ತಾಲ್ಲೂಕಿನಲ್ಲಿ 18,743 ಜನಸಂಖ್ಯೆಯಿದ್ದು, ಗ್ರಾಮವಾರು ಮಾಹಿತಿ ಸಂಗ್ರಹಿಸುವ ಕ್ರಮ ಜಾರಿಯಲ್ಲಿರುತ್ತದೆ. |
| ಈ | ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಿಂದ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ವಿವಿಧ ಯೋಜನೆಯಡಿ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ (ಯೋಜನೆವಾರು ಮಾಹಿತಿ ಒದಗಿಸುವುದು); | ವಿವರಗಳನ್ನು ಅನುಬಂಧ-B ರಲ್ಲಿ ನೀಡಲಾಗಿದೆ. |
| ಉ | ನೆಲಮಂಗಲ ವಿಧಾನಸಭಾ ಕ್ಷೇತ್ರದಲ್ಲಿರುವ ಮಸೀದಿ, ಹಜ್‌ಭವನ, ಚರ್ಚ್‌ಗಳ ಅಭಿವೃದ್ಧಿ ಮಾಡುವ ಪ್ರಸ್ತಾವನೆ ಸರ್ಕಾರದ ಹಂತದಲ್ಲಿದಿಯೇ; ಹಾಗಾದರೆ ಪ್ರಸ್ತಾವನೆ ಬಂದಿದ್ದರೆ ಯಾವ ಹಂತದಲ್ಲಿದೆ; | ಇವ್ಯಾಂಜಲಿಕಲ್ ಚರ್ಚ್ ಆಫ್ ಇಂಡಿಯಾ ನೆಲಮಂಗಲ ಚರ್ಚ್‌ನ ಸಮುದಾಯ ಭವನ ಕಟ್ಟಡ ನಿರ್ಮಾಣಕ್ಕೆ ಸರ್ಕಾರದಿಂದ ಒಟ್ಟು ರೂ.50.00 ಲಕ್ಷ ಅನುದಾನ ಮಂಜೂರು ಮಾಡಿ 2018-19ನೇ ಸಾಲಿನಲ್ಲಿ ಮೊದಲನೇ ಕಂತಾಗಿ ರೂ.25.00 ಲಕ್ಷ ಬಿಡುಗಡೆ ಮಾಡಿದ್ದು, ಉಳಿದ ಬಾಕಿ ಅನುದಾನ ರೂ.25.00 ಲಕ್ಷ ಬಿಡುಗಡೆ ಮಾಡಲು ಅಲ್ಪಸಂಖ್ಯಾತರ ನಿರ್ದೇಶನಾಲಯಕ್ಕೆ ದಿನಾಂಕ: 02-12-2019 ರಂದು ಮಾನ್ಯ ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸಲ್ಲಿಸಲಾಗಿದೆ.<br>ನೆಲಮಂಗಲ ವಿಧಾನಸಭಾ ಕ್ಷೇತ್ರದಲ್ಲಿರುವ ಮಸೀದಿ ಅಭಿವೃದ್ಧಿ ಮಾಡುವ ಪ್ರಸ್ತಾವನೆಯು ಪರಿಶೀಲನಾ ಹಂತದಲ್ಲಿದೆ. |
| ಊ | ಅಲ್ಪಸಂಖ್ಯಾತರ ಇಲಾಖೆಯಿಂದ ಯಾವ ಯೋಜನೆಗಳು ಜಾರಿಯಲ್ಲಿವೆ; ಜಾರಿಯಲ್ಲಿರುವ ಯೋಜನೆಗಳಿಗೆ ಇರುವ ಮಾನದಂಡಗಳೇನು? (ವಿವರ ನೀಡುವುದು) | ಅಲ್ಪಸಂಖ್ಯಾತರ ಇಲಾಖೆಯಿಂದ ಜಾರಿಯಲ್ಲಿರುವ ಯೋಜನೆಗಳು ಹಾಗೂ ಜಾರಿಯಲ್ಲಿರುವ ಯೋಜನೆಗಳ ಮಾನದಂಡಗಳನ್ನು ಅನುಬಂಧ-C ರಲ್ಲಿ ಲಗತ್ತಿಸಿದೆ. |

| ವರ್ಷ | ಬಿಡುಗಡೆ ಮಾಡಿರುವ ಅನುದಾನ (ರೂ.ಲಕ್ಷಗಳಲ್ಲಿ) |
|---|---|
| 2017-18 | 50.00 |
| 2018-19 | 825.00 |
| 2019-20 | 200.00 |

ಸಂಖ್ಯೆ: ಎಂಡಬ್ಲ್ಯೂಡಿ 89 ಎಲ್‌ಎಂಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1049 |
| ಸದಸ್ಯರ ಹೆಸರು | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಕಳೆದ ಮುರು ವರ್ಷಗಳಲ್ಲಿ ನಾಗಮಂಗಲ ಕ್ಷೇತ್ರ ವ್ಯಾಪ್ತಿಯಲ್ಲಿ ಮುಖ್ಯಮಂತ್ರಿಗಳ ಗ್ರಾಮ ವಿಕಾಸ ಯೋಜನೆಯಡಿಯಲ್ಲಿ ಮಂಜೂರಾದ ಕಾಮಗಾರಿಗಳೆಷ್ಟು; (ವಿವರ ನಿಡುವುದು) | 2017-18ನೇ ಸಾಲಿನಿಂದ ಪ್ರಾರಂಭವಾದ ಮುಖ್ಯ ಮಂತ್ರಿ ಗ್ರಾಮ ವಿಕಾಸ ಯೋಜನೆಯಡಿ ಮಂಡ್ಯ ಜಿಲ್ಲೆ, ನಾಗಮಂಗಲ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 6 ಗ್ರಾಮಗಳನ್ನು ಆಯ್ಕೆ ಮಾಡಲಾಗಿದ್ದು, ಪ್ರತಿ ಗ್ರಾಮಕ್ಕೆ ತಲಾ ರೂ.100.00 ಲಕ್ಷದಂತೆ ಒಟ್ಟು ರೂ.600.00 ಲಕ್ಷಗಳನ್ನು ಹಂಚಿಕೆ ಮಾಡಿ ಸರ್ಕಾರದಿಂದ ಇದುವರೆಗೂ ರೂ.399.66 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮಂಜೂರಾದ ಕಾಮಗಾರಿಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |
| ಆ. | ಮಂಜೂರಾದ ಕಾಮಗಾರಿಗಳು ಯಾವ ಹಂತದಲ್ಲಿವೆ ಹಾಗೂ ಇವುಗಳಿಗೆ ಎಷ್ಟು ಅನುದಾನ ವೆಚ್ಚ ಮಾಡಲಾಗಿದೆ; (ಕಾಮಗಾರಿವಾರು ವಿವರ ನೀಡುವುದು) | ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಕಾಮಗಾರಿವಾರು ವೆಚ್ಚ ಭರಿಸಿದ ವಿವರವನ್ನು ಅನುಬಂಧ-2ರಲ್ಲಿ ನೀಡಿದೆ. |
| ಇ. | ಮಂಜೂರಾದ ಕಾಮಗಾರಿಗಳು ಪೂರ್ಣಗೊಳ್ಳದೇ ಕುಂಠಿತವಾಗಲು ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಕಾರಣವಾಗಿರವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ. | ಬಂದಿದ್ದಲ್ಲಿ, ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ವಿರುದ್ಧ ಕಠಿಣ ಕ್ರಮ ತೆಗೆದುಕೊಳ್ಳುವುದೇ? | ಸರ್ಕಾರದ ಗಮನಕ್ಕೆ ಬಂದಲ್ಲಿ ಪರಿಶೀಲಿಸಬೇಕಿದೆ. |

ಕಡತ ಸಂಖ್ಯೆ: ಗ್ರಾಅಪ:ಅಧಿ-07/20/ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1058

ಮಾನ್ಯ ಸದಸ್ಯರ ಹೆಸರು : ಶ್ರೀ. ಲಿಂಗೇಶ್ ಕೆ.ಎಸ್. (ಬೇಲೂರು)

ವಿಷಯ : 'ಯಾತ್ರಸ್ಥಳಗಳ ಅಭಿವೃದ್ಧಿ'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ : 23.09.2020

*****

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>2018-19 ಮತ್ತು 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಯ ವಿಶ್ವ ಪ್ರಸಿದ್ಧ ಯಾತ್ರಾಸ್ಥಳಗಳ ಅಭಿವೃದ್ಧಿ ಮತ್ತು ಯಾತ್ರಿಕರಿಗೆ ಸೌಲಭ್ಯ ಹಾಗೂ ಮೂಲಭೂತ ಸೌಕರ್ಯಗಳಿಗಾಗಿ ಒದಗಿಸಿರುವ ಇಲಾಖಾ ಆಯ-ವ್ಯಯದಲ್ಲಿ ಒದಗಿಸಿರುವ ಅನುದಾನವೆಷ್ಟು (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು);</td><td>ಹಾಸನ ಜಿಲ್ಲೆಗೆ 2018-19 ಮತ್ತು 2019-20ನೇ ಸಾಲಿನಲ್ಲಿ ಮಂಜೂರಾಗಿರುವ ಕಾಮಗಾರಿಗಳ ಅಂದಾಜು ಮೊತ್ತ ಮತ್ತು ಬಿಡುಗಡೆ ಮಾಡಿರುವ ಅನುದಾನದ ವರ್ಷವಾರು ವಿವರ ಕೆಳಗಿನಂತಿದೆ.<br><table><tr><th>ವರ್ಷ</th><th>ಅಂದಾಜು ಮೊತ್ತ</th><th>ಬಿಡುಗಡೆ ಮಾಡಿರುವ ಮೊತ್ತ</th></tr><tr><td>2018-19</td><td>2261.00</td><td>1040.00</td></tr><tr><td>2019-20</td><td>615.00</td><td>203.00</td></tr><tr><td>ಒಟ್ಟು</td><td>2876.00</td><td>1243.00</td></tr></table><br>ತಾಲ್ಲೂಕುವಾರು ವಿವರ ಅನುಬಂಧದಲ್ಲಿ ಒದಗಿಸಿದೆ.</td></tr>
<tr><td>ಆ)</td><td>2018-19 ಮತ್ತು 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಯ ವಿಶ್ವ ಪ್ರಸಿದ್ಧ ಯಾತ್ರಾಸ್ಥಳಗಳ ಅಭಿವೃದ್ಧಿ ಮತ್ತು ಯಾತ್ರಿಕರಿಗೆ ಸೌಲಭ್ಯ ಹಾಗೂ ಮೂಲಭೂತ ಸೌಕರ್ಯಗಳಿಗಾಗಿ ಇಲಾಖಾ ಆಯ-ವ್ಯಯದಲ್ಲಿ ಒದಗಿಸಲಾಗಿದ್ದ ಅನುದಾನವನ್ನು ಬದಲಾವಣೆ ಮಾಡಿ ಈ ಅನುದಾನವನ್ನು ಇತರೆ ಜಿಲ್ಲೆಗಳಿಗೆ ವರ್ಗಾಯಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು)</td><td rowspan="3">ಇಲಾಖೆಗೆ ಒದಗಿಸುವ ಅನುದಾನದಲ್ಲಿ ಪ್ರವಾಸಿ ತಾಣಗಳಲ್ಲಿ ಅತ್ಯಾವಶ್ಯಕವಾಗಿ ಒದಗಿಸಬೇಕಾಗಿರುವ ಮೂಲಭೂತ ಸೌಲಭ್ಯ ಕಾಮಗಾರಿಗಳಿಗಾಗಿ ಅಗತ್ಯತೆಯ ಆಧಾರದ ಮೇಲೆ ಅನುದಾನವನ್ನು ಬಳಸಲಾಗುತ್ತದೆ.</td></tr>
<tr><td>ಇ)</td><td>ಸದರಿ ಜಿಲ್ಲೆಗೆ ಯಾತ್ರಿಕರ ಸೌಲಭ್ಯಕ್ಕೆ ಮತ್ತು ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ನೀಡಿದ ಅನುದಾನವನ್ನು ಬೇರೆಕಡೆಗೆ ಬದಲಾಯಿಸುವುದು ನಿಜವೇ (ಸಂಪೂರ್ಣ ಮಾಹಿತಿ ನೀಡುವುದು);</td></tr>
<tr><td>ಈ)</td><td>2020-21ನೇ ಸಾಲಿನಲ್ಲಿ ಪ್ರವಾಸೋದ್ಯಮ ಇಲಾಖೆಗೆ ನೀಡುವ ಇಲಾಖಾ ಅನುದಾನದಲ್ಲಿ ಬದಲಾವಣೆ ಮಾಡಿರುವ ಕಾಮಗಾರಿಗಳಿಗೆ ಅಗತ್ಯ ಇರುವ ಅನುದಾನವನ್ನು ಅಳವಡಿಸಿ ಪ್ರವಾಸೋದ್ಯಮ ಇಲಾಖೆಗೆ ಯಾತ್ರಿಕರ ಸೌಲಭ್ಯ ಮತ್ತು ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸೂಕ್ತ ಆದೇಶ ನೀಡಲಾಗುವುದೇ (ಸಂಪೂರ್ಣ ಮಾಹಿತಿ ನೀಡುವುದು)?</td></tr>
</table>

**ಸಂಖ್ಯೆ: ಟಿಓಆರ್ 180 ಟಿಡಿವಿ 2020**

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1052

ಉತ್ತರಿಸಬೇಕಾದ ದಿನಾಂಕ : 23.09.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿ ಪಶುಸಂಗೋಪನಾ ಇಲಾಖಾ ವ್ಯಾಪ್ತಿಯ ಕೇಂದ್ರ ಹಾಗೂ ರಾಜ್ಯ ಪುರಸ್ಕೃತ ಯೋಜನೆಗಳ ಅನುಷ್ಠಾನ ಕುರಿತಾದ ವಿವರಗಳೇನು ? | ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ ಪ್ರಸಕ್ತ ಸಾಲಿನಲ್ಲಿ ಅನುಷ್ಠಾನಗೊಳಿಸುತ್ತಿರುವ ರಾಜ್ಯವಲಯ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳ ವಿವರವನ್ನು ಅನುಬಂಧ (1) ರಲ್ಲಿ ನೀಡಲಾಗಿದೆ. |
| ಆ | ಪಶುಸಂಗೋಪನೆಯನ್ನು ಆದಾಯದ ಮೂಲವಾಗಿ ಜನರು ಪರಿಗಣಿಸಿ ತಮ್ಮ ವ್ಯಾಪ್ತಿಯಲ್ಲಿ ಸುಲಭ ಮತ್ತು ಸರಳ ರೀತ್ಯಾ ಸಾಧ್ಯವೆನಿಸುವ ಪಶುಸಂಗೋಪನಾ ಇಲಾಖೆಯಡಿಯಲ್ಲಿನ ಉದ್ದೇಶಿತ ಯೋಜನಾ ಸೌಲಭ್ಯ / ಸೌಕರ್ಯಗಳನ್ನು ಮತ್ತು ಆಧುನಿಕ ವ್ಯವಸ್ಥೆಗಳೊಂದಿಗೆ ತೊಡಗಿಸಿಕೊಂಡು ಸಣ್ಣ ಪ್ರಮಾಣದಲ್ಲಾದರೂ ಆರ್ಥಿಕ ಬಲ ಹೊಂದಲು ಇಲಾಖೆಯು ಜನರಲ್ಲಿ ಅರಿವು ಮೂಡಿಸುವ ಕುರಿತು ಕೈಗೊಂಡ ಕ್ರಮಗಳು ಯಾವುವು ? | ಪಶುಸಂಗೋಪನೆಯನ್ನು ಆದಾಯದ ಮೂಲವಾಗಿ ಜನರು ಪರಿಗಣಿಸಿ ಆರ್ಥಿಕವಾಗಿ ಬಲ ಹೊಂದಲು ಇಲಾಖೆಯಲ್ಲಿರುವ ಅರಿವು ಮೂಡಿಸುವ ಕಾರ್ಯಕ್ರಮಗಳು<br>1) ರೈತರಿಗೆ ವೈಜ್ಞಾನಿಕ ಪಶುಪಾಲನಾ ಪದ್ಧತಿಗಳು ಮತ್ತು ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳ ಬಗ್ಗೆ ತರಬೇತಿ.<br>2) ಪಶು ಆರೋಗ್ಯ ಮತ್ತು ಬರಡು ರಾಸುಗಳ ಚಿಕಿತ್ಸಾ ಶಿಬಿರಗಳು<br>3) ಕರುಗಳ ಪ್ರದರ್ಶನ ಮತ್ತು ಹಾಲುಕರೆಯುವ ಸ್ಪರ್ಧೆ ಏರ್ಪಡಿಸುವುದು.<br>4) ಪಶುಮೇಳ<br>5) ಸಾಂಕ್ರಾಮಿಕ ರೋಗಗಳ ವಿರುದ್ಧ ಲಸಿಕಾ ಕಾರ್ಯಕ್ರಮಗಳು<br>6) ಕಿಸಾನ್ ಸಂಪರ್ಕ ಸಭೆಗಳು<br>7) ಜಾನುವಾರು ವಿಮೆ<br>8) ಹಾಲು ಉತ್ಪಾದಕರಿಗೆ ಪ್ರೋತ್ಸಾಹಧನ ವಿತರಣೆ |
| ಇ | ಕಳೆದ ಮೂರು ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ಮಂಜೂರಾದ ಅನುದಾನದ ಮೊತ್ತ ಮತ್ತು ಯೋಜನಾ ಸೌಲಭ್ಯಗಳು ಯಾವುವು? | ಕಳೆದ ಮೂರು ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ಮಂಜೂರಾದ ಅನುದಾನದ ಮೊತ್ತ ಮತ್ತು ಯೋಜನಾ ವಿವರವನ್ನು ಅನುಬಂಧ(2) ರಲ್ಲಿ ನೀಡಲಾಗಿದೆ. |

ಪಸಂಮೀ ಇ-232 ಸಲವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1073

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್.

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ರಾಜ್ಯದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಯಡಿ ಯುವಜನ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು ಯಾವುವು. (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಯಡಿ ಯುವಜನ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. |
| 2 | ರಾಜ್ಯದಲ್ಲಿ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಅನುದಾನದಲ್ಲಿ ವಿವಿಧ ಯೋಜನೆಯಡಿಯಲ್ಲಿ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಒದಗಿಸಿರುವ ಅನುದಾನವೆಷ್ಟು (ವಿಧಾನ ಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | (ರೂ ಲಕ್ಷಗಳಲ್ಲಿ) (see table below) |
| 3 | ವಿವಿಧ ಯೋಜನೆಗಳಡಿಯಲ್ಲಿ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ನೀಡಿರುವ ಸಹಾಯಧನವನ್ನು ಯಾವ ಯೋಜನೆ ಅಡಿಯಲ್ಲಿ, ಎಷ್ಟು ಜನರಿಗೆ ಹಾಗೂ ಎಷ್ಟು ಸಂಘ ಸಂಸ್ಥೆಗಳಿಗೆ/ನಾಟಕ ಮಂಡಳಿಗಳಿಗೆ ಸಹಾಯಧನ ನೀಡಿದೆ? (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ವಿವಿಧ ಯೋಜನೆಗಳಡಿಯಲ್ಲಿ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ನೀಡಿರುವ ಸಹಾಯಧನದ ವಿವರಗಳನ್ನು **ಅನುಬಂಧ- 2**ರಲ್ಲಿ ಒದಗಿಸಿದೆ. |

(ರೂ ಲಕ್ಷಗಳಲ್ಲಿ)

| ವರ್ಷ | 2017-18ನೇ ಸಾಲಿಗೆ ಒದಗಿಸಿರುವ ಅನುದಾನ | 2018-19ನೇ ಸಾಲಿಗೆ ಒದಗಿಸಿರುವ ಅನುದಾನ | 2019-20ನೇ ಸಾಲಿಗೆ ಒದಗಿಸಿರುವ ಅನುದಾನ |
|---|---|---|---|
| | 21547.00 | 16370.00 | 18640.64 |
| ಜಿಲ್ಲಾ ಪಂಚಾಯತ್ ವಲಯ | 4326.00 | 5053.00 | 5735.70 |
| ಒಟ್ಟು ಮೊತ್ತ | **25873.00** | **21423.00** | **24376.34** |

**ವೈಎಸ್ ಡಿ-/ಇಬಿಬಿ/81/2020**

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ – 1077
ಉತ್ತರಿಸಬೇಕಾದ ದಿನಾಂಕ – 23–09–2020
ಸದಸ್ಯರ ಹೆಸರು – ಶ್ರೀ. ರಿಜ್ವಾನ್ ಅರ್ಷದ್ (ಶಿವಾಜಿನಗರ)
ಉತ್ತರಿಸುವ ಸಚಿವರು – ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಲ್ಪಸಂಖ್ಯಾತರಕಲ್ಯಾಣ ಇಲಾಖೆಯಡಿಯಲ್ಲಿ ಈ ಹಿಂದೆ ಪ್ರಾರಂಭಿಸಲಾದ ಮೌಲಾನಾ ಆಜಾದ್ ಮಾದರಿ ಶಾಲೆಗಳಲ್ಲಿ ಪ್ರವೇಶ ಪಡೆದಿರುವ ಮಕ್ಕಳ ಸಂಖ್ಯೆ ಎಷ್ಟು; (ಜಿಲ್ಲಾವಾರು, ಶಾಲಾವಾರು ಮಾಹಿತಿ ನೀಡುವುದು) | ಮಾಹಿತಿಯನ್ನು ಅನುಬಂಧ (1) ಹಾಗೂ ಅನುಬಂಧ (2) ರಲ್ಲಿ ಲಗತ್ತಿಸಿದೆ. |
| ಆ) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ 200 ಹೊಸದಾಗಿ ಮೌಲಾನಾ ಆಜಾದ್ ಮಾದರಿ ಶಾಲೆಗಳ ಪ್ರಾರಂಭಮಾಡುವ ಬಗ್ಗೆ ಪ್ರಸ್ತಾವನೆ ಇದ್ದು, ಸದರಿ ಶಾಲೆಗಳನ್ನು ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮವೇನು;(ಮಾಹಿತಿ ನೀಡುವುದು) | 2017–18 ನೇ ಸಾಲಿನಲ್ಲಿ 100 ಮೌಲಾನಾ ಆಜ಼ಾದ್ ಮಾದರಿ ಶಾಲೆಗಳು ಹಾಗೂ 2018–19 ನೇ ಸಾಲಿನಲ್ಲಿ 100 ಮೌಲಾನಾ ಆಜ಼ಾದ್ ಮಾದರಿ ಶಾಲೆಗಳು ಸೇರಿ ಒಟ್ಟು 200 ಶಾಲೆಗಳನ್ನು ಈಗಾಗಲೇ ಪ್ರಾರಂಭಿಸಲಾಗಿದ್ದು, ಹೊಸದಾಗಿ ಮೌಲಾನಾ ಆಜ಼ಾದ್ ಮಾದರಿ ಶಾಲೆಗಳ ಪ್ರಾರಂಭ ಮಾಡುವ ಕುರಿತು ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | ಸದರಿ ಶಾಲೆಗಳನ್ನು ಪ್ರಾರಂಭ ಮಾಡಲು ಸರ್ಕಾರಕ್ಕೆ ಇರುವ ತೊಂದರೆಯೇನು; ಈ ಶಾಲೆಗಳನ್ನು ಯಾವಾಗ ಪ್ರಾರಂಭಿಸಲಾಗುವುದು? (ಪೂರ್ಣ ವಿವರ ನೀಡುವುದು) | |

ಸಂಖ್ಯೆ:MWD 96 LMQ 2020

(ಶ್ರೀಮಂತ ಬಾಳಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1102

ಮಾನ್ಯ ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ)

ವಿಷಯ : 'ಪ್ರವಾಸೋದ್ಯಮ ಇಲಾಖೆಯ ವಾರ್ಷಿಕ ಅನುದಾನ'

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

ಉತ್ತರಿಸುವ ದಿನಾಂಕ: : 23-09-2020.

****

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪ್ರವಾಸೋದ್ಯಮ ಇಲಾಖೆಗೆ ನಿಗಧಿಪಡಿಸಿದ ವಾರ್ಷಿಕ ಅನುದಾನವೆಷ್ಟು; ಕಳೆದ 3 ವರ್ಷಗಳಲ್ಲಿ ಯಾವ ತಾಲ್ಲೂಕಿಗೆ ಎಷ್ಟೆಷ್ಟು ಅನುದಾನ ಬಿಡುಗಡೆಗೊಳಿಸಲಾಗಿದೆ (ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆಗೆ 2020-21ನೇ ಸಾಲಿನಲ್ಲಿ ರೂ.275.85 ಕೋಟಿ ಅನುದಾನವನ್ನು ಒದಗಿಸಲಾಗಿದೆ.<br><br>ರಾಜ್ಯದ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಮೂಲಸೌಕರ್ಯಗಳನ್ನು ಅಭಿವೃದ್ಧಿ ಪಡಿಸುವ ಸಲುವಾಗಿ ಕಳೆದ 3 ವರ್ಷಗಳಲ್ಲಿ ತಾಲ್ಲೂಕುವಾರು ಬಿಡುಗಡೆ ಮಾಡಿರುವ ಅನುದಾನದ ವಿವರವನ್ನು ಅನುಬಂಧ-1 ಮತ್ತು ಅನುಬಂಧ-2 ರಲ್ಲಿ ಒದಗಿಸಿದೆ. |
| ಆ) | ಚಿತ್ರದುರ್ಗ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ವರ್ಷವಾರು ನೀಡಿದ ಅನುದಾನವೆಷ್ಟು (ತಾಲ್ಲೂಕುವಾರು ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆಯಿಂದ ಚಿತ್ರದುರ್ಗ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆ ಮಾಡಿರುವ ಅನುದಾನದ ವಿವರವನ್ನು ಅನುಬಂಧ-3ರಲ್ಲಿ ಒದಗಿಸಿದೆ. |
| ಇ) | ಹೊಸದುರ್ಗ ತಾಲ್ಲೂಕಿನ ವಾಣಿವಿಲಾಸ ಜಲಾಶಯದ ಹಿನ್ನೀರಿನ ಪ್ರದೇಶ ವ್ಯಾಪ್ತಿಯ ದ್ವೀಪಗಳ ಅಭಿವೃದ್ಧಿ ಹಾಗೂ ಶಿರನಹಟ್ಟಿ ಹತ್ತಿರ ಪ್ರವಾಸಿ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಲಾಗುವುದೇ? | ಹೊಸದುರ್ಗ ತಾಲ್ಲೂಕಿನ ವಾಣಿವಿಲಾಸ ಜಲಾಶಯದ ಹಿನ್ನೀರಿನ ಪ್ರದೇಶದ ವ್ಯಾಪ್ತಿಯ ದ್ವೀಪಗಳ ಅಭಿವೃದ್ಧಿ ಹಾಗೂ ಶಿರನಹಟ್ಟಿ ಹತ್ತಿರ ಪ್ರವಾಸಿ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವ ಸಂಬಂಧ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಚಿತ್ರದುರ್ಗ ಇವರಿಂದ ಹೊಸದುರ್ಗ ತಾಲ್ಲೂಕು ಮಾಡದಕೆರೆ ಹೋಬಳಿ ಶೀರನಕಟ್ಟೆ ಗ್ರಾಮದ ಸರ್ವೆ ನಂ.39ರಲ್ಲಿ 09 ಎಕರೆ 38ಗುಂಟೆ ಹಾಗೂ ಸರ್ವೆ ನಂ.40ರಲ್ಲಿ 09 ಎಕರೆ 38ಗುಂಟೆ ಜಮೀನನಲ್ಲಿ ಗ್ರಾಮೀಣ ಪ್ರವಾಸಿ ತಾಣವನ್ನಾಗಿ ಅಭಿವೃದ್ಧಿ ಪಡಿಸಲು ದಿನಾಂಕ:24.08.2020ರಂದು ಇಲಾಖೆಗೆ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ.<br><br>ಆದರೆ, ಪ್ರಸಕ್ತ ಆರ್ಥಿಕ ಸಾಲಿನಲ್ಲಿ ಬಂಡವಾಳ ವೆಚ್ಚಗಳ ಲೆಕ್ಕಶೀರ್ಷಿಕೆ ಅಡಿಯಲ್ಲಿ ರೂ.20.00 ಕೋಟಿ ಅನುದಾನವನ್ನು ನಿಗಧಿಪಡಿಸಿದ್ದು, ಈ ಅನುದಾನವನ್ನು ಮುಂದುವರೆದ ಯೋಜನೆಗಳಿಗೆ ಉಪಯೋಗಿಸಿ ಕೊಳ್ಳಬೇಕಾಗಿದ್ದು, ಅನುದಾನದ ಕೊರತೆ ಇರುವ ಕಾರಣ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಟಿಓಆರ್ 176 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1104

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಯುವಜನ ಸೇವಾ ಕ್ರೀಡಾ ಇಲಾಖೆಗೆ ನಿಗದಿಪಡಿಸಿದ ವಾರ್ಷಿಕ ಅನುದಾನವೆಷ್ಟು: ಇದರಲ್ಲಿ ಎಷ್ಟು ಬಿಡುಗಡೆಯಾಗಿದೆ. : ಎಷ್ಟು ಖರ್ಚಾಗಿದೆ : ಹಾಗೂ ಯಾವುದಕ್ಕೆ ವಿನಿಯೋಗಿಸಲಾಗಿದೆ (ಕಳೆದ 3 ವರ್ಷಗಳ ವಿವರ ನೀಡುವುದು) | ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ವರ್ಷವಾರು ಕ್ರೀಡಾ ಇಲಾಖೆಗೆ ಖರ್ಚಾಗುವ ಅನುದಾನವೆಷ್ಟು ; ಯುವಜನ ಸೇವೆ (ಯುವಕ – ಯುವತಿಯರ) ಕಾರ್ಯಕ್ರಮಗಳಿಗೆ ನಿಗದಿಪಡಿಸಿ ಖರ್ಚಾಗುವ ಅನುದಾನವೆಷ್ಟು ? (ವರ್ಷವಾರು ವಿವರ ನೀಡುವುದು) | ವರ್ಷವಾರು ಕ್ರೀಡಾ ಇಲಾಖೆಗೆ ಖರ್ಚಾಗಿರುವ ಅನುದಾನದ ವಿವರವನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br><br>ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಯುವಜನ ಸೇವೆ (ಯುವಕ – ಯುವತಿಯರ) ಕಾರ್ಯಕ್ರಮಗಳಿಗೆ ಕಾರ್ಯಕ್ರಮವಾರು ನಿಗದಿಪಡಿಸಿದಂತೆ ಖರ್ಚು ಮಾಡಲಾದ ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |

**ವೈಎಸ್ ಡಿ-/ಇಬಿಬಿ/89/2020**

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: : 1107
ಉತ್ತರ ದಿನಾಂಕ : 23.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಹಾಸನ ಜಿಲ್ಲೆಯಲ್ಲಿ ಈವರೆಗೆ ಅನುಮೋದನೆ ಆಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳೆಷ್ಟು; (ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆಯಲ್ಲಿ ಈವರೆಗೆ ಒಟ್ಟು 525 ಶುದ್ಧ ಕುಡಿಯುವ ನೀರಿನ ಘಟಕಗಳು ಅನುಮೋದನೆಯಾಗಿರುತ್ತವೆ. ಕ್ಷೇತ್ರವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ. | ಎಷ್ಟು ಘಟಕಗಳು ಕಾರ್ಯನಿರ್ವಹಿಸುತ್ತಿವೆ, ಹಾಗೂ ಎಷ್ಟು ಘಟಕಗಳು ದುರಸ್ತಿಯಲ್ಲಿವೆ, (ಕಾರಣಗಳೊಂದಿಗೆ ಮಾಹಿತಿ ನೀಡುವುದು) | 440 ಶುದ್ಧ ಕುಡಿಯುವ ನೀರಿನ ಘಟಕಗಳು ಕಾರ್ಯನಿರ್ವಹಿಸುತ್ತಿವೆ. 65 ಘಟಕಗಳ ಟೆಂಡರ್ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ.<br>ಅರಸೀಕೆರೆ ತಾಲ್ಲೂಕಿನ ದುರಸ್ಥಿಯಲ್ಲಿರುವ 9 ಘಟಕಗಳನ್ನು ಸರಿಪಡಿಸಲು ಟೆಂಡರ್ ಮುಖೇನ Sri Rakshith M.D.(M/S.Aquashine Technologies, Bangalore ಸಂಸ್ಥೆಗೆ ವಹಿಸಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಉಳಿದಂತೆ 2 ಘಟಕಗಳಿಗೆ ವಿದ್ಯುತ್ ಪೂರೈಕೆಯಲ್ಲಿ ತೊಂದರೆಯಿಂದ ಸ್ಥಗಿತವಾಗಿರುತ್ತದೆ ಮತ್ತು 1 ಘಟಕವನ್ನು ಸ್ಥಾಪಿಸಿದ ಗುತ್ತಿಗೆದಾರರಿಂದ ಸರಿಪಡಿಸಲು ಕ್ರಮಜರುಗಿಸಲಾಗಿದೆ.<br>ಬೇಲೂರು ತಾಲ್ಲೂಕಿನ 2 ಘಟಕಗಳಿಗೆ ವಿದ್ಯುತ್ ಪೂರೈಕೆಯಲ್ಲಿ ತೊಂದರೆಯಿಂದ ಸ್ಥಗಿತವಾಗಿರುತ್ತದೆ ಮತ್ತು 1 ಘಟಕವನ್ನು ಸ್ಥಾಪಿಸಿದ ಗುತ್ತಿಗೆದಾರರಿಂದ ಸರಿಪಡಿಸಲು ಕ್ರಮಜರುಗಿಸಲಾಗಿದೆ. |
| ಇ. | 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಗೆ ದಿನಾಂಕ:07.03.2019ರಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿರುವುದು ನಿಜವೇ, ಮಂಜೂರಾಗಿದ್ದಲ್ಲಿ ಯಾವ ಹಂತದಲ್ಲಿದೆ: | 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಗೆ ದಿನಾಂಕ:07.03.2019ರಲ್ಲಿ ಶುದ್ಧ 65 ಕುಡಿಯುವ ನೀರಿನ ಘಟಕಗಳು ಮಂಜೂರಾಗಿರುತ್ತವೆ. ಸದರಿ ಘಟಕಗಳ ಸ್ಥಾಪನೆಗೆ ಜಲಮೂಲ ಪರೀಕ್ಷಾ ವರದಿಯನ್ನು ಪಡೆಯುವ ಹಂತದಲ್ಲಿದೆ. |
| ಈ. | ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು ಇ-ಪ್ರಕ್ಯೂರ್‌ಮೆಂಟ್‌ಗಳ ಮೂಲಕ ಟೆಂಡರ್ ಕರೆದಿರುವುದು ನಿಜವೇ: ಎಷ್ಟು ಅರ್ಹ ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿದ್ದರು: (ಸಂಪೂರ್ಣ ಮಾಹಿತಿ ನೀಡುವುದು) | ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಕರೆಯಲಾಗಿರುತ್ತದೆ. ಸದರಿ ಟೆಂಡರ್‌ನಲ್ಲಿ ಈ ಕೆಳಕಂಡ ಇಬ್ಬರು ಗುತ್ತಿಗೆದಾರರು ಭಾಗವಹಿಸಿರುತ್ತಾರೆ.<br>1) Sri Rakshith M.D.(M/S.Aquashine Technologies, Bangalore<br>2) Sri Dheeraj (M/s. Dynamic Infotech, Kundapura, Karnataka. |
| ಉ. | 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಗೆ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು ಇ-ಪ್ರಕ್ಯೂರ್‌ಮೆಂಟ್ ಮೂಲಕ ಟೆಂಡರ್ ಕರೆದಿರುವುದನ್ನು ತಡೆಹಿಡಿಯಲಾಗಿದೆಯೇ: ತಡೆಹಿಡಿದಿದ್ದಲ್ಲಿ ಯಾವ ಮಾನದಂಡದ ಅಡಿಯಲ್ಲಿ ತಡೆಹಿಡಿಯಲಾಗಿದೆ, ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸರ್ಕಾರಕ್ಕೆ ಇರುವ ಅಡಚಣೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಗೆ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಕರೆದಿರುವುದನ್ನು ತಡೆಹಿಡಿಯಲಾಗಿರುತ್ತದೆ. ಸದರಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸುವ ಗ್ರಾಮಗಳಲ್ಲಿನ ಜಲ ಮೂಲಗಳ ಪರೀಕ್ಷಾ ವರದಿಯನ್ನು ಆಧರಿಸಿ ಮುಂದಿನ ಕ್ರಮ ಜರುಗಿಸಲಾಗುವುದು. |

ಸಂ:ಗ್ರಾಕುನೀ&ನೈಇ 32 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1119 |
| ಸದಸ್ಯರ ಹೆಸರು | ಶ್ರೀರಘುಪತಿ ಭಟ್ ಕೆ. (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಮಳೆಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆಗಳ ಪುನರ್ ರಚನೆ ಕಾಮಗಾರಿಗೆ ಉಡುಪಿ ಜಿಲ್ಲೆಗೆ ಮಂಜೂರುರಾದ ಅನುದಾವವೆಷ್ಟು; (ಕ್ಷೇತ್ರವಾರು ವಿವರಗಳನ್ನು ಒದಗಿಸುವುದು) | 2019–20ನೇ ನೇ ಸಾಲಿನಲ್ಲಿ ಉಡುಪಿ ಜಿಲ್ಲೆಯ ವ್ಯಾಪ್ತಿಯಲ್ಲಿ ಮಳೆಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆಗಳ ಪುನರ್ ರಚನೆ ಮಾಡಲು ರೂ. 92.13 ಕೋಟಿಗಳ ಅನುದಾನವನ್ನು ಮಂಜೂರು ಮಾಡಲಾಗಿದೆ.<br><br>ವಿಧಾನಸಭಾ ಕ್ಷೇತ್ರವಾರು, ಅನುಷ್ಠಾನ ಸಂಸ್ಥೆವಾರು ಹಾಗೂ ಮಂಜೂರಾತಿ, ಬಿಡುಗಡೆ ಮಾಡಿದ ವಿವರಗಳನ್ನು ಅನುಬಂಧ –1 ರಲ್ಲಿ ಒದಗಿಸಿದೆ. |
| ಆ. | ಕಾಮಗಾರಿಗಳನ್ನು ಯಾವ ಸಂಸ್ಥೆ ಮೂಲಕ ಅನುಷ್ಠಾನಗೊಳಿಸಲಾಗಿದೆ; | ಕಾಮಗಾರಿಗಳನ್ನು ಕೆಆರ್‌ಐಡಿಎಲ್, ಕೆಆರ್‌ಆರ್‌ಡಿಎ ಹಾಗೂ ಪಿಆರ್‌ಇಡಿ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. |
| ಇ. | ಅನುಷ್ಠಾನಗೊಳಿಸಿದ ಸಂಸ್ಥೆಗೆ ಹಣ ಬಿಡುಗೊಳಿಸಲಾಗಿದೆಯೇ; ನಂತರ ಹಣ ಬಿಡುಗಡೆಗೊಳಿಸಲಾಗಿದೆಯೇ; (ಸಂಪೂರ್ಣ ವಿವರ ಒದಗಿಸುವುದು) | ಹೌದು. ಇದರಲ್ಲಿ ರೂ. 76.54 ಕೋಟಿಗಳನ್ನು ಬಿಡುಗಡೆ ಮಾಡಿದೆ. (ವಿವರವನ್ನು ಅನುಬಂಧದಲ್ಲಿ –1 ರಲ್ಲಿ ಲಗತ್ತಿಸಿದೆ). |
| ಈ. | ಪ್ರಸ್ತುತ ಎಷ್ಟು ಕಾಮಗಾರಿಗಳು ಪೂರ್ಣಗೊಂಡಿವೆ ಮತ್ತು ಎಷ್ಟು ಪ್ರಗತಿಯಲ್ಲಿವೆ? (ಸಂಪೂರ್ಣ ವಿವರ ನೀಡುವುದು) | ಕಾಮಗಾರಿಗಳ ಪ್ರಗತಿಯ ಕೆಳಕಂಡಂತೆ ಕೋಷ್ಟಕದಲ್ಲಿ ನೀಡಿದ್ದು, ಕಾಮಗಾರಿಗಳ ಸಂಪೂರ್ಣ ವಿವರಗಳನ್ನು ಅನುಬಂಧ – 2 ರಲ್ಲಿ ಲಗತ್ತಿಸಿದೆ. |

| ಕ್ರ.ಸಂ. | ಅನುಷ್ಠಾನ ಸಂಸ್ಥೆ | ಪೂರ್ಣಗೊಂಡ ಕಾಮಗಾರಿಗಳ ಸಂಖ್ಯೆ | ಪ್ರಗತಿಯಲ್ಲಿರುವ ಕಾಮಗಾರಿಗಳ ಸಂಖ್ಯೆ | ಒಟ್ಟು ಕಾಮಗಾರಿಗಳ ಸಂಖ್ಯೆ |
|---|---|---|---|---|
| 01 | ಪಿಆರ್‌ಇಡಿ | 52 | 18 | 70 |
| 02 | ಕೆಆರ್‌ಆರ್‌ಡಿಎ | 6 | 7 | 13 |
| 03 | ಕೆಆರ್‌ಐಡಿಎಲ್ | 132 | 142 | 274 |
| | | 190.00 | 167.00 | 357.00 |

ಕಡತ ಸಂಖ್ಯೆ: ಗ್ರಾಅಪ:ಅಧಿ07/27:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1121
ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ.
ಉತ್ತರಿಸುವ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ವಿಕಲಚೇತನರು ಮತ್ತು ಹಿರಿಯ ನಾಗರಿಕರ ಸಂಖ್ಯೆ ಎಷ್ಟು; (ಗ್ರಾಮವಾರು ಸಂಪೂರ್ಣ ಹೆಸರು ಮತ್ತು ವಿಳಾಸದೊಂದಿಗೆ ಮಾಹಿತಿ ನೀಡುವುದು) | ಬೈಂದೂರು ವಿಧಾನ ಸಭಾ ಕ್ಷೇತ್ರ ವಿಕಲಚೇತನರ ಸಂಖ್ಯೆ: 2746<br>ಬೈಂದೂರು ವಿಧಾನ ಸಭಾ ಕ್ಷೇತ್ರ ಹಿರಿಯ ನಾಗರಿಕರ ಸಂಖ್ಯೆ: 71<br>ಸಂಪೂರ್ಣ ಮಾಹಿತಿಯನ್ನು ಅನುಬಂಧ 1 ರಲ್ಲಿ ಒದಗಿಸಲಾಗಿದೆ. |
| ಆ | ವಿಕಲಚೇತನರು ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಿಂದ ಜಾರಿಯಲ್ಲಿರುವ ವಿವಿಧ ಯೋಜನೆಗಳಡಿಯಲ್ಲಿ ನೀಡುತ್ತಿರುವ ಸೌಲಭ್ಯಗಳು ಯಾವುವು; ಹಾಗೂ ಫಲಾನುಭವಿಗಳ ಆಯ್ಕೆಯಡಿಯಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ವಿಕಲಚೇತನರು ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಿಂದ ಜಾರಿಯಲ್ಲಿರುವ ವಿವಿಧ ಯೋಜನೆಗಳಡಿಯಲ್ಲಿ ನೀಡುತ್ತಿರುವ ಸೌಲಭ್ಯಗಳ ವಿವರ ಹಾಗೂ ಫಲಾನುಭವಿಗಳ ಆಯ್ಕೆಯಡಿ ಅನುಸರಿಸುತ್ತಿರುವ ಮಾನದಂಡಗಳ ಮಾಹಿತಿಯನ್ನು ಅನುಬಂಧ 02 ರಲ್ಲಿ ಒದಗಿಸಲಾಗಿದೆ. |
| ಇ | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ವಿಕಲಚೇತನರಿಗೆ ಕಳೆದ ಮೂರು ವರ್ಷಗಳಲ್ಲಿ ನೀಡಿದ ವಿವಿಧ ಸೌಲಭ್ಯಗಳಾವುವು? (ಸಂಪೂರ್ಣ ಮಾಹಿತಿ ಒದಗಿಸುವುದು ಹೆಸರು ಮತ್ತು ವಿಳಾಸದೊಂದಿಗೆ ಸಂಪೂರ್ಣ ಮಾಹಿತಿ ಒದಗಿಸುವುದು) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ವಿಕಲಚೇತನರಿಗೆ ಕಳೆದ ಮೂರು ವರ್ಷಗಳಲ್ಲಿ ನೀಡಿದ ವಿವಿಧ ಸೌಲಭ್ಯಗಳ ಸಂಪೂರ್ಣ ಮಾಹಿತಿಯನ್ನು ಅನುಬಂಧ 03 ರಲ್ಲಿ ಒದಗಿಸಲಾಗಿದೆ. |

**ಸಂಖ್ಯೆ: ಮಮಇ 214 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರೀಕರ ಸಬಲೀಕರಣ
ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1728
ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್.
ಉತ್ತರಿಸುವ ದಿನಾಂಕ : 23.09.2020
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಹಿರಿಯ ನಾಗರಿಕರ ಒಟ್ಟು ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | 2011ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಒಟ್ಟು 61095297 ಜನಸಂಖ್ಯೆಯಲ್ಲಿ ಶೇ.9.60ರಷ್ಟು ಜನ 60 ವರ್ಷ ಮೀರಿರುವ ಹಿರಿಯ ನಾಗರಿಕರು ಇರುತ್ತಾರೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧ 01ರಲ್ಲಿ ಒದಗಿಸಲಾಗಿದೆ. |
| ಆ | ಸರ್ಕಾರದಿಂದ ಹಿರಿಯ ನಾಗರಿಕರು ವೃದ್ಧಾಪ್ಯ ವೇತನವನ್ನು ಪಡೆಯಲು ಇರುವ ಮಾನದಂಡಗಳೇನು ಹಾಗೂ ಎಷ್ಟು ಹಿರಿಯ ನಾಗರಿಕರು ವೃದ್ಧಾಪ್ಯ ವೇತನವನ್ನು ಪಡೆಯುತ್ತಿದ್ದಾರೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಸರ್ಕಾರದಿಂದ ಹಿರಿಯ ನಾಗರಿಕರು ವೃದ್ಧಾಪ್ಯ ವೇತನವನ್ನು ಪಡೆಯಲು ಇರುವ ಮಾನದಂಡದ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ ಹಾಗೂ ಅಗಸ್ಟ್ 2020ರ ಅಂತ್ಯಕ್ಕೆ 39,51,594 ಹಿರಿಯ ನಾಗರಿಕರು ವೃದ್ಧಾಪ್ಯ ವೇತನವನ್ನು ಪಡೆಯುತ್ತಿದ್ದು, ಜಿಲ್ಲಾವಾರು ವಿವರವನ್ನು ಅನುಬಂಧ-2ರಲ್ಲಿ ಒದಗಿಸಿದೆ. |
| ಇ | ಹಿರಿಯ ನಾಗರಿಕರಿಗೆ ಒದಗಿಸಲಾಗುತ್ತಿರುವ ವೈದ್ಯಕೀಯ ಸೌಲಭ್ಯಗಳೇನು; | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ 10 ಜಿಲ್ಲೆಗಳ (ಶಿವಮೊಗ್ಗ, ಕೋಲಾರ, ಉಡುಪಿ, ತುಮಕೂರು, ಚಿಕ್ಕಮಗಳೂರು, ಬಾಗಲಕೋಟೆ, ಬೆಳಗಾವಿ, ಧಾರವಾಡ, ವಿಜಯಪುರ, ಕಲಬುರಗಿ) ಜಿಲ್ಲಾಸ್ಪತ್ರೆಗಳಲ್ಲಿ ಹಿರಿಯ ನಾಗರಿಕರಿಗಾಗಿ ಜೀರಿಯಾಟ್ರಿಕ್ ಕೇಂದ್ರಗಳನ್ನು ಪ್ರಾರಂಭಿಸಿದ್ದು, ಸದರಿ ಕೇಂದ್ರಗಳಲ್ಲಿ ಉಚಿತ / ವೈದ್ಯಕೀಯ ಸೌಲಭ್ಯ ಹಾಗೂ ಚಿಕಿತ್ಸೆಗಳನ್ನು ನೀಡಲಾಗುತ್ತಿದೆ. |
| ಈ | ಹಿರಿಯ ನಾಗರಿಕರಿಗೆ ಸರ್ಕಾರದಿಂದ ಒದಗಿಸಲಾಗುತ್ತಿರುವ ಇತರೆ ಸೌಲಭ್ಯಗಳ ವಿವರವಾದ ಮಾಹಿತಿಯನ್ನು ಒದಗಿಸುವುದು? | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ಹಿರಿಯ ನಾಗರಿಕರಿಗೆ ಸರ್ಕಾರದಿಂದ ಒದಗಿಸುತ್ತಿರುವ ಯೋಜನೆಗಳ ವಿವರವನ್ನು ಅನುಬಂಧ-03 ರಲ್ಲಿ ಒದಗಿಸಿದೆ. |

**ಸಂಖ್ಯೆ: ಮಮಇ 218 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರೀಕರ ಸಬಲೀಕರಣ
ಸಚಿವರು.

**ಕರ್ನಾಟಕ ವಿಧಾನ ಸಭೆ**

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1727 |
| **ಸದಸ್ಯರ ಹೆಸರು** | ಶ್ರೀ ಬಸನಗೌಡ ಆರ್. ಪಾಟೀಲ್ ಯತ್ನಾಳ್ (ವಿಜಯಪುರ ನಗರ) |
| **ಉತ್ತರಿಸಬೇಕಾದ ದಿನಾಂಕ** | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಕೈಗೆತ್ತಿಕೊಳ್ಳದ ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಗುತ್ತಿಗೆದಾರರಿಗೆ ನೀಡಲು ಬಾಕಿ ಇರುವ ಹಣ ಎಷ್ಟು; (ಜಿಲ್ಲಾ ವಾರು, ಕಾಮಗಾರಿವಾರು ಮಾಹಿತಿ ನೀಡುವುದು) | ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಗುತ್ತಿಗೆದಾರರಿಗೆ ನೀಡಲು ಬಾಕಿ ಇರುವ ಹಣದ ವಿವರಗಳು ಕೆಳಕಂಡಂತಿವೆ: (see table below) ಜಿಲ್ಲಾವಾರು ಕಾಮಗಾರಿಗಳ ವಿವರ ಅನುಬಂಧ-1 ರಲ್ಲಿ ನೀಡಿದೆ. |
| ಆ. | ಕಳೆದ ಮೂರು ವರ್ಷದಿಂದ ಎಷ್ಟು ಬಾಕಿ ಹಣ ಬಿಡುಗಡೆ ಮಾಡಲಾಗಿದೆ; (ಗುತ್ತಿಗೆದಾರರ ಹೆಸರಿನ ಸಹಿತ ಸಂಪೂರ್ಣ ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ಗುತ್ತಿಗೆದಾರರಿಗೆ ಬಿಡುಗಡೆ ಮಾಡಿದ ಹಣದ ವಿವರ ಕೆಳಕಂಡಂತಿದೆ: (see table below) ಗುತ್ತಿಗೆದಾರರ ಹೆಸರಿನ ಸಹಿತ ಸಂಪೂರ್ಣ ಮಾಹಿತಿಯನ್ನು ಅನುಬಂಧ-2 ರಲ್ಲಿ ನೀಡಿದೆ. |
| ಇ. | ಬಾಕಿ ಹಣವನ್ನು ಬಿಡುಗಡೆ ಮಾಡದಿರಲು ಕಾರಣವೇನು; ಯಾವಾಗ ಬಿಡುಗಡೆ ಮಾಡಲಾಗುವುದು? | ಆರ್ಥಿಕ ಇಲಾಖೆಯು ಸಹಮತಿಸಿದಂತೆ ಅನುದಾನ ಬಿಡುಗಡೆಗೊಳಿಸಲಾಗುತ್ತಿದೆ. ಆರ್ಥಿಕ ಲಭ್ಯತೆಯನ್ನಾಧರಿಸಿ ಅನುದಾನವನ್ನು ಬಿಡುಗಡೆ ಮಾಡಬೇಕಿದೆ. |

ಅ. ಉತ್ತರದ ಕೋಷ್ಟಕ:

| ಕ್ರಸ | ಜಿಲ್ಲೆ | ಬಾಕಿ ಇರುವ ಹಣ (ರೂ.ಲಕ್ಷಗಳಲ್ಲಿ) |
|---|---|---|
| 1 | ವಿಜಯಪುರ | 2284.33 |
| 2 | ಬಾಗಲಕೋಟೆ | 1671.19 |

ಆ. ಉತ್ತರದ ಕೋಷ್ಟಕ:

(ರೂ.ಲಕ್ಷಗಳಲ್ಲಿ)

| ಕ್ರಸ | ಜಿಲ್ಲೆ | 2017-18 | 2018-19 | 2019-20 |
|---|---|---|---|---|
| 1 | ವಿಜಯಪುರ | 558.69 | 559.23 | 610.33 |
| 2 | ಬಾಗಲಕೋಟೆ | - | 367.20 | 1485.45 |

ಕಡತ ಸಂಖ್ಯೆ: ಗ್ರಾಅಪ:ಅಧಿ-07/32:ಆರ್‌ಆರ್‌ಸಿ:2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 438
ಮಾನ್ಯ ಸದಸ್ಯರ ಹೆಸರು : ಶ್ರೀ ಈಶ್ವರ ಖಂಡ್ರೆ (ಭಾಲ್ಕಿ)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖಾ ಸಚಿವರು
ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಇತ್ತೀಚಿನ ಸಮೀಕ್ಷೆಯ ಪ್ರಕಾರ ತೃತೀಯ ಲಿಂಗಿಗಳ (Transgender) ಸಂಖ್ಯೆಯೆಷ್ಟು; ಅವರ ಶ್ರೇಯೋಭಿವೃದ್ಧಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ಒದಗಿಸುವುದು) | 2011ರ ಜನಗಣತಿ ಪ್ರಕಾರ ರಾಜ್ಯದಲ್ಲಿ 20,266 ತೃತೀಯ ಲಿಂಗಿಗಳು (Transgender) ಇರುತ್ತಾರೆ.<br><br>ಕರ್ನಾಟಕ ರಾಜ್ಯ ಟ್ರಾನ್ಸ್‌ಜೆಂಡರ್ ನೀತಿ-2017ನ್ನು ಜಾರಿಗೊಳಿಸಲಾಗಿದೆ. ಇದಕ್ಕೆ ಪೂರಕವಾಗಿ 2020-21ನೇ ಸಾಲಿನ ಆಯವ್ಯಯ ಭಾಷಣದಲ್ಲಿ " ರಾಜ್ಯಾದ್ಯಂತ ತೃತೀಯ ಲಿಂಗಿಗಳ ಮೂಲ ಹಂತದ ಸಮೀಕ್ಷೆಯನ್ನು ರೂ.70.00 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ಉದ್ದೇಶಿಸಿದೆ ಎಂದು ಘೋಷಿಸಲಾಗಿದ್ದು, ಮೂಲ ಹಂತದ ಸಮೀಕ್ಷೆ ನಡೆಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ:-**<br>ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಲಿಂಗತ್ವ ಅಲ್ಪಸಂಖ್ಯಾತರಿಗಾಗಿ ಮನರ್ವಸತಿ ಯೋಜನೆಯನ್ನು 2013-14 ರಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಆದಾಯೋತ್ಪನ್ನಕರ ಚಟುವಟಿಕೆಗಳನ್ನು ಕೈಗೊಳ್ಳಲು ಸದರಿ ಯೋಜನೆಯಡಿ ಪ್ರತಿ ಲಿಂಗತ್ವ ಅಲ್ಪಸಂಖ್ಯಾತರಿಗೆ 2013-14ನೇ ಸಾಲಿನಲ್ಲಿ ನೀಡಲಾಗುತ್ತಿದ್ದ ಸಹಾಯಧನದ ಮೊತ್ತ ರೂ.20,000/- ಗಳನ್ನು ಪರಿಷ್ಕರಿಸಿ 2017-18ನೇ ಸಾಲಿನಿಂದ ರೂ.50,000/- (ರೂ.25,000/- ಸಾಲ ಮತ್ತು ರೂ.25,000/- ಸಹಾಯಧನ) ಗಳ ಆರ್ಥಿಕ ಸೌಲಭ್ಯ ನೀಡಲಾಗುತ್ತಿದೆ.<br>**ಸಾರಿಗೆ ಇಲಾಖೆ:-**<br>ಸಾರಿಗೆ ಇಲಾಖೆಯು ಅರ್ಹ ಟ್ರಾನ್ಸ್‌ಜೆಂಡರ್‌ಸ್‌ರವರಿಗೆ ಚಾಲನಾ ಪರವಾನಗಿಯನ್ನು ನೀಡಲು ಸುತ್ತೋಲೆ ಸಂಖ್ಯೆ ಸಾಆ:ಪ್ರವರ್ತನ:3:ಪಿಆರ್:321:2010-11,ದಿ:27-01-2011 ರ ಮೂಲಕ ಸೂಚಿಸಿರುತ್ತದೆ.<br>**ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ (ಎಂ.ಜಿ.ಎನ್.ಆರ್.ಇ.ಜಿ.ಎ):-**<br>ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ (ಎಂ.ಜಿ.ಎನ್.ಆರ್.ಇ.ಜಿ.ಎ) ಹಾಗೂ ವಿವಿಧ ಜೀವನೋಪಾಯ ಯೋಜನೆಗಳಡಿ ಟ್ರಾನ್ಸ್‌ಜೆಂಡರ್‌ಸ್‌ರವರು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಅಗತ್ಯ ಕ್ರಮ ಕೈಗೊಳ್ಳಲಾಗಿದೆ. |

| | | |
|---|---|---|
| | | **"ಸ್ಯಾಟ್‌ಕಾಮ್" ಕಾರ್ಯಕ್ರಮ:-**<br>ದಿನಾಂಕ 21-01-2019ರಂದು ನಡೆದ "ಸ್ಯಾಟ್‌ಕಾಮ್" ಕಾರ್ಯಕ್ರಮದಲ್ಲಿ 30 ಜಿಲ್ಲೆಗಳ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ, ಟ್ರಾನ್ಸ್‌ಜೆಂಡರ್ಸ್, ಟ್ರಾನ್ಸ್‌ಜೆಂಡರ್ ಮಕ್ಕಳ ಕುರಿತು ತಿಳಿಸಿ ಟ್ರಾನ್ಸ್‌ಜೆಂಡರ್ಸ್ ಮಕ್ಕಳಿಗೆ ಶಾಲೆಗಳಲ್ಲಿ ತಾರತಮ್ಯ ರಹಿತ ವಾತಾವರಣವನ್ನು ಕಲ್ಪಿಸಿ ಅವರ ವಿದ್ಯಾಭ್ಯಾಸ ಮುಂದುವರಿಕೆಗೆ ಪೂರಕ ವಾತಾವರಣ ಕಲ್ಪಿಸುವ ಕುರಿತಾಗಿ ತಿಳಿಸಲಾಗಿರುತ್ತದೆ.<br><br>ಆಡಳಿತ ತರಬೇತಿ ಸಂಸ್ಥೆಯ ಸಾಮಾಜಿಕ ನ್ಯಾಯ ಕೇಂದ್ರದಲ್ಲಿ ಕರ್ನಾಟಕ ರಾಜ್ಯ ಲಿಂಗತ್ವ ಅಲ್ಪಸಂಖ್ಯಾತರ ಕುರಿತಂತೆ ಅಧಿಕಾರಿಗಳೊಂದಿಗೆ ತರಬೇತಿಯನ್ನು ನೀಡಲಾಗುತ್ತಿದೆ. ಅಲ್ಲದೆ, ಆಡಳಿತ ತರಬೇತಿ ಸಂಸ್ಥೆಯು ಸಮುದಾಯದ ಸಹಭಾಗಿತ್ವದೊಂದಿಗೆ 3 ದಿನಗಳ ತರಬೇತಿ ಮಾಡ್ಯೂಲ್ ಅನ್ನು "ಕರ್ನಾಟಕ ರಾಜ್ಯ ಟ್ರಾನ್ಸ್‌ಜೆಂಡರ್ಸ್ ನೀತಿ-2017"ರ ಕುರಿತಂತೆ ಅಧಿಕಾರಿಗಳಲ್ಲಿ ಅರಿವು ಮೂಡಿಸುವ ಸಲುವಾಗಿ ಸಿದ್ಧಪಡಿಸಲಾಗಿರುತ್ತದೆ.<br><br>**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ:-**<br><br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಟ್ರಾನ್ಸ್‌ಜೆಂಡರ್ಸ್‌ರವರಿಗೆ ಆಪ್ತ ಸಮಾಲೋಚನೆ, ಹೆಚ್.ಐ.ವಿ. ಪರೀಕ್ಷೆ, ಉಚಿತ ಆರೋಗ್ಯ ತಪಾಸಣೆ, ಎ.ಆರ್.ಟಿ. ಸೌಲಭ್ಯ ನೀಡಲಾಗುತ್ತಿದೆ.<br><br>**ಕಂದಾಯ ಇಲಾಖೆ:-**<br><br>ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ಇಲಾಖೆ ವತಿಯಿಂದ ತೃತೀಯ ಲಿಂಗಿಗಳಿಗೆ "ಮೈತ್ರಿ" ಯೋಜನೆಯಡಿ ರೂ.600/-ಗಳ ಮಾಸಾಶನವನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 95 ಡಿಎಸ್‌ಪಿ 2013, ದಿನಾಂಕ: 05-08-2014 ರಂತೆ 25 ರಿಂದ 65 ವಯೋಮಾನದ ಟ್ರಾನ್ಸ್‌ಜೆಂಡರ್ಸ್‌ರವರಿಗೆ ನೀಡಲಾಗುತ್ತಿದೆ.<br><br>**ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ:-**<br><br>ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ವಿಶೇಷ ವಸತಿ ಯೋಜನೆಯಡಿ ಇಲ್ಲಿಯವರೆಗೆ 30 ಟ್ರಾನ್ಸ್‌ಜೆಂಡರ್ಸ್‌ರವರಿಗೆ ವಸತಿ ಸೌಲಭ್ಯ ಕಲ್ಪಿಸಲಾಗಿರುತ್ತದೆ. |

| | | |
|---|---|---|
| | | ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ :- ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಡಿ ಟ್ರಾನ್ಸ್‌ಜೆಂಡರ್ಸ್‌ರವರಿಗೆ ಪಡಿತರ ಚೀಟಿಗಳನ್ನು ನೀಡಲಾಗುತ್ತಿದೆ. 11 ಅಂತ್ಯೋದಯ ಕಾರ್ಡ್‌ಗಳನ್ನು ನೀಡುವುದರೊಂದಿಗೆ 41 ಕುಟುಂಬದ ಸದಸ್ಯರನ್ನು 264 ಆದ್ಯತಾ ಕಾರ್ಡ್‌ಗಳನ್ನು (ಪ್ರಯಾರಿಟಿ ಹೌಸ್ ಹೋಲ್ಡ್ ಕಾರ್ಡ್) ನೀಡುವುದರೊಂದಿಗೆ 641 ಕುಟುಂಬದ ಸದಸ್ಯರನ್ನು, 20 ಆದ್ಯತಾರಹಿತ ಕಾರ್ಡ್‌ಗಳನ್ನು (ನಾನ್-ಪ್ರಯಾರಿಟಿ ಹೌಸ್‌ಹೋಲ್ಡ್ ಕಾರ್ಡ್) ನೀಡುವುದರೊಂದಿಗೆ 54 ಕುಟುಂಬದ ಸದಸ್ಯರನ್ನು ಒಳಗೊಂಡಂತೆ ಆಹಾರ ಭದ್ರತಾ ಸೌಲಭ್ಯವನ್ನು ಒದಗಿಸಲಾಗಿರುತ್ತದೆ. |
| ಆ | ಸರ್ಕಾರವು ರಾಜ್ಯದಲ್ಲಿ ಇಲ್ಲಿಯವರೆಗೆ ಎಷ್ಟು ತೃತೀಯ ಲಿಂಗಿಗಳನ್ನು ಗುರುತಿಸಿ ಅವರಿಗೆ ಪಿಂಚಣಿಯನ್ನು ಒದಗಿಸಿದೆ; (ಜಿಲ್ಲಾವಾರು ಮಾಹಿತಿಯನ್ನು ಒದಗಿಸುವುದು) | ಸಾಮಾಜಿಕ ಭದ್ರತಾ ಪಿಂಚಣಿ ಇಲಾಖೆಯು ಮೈತ್ರಿ ಯೋಜನೆಯಡಿಯಲ್ಲಿ ಇಲ್ಲಿಯವರೆಗೂ 2251 ತೃತೀಯ ಲಿಂಗಿಗರನ್ನು ಗುರುತಿಸಿ ಇವರಿಗೆ ಪಿಂಚಣಿ ಸೌಲಭ್ಯವನ್ನು ನೀಡಲಾಗುತ್ತಿದೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ | ರಾಜ್ಯದಲ್ಲಿ ತೃತೀಯ ಲಿಂಗಿಗಳ ಸಂಖ್ಯೆ ಜಾಸ್ತಿಯಿದ್ದರೂ, ಅದರಲ್ಲಿ ಕೆಲವರಿಗೆ ಮಾತ್ರ ತೃತೀಯ ಲಿಂಗಿ ಪ್ರಮಾಣ ಪತ್ರ ಸಿಗುತ್ತಿದ್ದು, ಇನ್ನೂ ಸಾಕಷ್ಟು ತೃತೀಯ ಲಿಂಗಿಗಳು ಪ್ರಮಾಣ ಪತ್ರ ಸಿಗದೇ ಸರ್ಕಾರದ ಸೌಲಭ್ಯಗಳಿಂದ ವಂಚಿತರಾಗಿರುವ ವಿಷಯ ಸರ್ಕಾರದ ಗಮನದಲ್ಲಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಮಮಇ/87/ಮಅನಿ/2018 ದಿನಾಂಕ: 29-01-2019 ಅದರಂತೆ ಟ್ರಾನ್ಸ್‌ಜೆಂಡರ್ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಮಿತಿಯನ್ನು ರಚಿಸಿ, ಇವರಿಗೆ ಪ್ರಮಾಣ ಪತ್ರ ಸುಲಭವಾಗಿ ದೊರೆಯುವಂತೆ ಕ್ರಮ ಕೈಗೊಂಡಿದೆ. |
| ಈ | ಹಾಗಿದ್ದಲ್ಲಿ, ಸರ್ಕಾರ ಅವರಿಗೆ ತೃತೀಯ ಲಿಂಗಿ ಪ್ರಮಾಣ ಪತ್ರ ವಿತರಣೆ ಪ್ರಕ್ರಿಯೆಯನ್ನು ಸರಳೀಕರಣಗೊಳಿಸಿ ಅವರು ಗಳಿಗೆ ಸರ್ಕಾರಿ ಸೌಲಭ್ಯ ದೊರೆಯುವ ರೀತಿಯಲ್ಲಿ ಕ್ರಮ ಕೈಗೊಳ್ಳುವುದೇ? | ತಾಲ್ಲೂಕು ಮಟ್ಟದ ಸಮಿತಿ ಹಾಗೂ ಬೆಂಬಲ ಘಟಕದ ಜವಾಬ್ದಾರಿಗಳ ಕುರಿತಂತೆ ಸರ್ಕಾರದ ಆದೇಶ ಸಂಖ್ಯೆ: WCD/21/WDC/2019 ದಿನಾಂಕ:21-08-2019 ರಂದು ಹೊರಡಿಸಿರುವ ತಿದ್ದುಪಡಿ ಆದೇಶದಂತೆ ಗುರುತಿನ ಚೀಟಿಗಳನ್ನು ಪಡೆಯುವ ಸಲುವಾಗಿ ಈ ಕೆಳಕಂಡಂತೆ ತಿದ್ದುಪಡಿಯನ್ನು ಮಾಡಿ ಸುಗಮಗೊಳಿಸಲಾಗಿದೆ.<br><br>**ತಾಲ್ಲೂಕು ಮಟ್ಟದ ಸಮಿತಿಯ ಜವಾಬ್ದಾರಿಗಳು**<br><br>ಟ್ರಾನ್ಸ್‌ಜೆಂಡರ್ಸ್‌ರವರು ಲಿಂಗ ಪ್ರಮಾಣ ಪತ್ರವನ್ನು ಪಡೆಯಲು ಜಿಲ್ಲಾ ಆಸ್ಪತ್ರೆಯ ಮನೋ ವೈದ್ಯಕೀಯ ವಿಭಾಗದಿಂದ ಮೌಲ್ಯ ಮಾಪನದ ಪತ್ರ ಸ್ವ-ಘೋಷಿತ ಅಫಿಡವಿಟ್‌ನೊಂದಿಗೆ ಅರ್ಜಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು.<br><br>ಲಿಂಗತ್ವ ಕುರಿತಂತೆ ಸ್ವಯಂ ಘೋಷಿತ ಅಫಿಡವಿಟ್ ಹಾಗೂ ಸಮುದಾಯ ಆಧಾರಿತ ಸಂಸ್ಥೆಯ ನೋಂದಣಿ ಸಂಖ್ಯೆಯೊಂದಿಗೆ ಅರ್ಜಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಕಳುಹಿಸತಕ್ಕದ್ದು. |

| | | ಬೆಂಬಲ ಘಟಕದ ಜವಾಬ್ದಾರಿಗಳು | |
|---|---|---|---|
| | | ಟ್ರಾನ್ಸ್‌ಜೆಂಡರ್ಸ್‌ರವರು ಗುರುತಿನ ಚೀಟಿಗಾಗಿ ಆಯಾ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಜಿಲ್ಲಾ ಆಸ್ಪತ್ರೆಯ ಮನೋವೈದ್ಯಕೀಯ ವಿಭಾಗದಿಂದ ಪಡೆದ ಮೌಲ್ಯಮಾಪನ ಪತ್ರ ಸ್ವ-ಘೋಷಿತ ಅಫಿಡವಿಟ್‌ನೊಂದಿಗೆ ಅರ್ಜಿಯನ್ನು ಸಲ್ಲಿಸಲು ಪೂರಕವಾಗಿ ಕಾರ್ಯ ನಿರ್ವಹಿಸುವುದು. | ಟ್ರಾನ್ಸ್‌ಜೆಂಡರ್ಸ್‌ರವರು ಗುರುತಿನ ಚೀಟಿಗಾಗಿ ಆಯಾ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಲಿಂಗತ್ವ ಕುರಿತಂತೆ ಸ್ವಯಂ ಘೋಷಿತ ಅಫಿಡವಿಟ್ ಹಾಗೂ ಸಮುದಾಯ ಆಧಾರಿತ ಸಂಸ್ಥೆಯ ನೋಂದಣಿ ಸಂಖ್ಯೆಯೊಂದಿಗೆ ಅರ್ಜಿಯನ್ನು ಸಲ್ಲಿಸಲು ಪೂರಕವಾಗಿ ಕಾರ್ಯ ನಿರ್ವಹಿಸುವುದು. |

ಸಂಖ್ಯೆ : WDCSEC 54 WDC 2020

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರೀಕರ ಸಬಲೀಕರಣ
ಇಲಾಖಾ ಸಚಿವರು

# ಅನುಬಂಧ

## ಮೈತ್ರಿ ಯೋಜನೆಯ ಆಗಸ್ಟ್ 2020ರ ಮಾಹೆಯ ಫಲಾನುಭವಿಗಳ ಪ್ರಗತಿ ವರದಿ

| ಕ್ರ.ಸಂ | ಜಿಲ್ಲೆಗಳು | ಫಲಾನುಭವಿಗಳ ವಿವರಗಳು |
|---|---|---|
| 1 | ಬಾಗಲಕೋಟೆ | 130 |
| 2 | ಬಳ್ಳಾರಿ | 216 |
| 3 | ಬೆಂಗಳೂರು (ಗ್ರಾ) | 84 |
| 4 | ಬೆಳಗಾವಿ | 158 |
| 5 | ಬೆಂಗಳೂರು | 453 |
| 6 | ಬೀದರ್ | 32 |
| 7 | ಚಾಮರಾಜನಗರ | 43 |
| 8 | ಚಿಕ್ಕಬಳ್ಳಾಪುರ | 107 |
| 9 | ಚಿಕ್ಕಮಗಳೂರು | 9 |
| 10 | ಚಿತ್ರದುರ್ಗ | 41 |
| 11 | ದಕ್ಷಿಣ ಕನ್ನಡ | 34 |
| 12 | ದಾವಣಗೆರೆ | 88 |
| 13 | ಧಾರವಾಡ | 56 |
| 14 | ಗದಗ | 7 |
| 15 | ಹಾಸನ | 6 |
| 16 | ಹಾವೇರಿ | 47 |
| 17 | ಕಲಬುರಗಿ | 95 |
| 18 | ಕೊಡಗು | 2 |
| 19 | ಕೋಲಾರ | 35 |
| 20 | ಕೊಪ್ಪಳ | 32 |
| 21 | ಮಂಡ್ಯ | 30 |
| 22 | ಮೈಸೂರು | 98 |
| 23 | ರಾಯಚೂರು | 109 |
| 24 | ರಾಮನಗರ | 42 |
| 25 | ಶಿವಮೊಗ್ಗ | 21 |
| 26 | ತುಮಕೂರು | 43 |
| 27 | ಉಡುಪಿ | 30 |
| 28 | ಉತ್ತರ ಕನ್ನಡ | 3 |
| 29 | ವಿಜಯಪುರ | 154 |
| 30 | ಯಾದಗಿರಿ | 46 |
| | ಒಟ್ಟು | 2251 |

**ಕರ್ನಾಟಕ ವಿಧಾನ ಸಭೆ**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 440 |
| ಸದಸ್ಯರ ಹೆಸರು | ಶ್ರೀ ಅಪ್ಪಚ್ಚು ರಂಜನ್ ಎಂ.ಪಿ (ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಕೊಡಗಿನಲ್ಲಿ ಕಳೆದ 2 ವರ್ಷದಿಂದ ಹಾಗೂ ಪ್ರಸ್ತುತ ವರ್ಷದ ಮಳೆಯಿಂದ ರಸ್ತೆಗಳು, ಕೆರೆಕಟ್ಟೆಗಳು, ಸೇತುವೆಗಳು ಹಾಳಾಗಿ ಸಂಚಾಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊಡಗಿನಲ್ಲಿ ಕಳೆದ ಎರಡು ವರ್ಷದಿಂದ ಹಾಗೂ ಪ್ರಸಕ್ತ ವರ್ಷದ ಮಳೆಯಿಂದ ರಸ್ತೆಗಳು ಮತ್ತು ಸೇತುವೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ. | ಇದಕ್ಕಾಗಿ ಎಷ್ಟು ಅನುದಾನ ಮೀಸಲಿಡಲಾಗಿದೆ ಹಾಗೂ ವಿಶೇಷ ಅನುದಾನ ನೀಡಲು ಸರ್ಕಾರ ತೆಗೆದುಕೊಂಡ ಕ್ರಮವೇನು;(ಪೂರ್ಣ ವಿವರ ನೀಡುವುದು) | ಇದಕ್ಕಾಗಿ ಮೀಸಲಿಟ್ಟ ಸರ್ಕಾರವು ಬಿಡುಗಡೆ ಮಾಡಿದ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತವೆ: (see table below) |

| ಕ್ರ.ಸಂ | ವರ್ಷ | ಸರ್ಕಾರ ಅನುಮೋದಿಸಿದ ಕಾಮಗಾರಿ ಗಳ ಸಂಖ್ಯೆ | ಮೀಸಲಿಟ್ಟ ಅನುದಾನ (ರೂ. ಲಕ್ಷಗಳಲ್ಲಿ) | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|---|
| 01 | 2018–19 | 17 | 421.41 | 421.41 |
| 02 | 2019–20 | 863 | 8905.89 | 3350.00 |

ಪ್ರಸಕ್ತ ಸಾಲಿನಲ್ಲಿ ಕೊಡಗು ಜಿಲ್ಲೆಯಲ್ಲಿ ಮಳೆಯಿಂದ ಹಾನಿಗೊಳಗಾದ ವಿವರಗಳನ್ನು ಪಂಚಾಯತ್ ರಾಜ್ ಇಂಜನಿಯರಿಂಗ್ ಇಲಾಖೆ ಮತ್ತು ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಿಂದ ಪಡೆದು ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಗೆ ಸಲ್ಲಿಸಲಾಗಿದ್ದು, ಅನುದಾನವನ್ನು ನಿರೀಕ್ಷಿಸಲಾಗಿದೆ.

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಇ. | ಗ್ರಾಮ ಪಂಚಾಯತಿಗಳಲ್ಲಿ 11ಬಿ ಖಾತೆಗಳು ನೊಂದಣಿ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; 11ಬಿ ಖಾತೆಯ ಪರಬಾರೆ ನಡೆಸಲು ಸರ್ಕಾರ ಹಿಂಪಡೆಯಲು ಕಾರಣವೇನು; ಗ್ರಾಮ ಪಂಚಾಯತಿಗಳಲ್ಲಿ 11ಬಿ ಖಾತೆ ಮಾಡಿಕೊಂಡು ಪರವಾನಿಗೆ ಪಡೆದುಕೊಂಡ ನಂತರ ಬ್ಯಾಂಕ್‌ಗಳು | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ಧವಲ್ಲದ ಆಸ್ತಿಗಳಿಗೆ ಅಂದರೆ ದಿನಾಂಕ: 14.06.2013 ರೊಳಗೆ ಒಂದು ಬಾರಿ ಕ್ರಯವಾಗಿರುವ ನಿವೇಶನಗಳು, ಕಟ್ಟಡಗಳಿಗೆ ಹಳೆಯ 6 ತಿಂಗಳ ಪೂರ್ವದ ಯಾವುದಾದರೂ ಒಂದು ತಿಂಗಳ ವಿದ್ಯುತ್ ಬಿಲ್‌ನ್ನು ಪಡೆದು ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ–11ಬಿ ನೀಡಲಾಗುತ್ತಿದ್ದು, ಉಪ ನೊಂದಾಣಾಧಿಕಾರಿಗಳ ಕಚೇರಿಯಲ್ಲಿ ನೊಂದಾಯಿಸಬಹುದಾಗಿದೆ. |

| | | |
|---|---|---|
| | ಇಂತಹ ಖಾತೆಗಳಿಗೆ ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೇಲಿನ ಎರಡು ರೀತಿಯ ಪ್ರಕರಣಗಳ ಹೊರತಾಗಿ ಇನ್ನುಳಿದ ಪ್ರಕರಣಗಳಲ್ಲಿ ನಮೂನೆ 11–ಬಿ ನೊಂದಣಿ ಆಗುವುದಿಲ್ಲ.<br><br>ಕ್ರಮಬದ್ಧವಲ್ಲದ ಆಸ್ತಿಗಳಿಗೆ ಬ್ಯಾಂಕ್‌ಗಳು ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಈ. | ಗ್ರಾಮ ಪಂಚಾಯತಿಯಲ್ಲಿ ಖಾತೆ ಹೊಂದಿರುವ 11ಬಿ ಆಸ್ತಿಗಳಿಗೆ ಹಾಗೂ ಕುಶಾಲನಗರ ಅಭಿವೃದ್ಧಿ ಪ್ರಾಧಿಕಾರ ಅಸ್ತಿತ್ವಕ್ಕೆ ಬರುವ ಮೊದಲ ಸೃಜನೆಯಾಗಿರುವ ಆಸ್ತಿಗಳಿಗೆ ಕುಶಾಲನಗರ ನಗಾಭಿವೃದ್ಧಿ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆಯನ್ನು ನಿರಾಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರಾಮ ಪಂಚಾಯತಿಯಲ್ಲಿ ಖಾತೆ ಹೊಂದಿರುವ 11ಬಿ ಆಸ್ತಿಗಳಿಗೆ ಹಾಗೂ ಕುಶಾಲನಗರ ಅಭಿವೃದ್ಧಿ ಪ್ರಾಧಿಕಾರ ಅಸ್ತಿತ್ವಕ್ಕೆ ಬರುವ ಮೊದಲ ಸೃಜನೆಯಾಗಿರುವ ಆಸ್ತಿಗಳಿಗೆ ಕುಶಾಲನಗರ ನಗಾಭಿವೃದ್ಧಿ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆಯನ್ನು ನಿರಾಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಉ. | ಇದರಿಂದ ಸಾಮನ್ಯ ಜನರಿಗೆ ತೊಂದರೆಯಾಗುತ್ತಿದ್ದು, ಸದರಿ ಸ್ವತ್ತುಗಳಿಗೆ ಅನುಮೋದನೆ ನೀಡಲು ಕೈಗೊಂಡಿರುವ ಕ್ರಮಗಳೇನು; | ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಕೃಷಿ ಭೂಮಿ ಕೃಷಿಯೇತರ ಜಮೀನಿನಾಗಿ ಭೂ ಪರಿವರ್ತನೆ ಹೊಂದಿ ನಗರಾಭಿವೃದ್ಧಿ ಇಲಾಖೆಯಯ ಸಕ್ಷಮ ಪ್ರಾಧಿಕಾರ/ಯೋಜನಾ ಪ್ರಾಧಿಕಾರದಿಂದ ಲೇಔಟ್ ಅನುಮೋದನೆ ಪಡೆಯಬೇಕಾಗಿರುತ್ತದೆ.<br><br>ಒಂದು ವೇಳೆ ಸ್ಥಳೀಯ ಯೋಜನಾ ಪ್ರಾಧಿಕಾರ ಹೊರಗಡೆ ಇರುವ ಪ್ರದೇಶವು ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮದ ವ್ಯಾಪ್ತಿಗೆ ಒಳಪಡದಿರುವ ಕಾರಣ, ಸ್ಥಳೀಯ ಯೋಜನಾ ಪ್ರಾಧಿಕಾರಿಗಳಹೊರಗಡೆ ಇರುವ ಪ್ರದೇಶಗಳಲ್ಲಿರುವ ಪ್ರಸ್ತುತ ಅಸ್ತಿತ್ವದಲ್ಲಿರುವ ಆಸ್ತಿಗಳಿಗೆ ಸಂಬಂಧಿಸಿದಂತೆ ಲೇಔಟ್ ಪ್ಲಾನ್ ಅನುಮೋದನೆ ಪಡೆಯಬೇಕಾಗಿರುತ್ತದೆ. |
| ಊ. | ಕೊಡಗು ಜಿಲ್ಲೆಯಲ್ಲಿನ ಎಷ್ಟು ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಕ ಕಸ ವಿಲೇವಾರಿ ಘಟಕ ಮಂಜೂರಾಗಿದೆ. ಇದರಲ್ಲಿ ಕಾರ್ಯಾರಂಭ ಮಾಡಿಸುವ ಘಟಕವೆಷ್ಟು ಹಾಗೂ ಬಾಕಿ ಇರುವ ಘಟಕವನ್ನು ಯಾವಾಗ ಪ್ರಾರಂಭ ಮಾಡಲಾಗುವುದು (ಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಈಗಾಗಲೇ ವೈಜ್ಞಾನಿಕವಾಗಿ ಕಸ ವಿಲೇವಾರಿ ಮಾಡಲು 104 ಗ್ರಾಮ ಪಂಚಾಯತ್‌ಗಳಲ್ಲಿ ಕ್ರಿಯಾ ಯೋಜನೆಯನ್ನು ತಯಾರಿಸಿ ಸರ್ಕಾರದಿಂದ ಅನುಮೋದನೆ ಪಡೆದು ಕೊಳ್ಳಲಾಗಿದೆ. ಪ್ರಸ್ತುತ 28 ಗ್ರಾಮ ಪಂಚಾಯತಿಗಳಲ್ಲಿ ತಾತ್ಕಾಲಿಕ ಕಟ್ಟಡವನ್ನು ಗುರುತಿಸಿ ತ್ಯಾಜ್ಯ ಸಂಸ್ಕರಣೆ ಮತ್ತು ನಿರ್ವಹಣೆ ಮಾಡಲು ಕ್ರಮ ವಹಿಸಲಾಗಿದೆ. 52 ಗ್ರಾಮ ಪಂಚಾಯತಿಗಳಿಗೆ ಜಾಗದ ಸಮಸ್ಯೆ ಇದ್ದು, ಪ್ರಸ್ತುತ ಕಂದಾಯ ಇಲಾಖೆಯ ವಿವಿಧ ಹಂತದಲ್ಲಿದ್ದು, ಅನುಮೋದನೆಗೆ ಕ್ರಮವಹಿಸಲಾಗುತ್ತಿದೆ. ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಜಾಗದ ಅನುಮೋದನೆ ದೊರೆತ ನಂತರ ತ್ಯಾಜ್ಯ ವಿಲೇವಾರಿ ಘಟಕ ನಿರ್ಮಿಸಿ ಕಾರ್ಯಾರಂಭ ಮಾಡಲಾಗುವುದು. |

| ಋ | ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಕವಾಗಿ ತಯಾರಾಗುವ ಗೊಬ್ಬರವನ್ನು ವಿಲೇವಾರಿ ಮಾಡಲು ಸರ್ಕಾರ ಕೈಗೊಂಡಿರುವ ಮಾರ್ಗಸೂಚಿಗಳೇನು? | ಗ್ರಾಮ ಪಂಚಾಯತಿಗಳಲ್ಲಿ ವೈಜ್ಞಾನಿಕವಾಗಿ ತಯಾರಾಗುವ ಗೊಬ್ಬರವನ್ನು ಗ್ರಾಮ ಪಂಚಾಯತಿ ಮಟ್ಟದಲ್ಲಿ ಮಾರಾಟ ಮಾಡಿ ತ್ಯಾಜ್ಯ ನಿರ್ವಹಣೆ ಘಟಕದ ವೆಚ್ಚವನ್ನು ಅದರಲ್ಲಿ ಭರಸಿಕೊಳ್ಳವುದಾಗಿದೆ. |
|---|---|---|

ಕಡತ ಸಂಖ್ಯೆ: ಗ್ರಾಅಪ:ಅಧಿ07/07:ಆರ್ಆರ್ಸಿ:2020

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 456 |
| ಸದಸ್ಯರ ಹೆಸರು | : | ಶ್ರೀ. ಬಾಲಕೃಷ್ಣ.ಸಿ.ಎನ್ (ಶ್ರವಣಬೆಳಗೊಳ) |
| ಉತ್ತರಿಸುವ ದಿನಾಂಕ | : | 23.09.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಹೊಸದಾಗಿ ಮಂಜೂರು ಮಾಡಲಾಗಿರುವ ಪಶುಚಿಕಿತ್ಸಾಲಯಗಳ ಸಂಖ್ಯೆ ಎಷ್ಟು ಹಾಗೂ ಎಷ್ಟು ಪಶುಚಿಕಿತ್ಸಾಲಯಗಳನ್ನು ಉನ್ನತೀಕರಿಸಲಾಗಿದೆ. (ತಾಲ್ಲೂಕುವಾರು ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಯಾವುದೇ ಹೊಸ ಪಶು ಚಿಕಿತ್ಸಾಲಯಗಳನ್ನು ಮಂಜೂರು ಮಾಡಿರುವುದಿಲ್ಲ ಹಾಗೂ ಪಶು ಚಿಕಿತ್ಸಾಲಯಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |
| ಆ) | ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಪಶು ಚಿಕಿತ್ಸಾಲಯಗಳನ್ನು ಉನ್ನತೀಕರಿಸಲು ಕ್ರಮ ಕೈಗೊಳ್ಳಲಾಗಿದೆ (ವಿವರ ನೀಡುವುದು) | ರಾಜ್ಯದಲ್ಲಿ ಪಶು ಚಿಕಿತ್ಸಾಲಯಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |
| ಇ) | ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪಶು ಚಿಕಿತ್ಸಾಲಯಗಳನ್ನು ಉನ್ನತೀಕರಿಸಲು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುವುದು ನಿಜವೇ? | ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸಂತೆ ಶಿವರ ಪಶುಚಿಕಿತ್ಸಾಲಯವನ್ನು ಉನ್ನತೀಕರಿಸಲು ಮನವಿ ಬಂದಿರುತ್ತದೆ. |
| ಈ) | ಹಾಗಿದ್ದಲ್ಲಿ, ಸದರಿ ಮನವಿಯ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು | ಪ್ರಸ್ತುತ ಪಶು ಚಿಕಿತ್ಸಾಲಯಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ |
| ಉ) | ಹಾಗಿಲ್ಲದಿದ್ದಲ್ಲಿ, ಸದರಿ ಮನವಿಯ ಬಗ್ಗೆ ಕ್ರಮ ಕೈಗೊಳ್ಳಲು ಸರ್ಕಾರಕ್ಕಿರುವ ತೊಂದರೆಗಳೇನು? | ಅನ್ವಯಿಸುವುದಿಲ್ಲ |
| ಊ) | ರಾಜ್ಯದಲ್ಲಿ ಪಶುವೈದ್ಯರ ಹಾಗೂ ಇತರೆ ಸಿಬ್ಬಂದಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಇಲಾಖೆಯಲ್ಲಿ ಪಶುವೈದ್ಯರ ಹಾಗೂ ಇತರ ಸಿಬ್ಬಂದಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಋ) | ಹಾಗಿದ್ದಲ್ಲಿ, ಪಶುವೈದ್ಯರ ಹಾಗೂ ಇತರೆ ಸಿಬ್ಬಂದಿಗಳ ನೇಮಕಾತಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರ ಹಾಗೂ ಮುಖ್ಯ ಪಶುವೈದ್ಯಾಧಿಕಾರಿ ಮತ್ತು ಹಿರಿಯ ಪಶುವೈದ್ಯಾಧಿಕಾರಿಗಳ ಖಾಲಿ ಹುದ್ದೆಗಳನ್ನು ಹಂತ ಹಂತವಾಗಿ ಪಶುವೈದ್ಯಾಧಿಕಾರಿ ಹುದ್ದೆಯಿಂದ ಕಾಲಮಿತಿ ಪದೋನ್ನತಿ/ಮುಂಬಡ್ತಿ ಮುಖಾಂತರ ತುಂಬಲು ಕ್ರಮವಹಿಸಲಾಗಿದೆ ಹಾಗೂ ಇಲಾಖೆಯಲ್ಲಿ ಖಾಲಿ |

ಇರುವ 639 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ನಿಯಮಗಳ ಮುಖಾಂತರ ಭರ್ತಿ ಮಾಡುವ ಪ್ರಸ್ತಾವನೆಗೆ ಪ್ರಸುತ್ತ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ನೀಡಿರುವುದಿಲ್ಲ.

ಮುಂದುವರೆದು, 371 (ಜೆ) ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಖಾಲಿ ಇರುವ 61 ಪಶುವೈಧ್ಯಾಧಿಕಾರಿ ಹುದ್ದೆಗಳನ್ನು, 32 ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗಳನ್ನು ಹಾಗೂ 83 ಪಶುವೈದ್ಯಕೀಯ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಆದರೆ ಆರ್ಥಿಕ ಇಲಾಖೆಯು ದಿನಾಂಕ: 06.07.2020 ರ ಸುತ್ತೋಲೆಯಲ್ಲಿ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ 2020-21 ನೇ ಸಾಲಿನ ಆರ್ಥಿಕ ವರ್ಷದಲ್ಲಿ ಕಲ್ಯಾಣ-ಕರ್ನಾಟಕ ಭಾಗದ ಹುದ್ದೆಗಳು ಹಾಗೂ ಬ್ಯಾಕ್ ಲಾಗ್ ಹುದ್ದೆಗಳು ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ತಿಳಿಸಿರುತ್ತದೆ. ಆದುದರಿಂದ ಸದರಿ ನೇಮಕಾತಿ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ಮುಂದಿನ ಆದೇಶದವರೆಗೂ ತಡೆ ಹಿಡಿಯಲಾಗಿರುತ್ತದೆ.

ಗ್ರೂಪ್-ಸಿ ವೃಂದದ ದಿನಾಂಕ: 13.03.2019 ರ ಮುಂಬಡ್ತಿ ಆದೇಶ ಕುರಿತಂತೆ ಕೆಲವು ವೃಂದಗಳಾದ ಜಾನುವಾರು ಅಧಿಕಾರಿ, ಹಿರಿಯ ಪಶುವೈದ್ಯಕೀಯ ಪರೀಕ್ಷಕರು ಹಾಗೂ ಪಶು ವೈದ್ಯಕೀಯ ಪರೀಕ್ಷಕರು ನ್ಯಾಯಾಲಯದ ಮೊರೆ ಹೋಗಿದ್ದು ಪ್ರಕರಣ ಇತ್ಯರ್ಥಗೊಂಡಿರುವುದಿಲ್ಲ. ಇನ್ನು ನ್ಯಾಯಾಲಯದಲ್ಲಿ ಪ್ರಕರಣ ಇತ್ಯರ್ಥಗೊಂಡ ನಂತರ ಖಾಲಿ ಇರುವ ಗ್ರೂಪ್-ಸಿ ವೃಂದದ ಮುಂಬಡ್ತಿ ಹುದ್ದೆಗಳನ್ನು ಮುಂಬಡ್ತಿ ಮುಖಾಂತರ ಭರ್ತಿ ಮಾಡಲು ಕ್ರಮ ವಹಿಸಲಾಗುವುದು.

'ಡಿ' ದರ್ಜೆ ನೌಕರರು, ಡಾಟಾ ಎಂಟ್ರಿ ಆಪರೇಟರ್ ಮತ್ತು ವಾಹನ ಚಾಲಕರ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆ ಪಡೆಯಲಾಗುತ್ತಿದೆ. ಸದರಿ ವೃಂದಗಳಲ್ಲಿ ಖಾಲಿ ಇರುವ ನೇರನೇಮಕಾತಿಯ ಹುದ್ದೆಗಳಿಗೆ

456

| | | |
|---|---|---|
| | | ನೇಮಕಾತಿಯನ್ನು ಆರ್ಥಿಕ ಮಿತವ್ಯಯದ ಕಾರಣ ತಾತ್ಕಾಲಿಕವಾಗಿ ತಡೆಹಿಡಿಯಲಾಗಿರುತ್ತದೆ. |

ಸಂ: ಪಸಂಮೀ ಇ-150 ಪಸಸೇ 2020

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ದೇವಾನಂದ್ ಪುಲಸಿಂಗ್ ಚವಾಣ್ (ನಾಗಠಾಣ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 459

ಉತ್ತರಿಸಬೇಕಾದ ದಿನಾಂಕ : 23.09.2020.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ವಿಜಯಪುರ ಜಿಲ್ಲೆಯಲ್ಲಿ ಪಶುಸಂಗೋಪನೆ ಇಲಾಖೆಯಿಂದ ಅಸ್ಪತ್ರೆಗಳಿಗೆ ಅವಧಿ ಮೀರಿದ ಔಷಧಿಗಳ ವಿತರಣೆ ಹಾಗೂ ಖರೀದಿ ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸದೆ ಅನುದಾನ ಬಿಡುಗಡೆ ಮಾಡಿಕೊಂಡಿರುವುದು ಯಾವುದೇ ಉಪಕರಣಗಳನ್ನು ಖರೀದಿಸದೆ ನಕಲಿ ದಾಖಲೆ ಸೃಷ್ಟಿಸಿ ಅನುದಾನ ದುರ್ಬಳಕೆ ಮಾಡಿಕೊಂಡಿರುವುದು, ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ ಈ ಬಗ್ಗೆ ಕೈಗೊಂಡ ಕ್ರಮಗಳೇನು (ವಿವರವಾದ ಮಾಹಿತಿ ನೀಡುವುದು) | 1. ವಿಜಯಪುರ ಜಿಲ್ಲೆಯಲ್ಲಿ ಪಶುಪಾಲನಾ ಇಲಾಖೆಯಿಂದ ಆಸ್ಪತ್ರೆಗಳಿಗೆ ಅವಧಿ ಮೀರಿದ ಯಾವುದೇ ಔಷಧಿಗಳನ್ನು ವಿತರಣೆ ಮಾಡಿರುವುದಿಲ್ಲ. ಈ ಕುರಿತು ಇಲಾಖೆ ಅಧಿಕಾರಿಗಳಿಗೆ ಯಾವುದೇ ದೂರು ಬಂದಿರುವುದಿಲ್ಲ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಅನುದಾನವನ್ನು ಜಿಲ್ಲಾ ಪಂಚಾಯತ್‌ನಿಂದ ನೇರವಾಗಿ ಕಾಮಗಾರಿ ಕೈಗೊಂಡ ಸಂಸ್ಥೆಯಾದ ಕೆ.ಆರ್.ಐ.ಡಿ.ಎಲ್. ಇವರಿಗೆ ಅನುದಾನವನ್ನು ಬಿಡುಗಡೆಗೊಳಿಸಲಾಗಿರುತ್ತದೆ.<br>2. ಯಾವುದೇ ಉಪಕರಣಗಳನ್ನು ಖರೀದಿಸದೇ ನಕಲಿ ದಾಖಲೆ ಸೃಷ್ಟಿಸಿ ಅನುದಾನವನ್ನು ದುರ್ಬಳಕೆ ಮಾಡಿಕೊಂಡಿರುವುದಿಲ್ಲ. |
| ಆ | ಕಳೆದ ಮೂರು ವರ್ಷಗಳಲ್ಲಿ ಸರ್ಕಾರದ ವಿವಿಧ ಯೋಜನೆಗಳಿಂದ ವಿಜಯಪುರ ಜಿಲ್ಲೆಗೆ ಬಿಡುಗಡೆಯಾದ ಅನುದಾನವೆಷ್ಟು; ಅದರಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು: (ವಿವರವಾದ ಮಾಹಿತಿ ನೀಡುವುದು) | 2017-18 ನೇ ಸಾಲಿನ ಬಿಡುಗಡೆ ಅನುದಾನ **(ರೂ.ಕೋಟಿಗಳಲ್ಲಿ)**<br>1. ವಿವಿಧ ಪಶು ಭಾಗ್ಯ ಯೋಜನೆಗೆ ಸರಕಾರದಿಂದ ಬಿಡುಗಡೆಯಾದ ಅನುದಾನ ರೂ.129.442<br>2. ಕಟ್ಟಡ ಕಾಮಗಾರಿಗಳಿಗಾಗಿ ಬಿಡುಗಡೆಯಾದ ಅನುದಾನ ರೂ. 40.00<br>3. ಗಿರಿರಾಜ ಕೋಳಿ ಸಾಕಾಣಿಕೆಗಾಗಿ ಬಿಡುಗಡೆಯಾದ ಅನುದಾನ ರೂ.12.00<br>2018-19 ನೇ ಬಿಡುಗಡೆ ಅನುದಾನ**(ರೂ. ಕೋಟಿಗಳಲ್ಲಿ)**<br>1. ವಿವಿಧ ಪಶು ಭಾಗ್ಯ ಯೋಜನೆಗೆ ಸರಕಾರದಿಂದ ಬಿಡುಗಡೆಯಾದ ಅನುದಾನ ರೂ.129.442<br>2. ಕಟ್ಟಡ ಕಾಮಗಾರಿಗಳಿಗಾಗಿ ಬಿಡುಗಡೆಯಾದ ಅನುದಾನ ರೂ. 40.00<br>3. ಗಿರಿರಾಜ ಕೋಳಿ ಸಾಕಾಣಿಕೆಗಾಗಿ ಬಿಡುಗಡೆಯಾದ ಅನುದಾನ ರೂ.12.00 |

| | | |
|---|---|---|
| | | 2019–20 ನೇ ಬಿಡುಗಡೆ ಅನುದಾನ(**ರೂ. ಕೋಟಿಗಳಲ್ಲಿ**)<br>1. ವಿವಿಧ ಪಶು ಭಾಗ್ಯ ಯೋಜನೆಗೆ ಸರಕಾರದಿಂದ ಬಿಡುಗಡೆಯಾದ ಅನುದಾನ ರೂ.73.33<br>2. ಕಟ್ಟಡ ಕಾಮಗಾರಿಗಳಿಗಾಗಿ ಬಿಡುಗಡೆಯಾದ ಅನುದಾನ ರೂ. 40.00<br>3. ಗಿರಿರಾಜ ಕೋಳಿ ಸಾಕಾಣಿಕೆಗಾಗಿ ಬಿಡುಗಡೆಯಾದ ಅನುದಾನ ರೂ.17.00 |
| ಇ | ಪ್ರಸ್ತುತ ಕರೋನಾ ವೈರಸ್‌ನಿಂದಾಗಿ ಸಾರ್ವಜನಿಕರು ಉದ್ಯೋಗ ಕಳೆದುಕೊಂಡು ನಿರ್ಗತಿಕರಾಗಿದ್ದು ಅವರನ್ನು ಸ್ವಾವಲಂಬಿಯಾಗಲು ಹೈನುಗಾರಿಕೆ ಯೋಜನೆಯಡಿ ಪ್ರಸಕ್ತ ವರ್ಷ ಗುರಿಗಳನ್ನು ಹೆಚ್ಚಿಸುವ ನಿರ್ಧಾರ ಸರ್ಕಾರದ ಮುಂದಿದೆಯೇ: | ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |
| ಈ | ನಾಗಠಾಣ ವಿಧಾನ ಸಭಾ ಕ್ಷೇತ್ರದಲ್ಲಿ ಪಶು ಅಸ್ಪತ್ರೆಗಳು ಮತ್ತು ಪಶುವೈದ್ಯರು ಹಾಗೂ ಇನ್ನಿತರ ಸಿಬ್ಬಂದಿಗಳ ಕೊರತೆಯಿದ್ದು, ಕೊರತೆಯನ್ನು ನೀಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಇಲಾಖೆಯಲ್ಲಿ ಖಾಲಿ ಇರುವ 639 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ನಿಯಮಗಳ ಮುಖಾಂತರ ಭರ್ತಿ ಮಾಡುವ ಪ್ರಸ್ತಾವನೆಗೆ ಪ್ರಸುತ್ತ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿರುವುದಿಲ್ಲ.<br>ಮುಂದುವರೆದು, 371 (ಜೆ) ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಖಾಲಿ ಇರುವ 61 ಪಶುವೈದ್ಯಾಧಿಕಾರಿ ಹುದ್ದೆಗಳನ್ನು, 32 ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗಳನ್ನು ಹಾಗೂ 83 ಪಶುವೈದ್ಯಕೀಯ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಆದರೆ ಆರ್ಥಿಕ ಇಲಾಖೆಯು ದಿನಾಂಕ: 06.07.2020 ರ ಸುತ್ತೋಲೆಯಲ್ಲಿ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ 2020–21 ನೇ ಸಾಲಿನ ಆರ್ಥಿಕ ವರ್ಷದಲ್ಲಿ ಕಲ್ಯಾಣ–ಕರ್ನಾಟಕ ಭಾಗದ ಹುದ್ದೆಗಳು ಹಾಗೂ ಬ್ಯಾಕ್ ಲಾಗ್ ಹುದ್ದೆಗಳು ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ತಿಳಿಸಿರುತ್ತದೆ. ಆದುದರಿಂದ ಸದರಿ ನೇಮಕಾತಿ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ಮುಂದಿನ ಆದೇಶದವರೆಗೂ ತಡೆ ಹಿಡಿಯಲಾಗಿರುತ್ತದೆ.<br>ಗ್ರೂಪ್–ಸಿ ವೃಂದದ ದಿನಾಂಕ:13.03.2019 ರ ಮುಂಬಡ್ತಿ ಆದೇಶ ರದ್ದುಗೊಳಿಸಿರುವ ಕುರಿತಂತೆ ಕೆಲವು ವೃಂದಗಳಾದ ಜಾನುವಾರು ಅಧಿಕಾರಿ, ಹಿರಿಯ ಪಶುವೈದ್ಯಕೀಯ ಪರೀಕ್ಷಕರು ಹಾಗೂ ಪಶು ವೈದ್ಯಕೀಯ ಪರೀಕ್ಷಕರು ನ್ಯಾಯಾಲಯದ ಮೊರೆ ಹೋಗಿದ್ದು ಪ್ರಕರಣ |

| | | |
|---|---|---|
| | | ಇನ್ನು ಇತ್ಯರ್ಥಗೊಂಡಿರುವುದಿಲ್ಲ. ನ್ಯಾಯಾಲಯದಲ್ಲಿ ಪ್ರಕರಣ ಇತ್ಯರ್ಥಗೊಂಡ ನಂತರ ಖಾಲಿ ಇರುವ ಗ್ರೂಪ್-ಸಿ ವೃಂದದ ಮುಂಬಡ್ತಿ ಹುದ್ದೆಗಳನ್ನು ಮುಂಬಡ್ತಿ ಮುಖಾಂತರ ಭರ್ತಿ ಮಾಡಲು ಕ್ರಮ ವಹಿಸಲಾಗುವುದು.<br>ಡಿ ದರ್ಜೆ ನೌಕರರು, ಡಾಟಾ ಎಂಟ್ರಿ ಆಪರೇಟರ್ ಮತ್ತು ವಾಹನ ಚಾಲಕರ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆ ಪಡೆಯಲಾಗುತ್ತಿದೆ. ಸದರಿ ವೃಂದಗಳಲ್ಲಿ ಖಾಲಿ ಇರುವ ನೇರ ನೇಮಕಾತಿಯ ಹುದ್ದೆಗಳಿಗೆ ನೇಮಕಾತಿಯನ್ನು ಆರ್ಥಿಕ ಮಿತವ್ಯಯದ ಕಾರಣ ತಾತ್ಕಾಲಿಕವಾಗಿ ತಡೆಹಿಡಿಯಲಾಗಿರುತ್ತದೆ. |

ಪಸಂಮೀ ಇ-229 ಸಲೆವಿ 2020

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | ಃ | 462 |
| ಸದಸ್ಯರ ಹೆಸರು | ಃ | ಶ್ರೀ. ಭೀಮಾನಾಯ್ಕ ಎಸ್ (ಹಗರಿಬೊಮ್ಮನಹಳ್ಳಿ) |
| ಉತ್ತರಿಸುವ ದಿನಾಂಕ | ಃ | 23.09.2020 |
| ಉತ್ತರಿಸುವ ಸಚಿವರು | ಃ | ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಅಲಭ್ಯತೆಯಿಂದ ಗ್ರಾಮಗಳಲ್ಲಿ ಸಾರ್ವಜನಿಕರು ಪಶು ಚಿಕಿತ್ಸೆಗೆ ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪಶುವೈದ್ಯರ ಹುದ್ದೆಗಳು ಖಾಲಿ ಇರುವ ಪಶುವೈದ್ಯಕೀಯ ಸಂಸ್ಥೆಗಳಿಗೆ ಪ್ರಭಾರ ವ್ಯವಸ್ಥೆ ಮಾಡಿ ಜಾನುವಾರುಗಳಿಗೆ ಚಿಕಿತ್ಸೆ ನೀಡಲಾಗುತ್ತಿದೆ |
| ಆ) | ಇಲಾಖೆಗೆ ಮಂಜೂರಾಗಿರುವ ಪಶು ವೈದ್ಯರ ಸಂಖ್ಯೆ ಎಷ್ಟು; ಪ್ರಸ್ತುತ ಎಷ್ಟು ಪಶು ವೈದ್ಯರ ಕೊರತೆ ಇದೆ; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಇಲಾಖೆಗೆ ಮಂಜೂರಾಗಿರುವ ಪಶು ವೈದ್ಯರ ಸಂಖ್ಯೆ: 3317<br>(ಇದರಲ್ಲಿ 1602 ಪಶುವೈದ್ಯಾಧಿಕಾರಿಗಳು, 1715 ಹಿರಿಯ ಪಶುವೈದ್ಯಾಧಿಕಾರಿಗಳು, ಮುಖ್ಯ ಪಶುವೈದ್ಯಾಧಿಕಾರಿಗಳು ಮತ್ತು ಸಹಾಯಕ ನಿರ್ದೇಶಕರ ಹುದ್ದೆಗಳಾಗಿವೆ)<br>ಜಿಲ್ಲಾವಾರು ಮಾಹಿತಿಯನ್ನು <u>ಅನುಬಂಧ-1</u> ರಲ್ಲಿ ನೀಡಲಾಗಿದೆ. |
| ಇ) | ಕೊರತೆ ಇರುವ ಪಶು ಆಸ್ಪತ್ರೆಗಳಲ್ಲಿ ಸರ್ಕಾರ ತುರ್ತು ಚಿಕಿತ್ಸೆಗೆ ಯಾವ ಕ್ರಮ ಕೈಗೊಂಡಿದೆ; | ಕೊರತೆ ಇರುವ ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಪ್ರಭಾರ ವ್ಯವಸ್ಥೆ ಮಾಡುವ ಮೂಲಕ ಜಾನುವಾರುಗಳಿಗೆ ಚಿಕಿತ್ಸೆ ನೀಡಲಾಗುತ್ತಿದೆ. |
| ಈ) | ಪಶು ಇಲಾಖೆಯಲ್ಲಿ ಕೂಡಲೇ ನೇಮಕಾತಿ/ ಹೊರಗುತ್ತಿಗೆ ಆಧಾರದ ಮೇಲೆ ಪಶು ವೈದ್ಯರ ನೇಮಕ ಮಾಡುವ ಪ್ರಕಿಯೆ ಸರ್ಕಾರದ ಮಟ್ಟದಲ್ಲಿ ಆಗಿದೆಯೇ; ಹಾಗೂ ಯಾವ ಕಾಲಮಿತಿಯಲ್ಲಿ ನೇಮಿಸಲಾಗುವುದು? | ಇಲಾಖೆಯಲ್ಲಿ ಖಾಲಿ ಇರುವ 639 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ನಿಯಮಗಳ ಮುಖಾಂತರ ಭರ್ತಿ ಮಾಡುವ ಪ್ರಸ್ತಾವನೆಗೆ ಪ್ರಸುತ್ತ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿರುವುದಿಲ್ಲ, ಆದರೆ, ಹೊರ ಗುತ್ತಿಗೆ ಆಧಾರದ ಮೇಲೆ ಪಶುವೈದ್ಯರ ನೇಮಕ ಮಾಡುವ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ.<br><br>ಮುಂದುವರೆದು, 371 (ಜೆ) ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಖಾಲಿ ಇರುವ 61 ಪಶುವೈಧ್ಯಾಧಿಕಾರಿ ಹುದ್ದೆಗಳನ್ನು ಭರ್ತಿ ಮಾಡಲು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಆದರೆ ಆರ್ಥಿಕ |

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಪಾಟೀಲ್ ಎಂ.ವೈ. (ಅಫ್ಜಲ್‌ಪುರ್)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 917
ಉತ್ತರ ದಿನಾಂಕ : 23.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅಫಜಲಪೂರ ಮತಕ್ಷೇತ್ರಕ್ಕೆ ಮಂಜೂರಾಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳು ಎಷ್ಟು; (ವಿವರ ನೀಡುವುದು) | ಅಫಜಲಪೂರ ಮತಕ್ಷೇತ್ರಕ್ಕೆ 72 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿರುತ್ತದೆ (ವಿವರಗಳನ್ನು **ಅನುಬಂಧದಲ್ಲಿ** ಲಗತ್ತಿಸಲಾಗಿದೆ). |
| ಆ) | ಸದರಿ ಶುದ್ಧ ಕುಡಿಯುವ ನೀರಿನ ಹಲವು ಘಟಕಗಳು ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಇ) | ಹಾಗಿದ್ದಲ್ಲಿ, ಇಲ್ಲಿಯವರೆಗೆ ಸ್ಥಗಿತಗೊಂಡ ಘಟಕಗಳೆಷ್ಟು; (ವಿವರ ನೀಡುವುದು) | ಇಲ್ಲಿಯವರೆಗೆ 34 ಘಟಕಗಳು ಸ್ಥಗಿತಗೊಂಡಿರುತ್ತವೆ (ವಿವರಗಳನ್ನು **ಅನುಬಂಧದಲ್ಲಿ** ಲಗತ್ತಿಸಲಾಗಿದೆ). |
| ಈ) | ಈ ಶುದ್ಧ ನೀರಿನ ಘಟಕಗಳಿಂದ ಎಷ್ಟು ಜನರಿಗೆ ನೀರು ಪೂರೈಕೆಯಾಗುತ್ತಿದೆ; | ಈ ಶುದ್ಧ ಕುಡಿಯುವ ನೀರಿನ ಘಟಕಗಳಿಂದ 47230 ಜನರಿಗೆ ನೀರನ್ನು ಪೂರೈಸಲಾಗುತ್ತಿದೆ. |
| ಉ) | ಸ್ಥಗಿತಗೊಂಡ ಶುದ್ಧ ಕುಡಿಯುವ ನೀರಿನ ಘಟಕಗಳು ಯಾವಾಗ ಪುನಾರಂಭ ಮಾಡಲಾಗುವುದು; ಈ ಶುದ್ಧ ಕುಡಿಯುವ ನೀರಿನ ಘಟಕಗಳು ಸ್ಥಗಿತಗೊಂಡಿದ್ದರಿಂದ ಜನರಿಗೆ ಕುಡಿಯುವ ನೀರಿನ ಸಮಸ್ಯೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ.<br><br>ಸ್ಥಗಿತಗೊಂಡ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ದುರಸ್ಥಿಗೊಳಿಸಲು ಈಗಾಗಲೇ ಟೆಂಡರ್ ಕರೆಯಲಾಗಿದ್ದು, ಪ್ರಸಕ್ತ ಸಾಲಿನಲ್ಲಿಯೇ ಪುನರಾರಂಭ ಮಾಡಲು ಕ್ರಮ ಕೈಗೊಳ್ಳಲಾಗುವುದು. |
| ಊ) | ಬಂದಿದ್ದಲ್ಲಿ, ಯಾವಾಗ ಕ್ರಮ ಕೈಗೊಳ್ಳಲಾಗುವುದು? | |

ಸಂ:ಗ್ರಾಕುನೀ&ನೈಇ 26 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

Annexure of LAQ 917

| Sl.no | District \ Division | Taluk | Grama Panchayat | Village/ Habitation | Approved Year | Agency (Dept. Tender / KRIDL/ Co opr / Others) | Working or Not (Yes or No) |
|---|---|---|---|---|---|---|---|
| 1 | Kalaburagi | Afzalpur | Allagi-b | Bankalaga | 2015-2016 | Dept Tender | Yes |
| 2 | Kalaburagi | Afzalpur | Anoor | Anoor | 2015-2016 | Dept Tender | Yes |
| 3 | Kalaburagi | Afzalpur | Anoor | Gholnoor | 2017-2018 | Dept Tender | Yes |
| 4 | Kalaburagi | Afzalpur | Anoor | Tellur | 2015-2016 | Dept Tender | Yes |
| 5 | Kalaburagi | Afzalpur | Arjungi | Arjungi | 2015-2016 | Dept Tender | Yes |
| 6 | Kalaburagi | Afzalpur | Athnoor | Bhoganalli | 2015-16 | Others (jalamrit scheme) | No |
| 7 | Kalaburagi | Afzalpur | Badadal | Badadal | 2012-2013 | Dept Tender | No |
| 8 | Kalaburagi | Afzalpur | Badadal | Badadal | 2016-17 | KRIDL | Yes |
| 9 | Kalaburagi | Afzalpur | Bairamadagi | Bairamadagi | 2015-2016 | Dept Tender | Yes |
| 10 | Kalaburagi | Afzalpur | Ballurgi | Jewargi-b | 2017-2018 | Dept Tender | No |
| 11 | Kalaburagi | Afzalpur | Ballurgi | Nandarga | 2017-2018 | Dept Tender | No |
| 12 | Kalaburagi | Afzalpur | Bandarwad | Bandarwad | 2016-17 | KRIDL | No |
| 13 | Kalaburagi | Afzalpur | Bandrawada | Hoovinahalli | 2015-2016 | Dept Tender | Yes |
| 14 | Kalaburagi | Afzalpur | Bankalaga | Bhosaga | 2015-16 | Others (jalamrit scheme) | No |
| 15 | Kalaburagi | Afzalpur | Bhairmadgi | Madara B | 2012-2013 | Dept Tender | No |
| 16 | Kalaburagi | Afzalpur | Chinamagera | Chinamagera | 2015-2016 | Dept Tender | Yes |
| 17 | Kalaburagi | Afzalpur | Chowadapur | Chowadapur | 2016-2017 | Dept Tender | Yes |
| 18 | Kalaburagi | Afzalpur | Chowdapur | Chowdapur | 2016-17 | KRIDL | No |
| 19 | Kalaburagi | Afzalpur | Chowdapur | Chowdapur Tanda | 2015-16 | Others (jalamrit scheme) | No |
| 20 | Kalaburagi | Afzalpur | Deval Ganagapur | Deval Gangapur | 2012-2013 | Dept Tender | Yes |
| 21 | Kalaburagi | Afzalpur | Deval Gangapur | Deval Gangapur | 2017-2018 | Dept Tender | Yes |
| 22 | Kalaburagi | Afzalpur | Deval Gangapur | Kerekanahalli | 2017-2018 | Dept Tender | No |
| 23 | Kalaburagi | Afzalpur | Gobbur B | Gobbur B | 2015-2016 | Dept Tender | Yes |
| 24 | Kalaburagi | Afzalpur | Gobbur-b | Gobbur-b | 2017-2018 | Dept Tender | No |
| 25 | Kalaburagi | Afzalpur | Gour B | Shirwal | 2015-16 | Others (jalamrit scheme) | No |
| 26 | Kalaburagi | Afzalpur | Gour-b | Dikkasanga - K | 2015-2016 | Dept Tender | Yes |
| 27 | Kalaburagi | Afzalpur | Gour-b | Gour-b | 2017-2018 | Dept Tender | Yes |
| 28 | Kalaburagi | Afzalpur | Gudoor | Gudoor | 2012-2013 | Dept Tender | No |
| 29 | Kalaburagi | Afzalpur | Hasargundgi | Hasargundgi | 2015-2016 | Dept Tender | Yes |
| 30 | Kalaburagi | Afzalpur | Hasargundgi | Saganoor | 2015-2016 | Dept Tender | Yes |
| 31 | Kalaburagi | Afzalpur | Hasargundgi | Takali | 2017-2018 | Dept Tender | No |
| 32 | Kalaburagi | Afzalpur | Hasargundgi | Umarga | 2017-2018 | Dept Tender | Yes |
| 33 | Kalaburagi | Afzalpur | kallur | Ghattarga | 2015-2016 | Dept Tender | No |
| 34 | Kalaburagi | Afzalpur | kallur | Hawalaga | 2013-2014 | Dept Tender | No |
| 35 | Kalaburagi | Afzalpur | Kallur | Hinchagera | 2012-2013 | Dept Tender | No |
| 36 | Kalaburagi | Afzalpur | Kallur | Kallur | 2013-2014 | Dept Tender | No |
| 37 | Kalaburagi | Afzalpur | Kallur | Keshapur | 2015-2016 | Dept Tender | Yes |
| 38 | Kalaburagi | Afzalpur | Karajagi | Karajagi | 2016-17 | KRIDL | No |
| 39 | Kalaburagi | Afzalpur | Karajagi | Kodagnoor | 2012-2013 | Dept Tender | Yes |
| 40 | Kalaburagi | Afzalpur | Kognoor | Ankalaga | 2013-2014 | Dept Tender | No |
| 41 | Kalaburagi | Afzalpur | Kognoor | Goudgaon | 2013-2014 | Dept Tender | No |
| 42 | Kalaburagi | Afzalpur | Kognoor | Karbhosaga | 2017-2018 | Dept Tender | No |
| 43 | Kalaburagi | Afzalpur | Mallabad | Chincholi | 2017-2018 | Dept Tender | No |
| 44 | Kalaburagi | Afzalpur | Mallabad | Matoli | 2013-2014 | Dept Tender | No |
| 45 | Kalaburagi | Afzalpur | Mannur | Hosur | 2016-2017 | Dept Tender | Yes |
| 46 | Kalaburagi | Afzalpur | Mannur | Mannur | 2012-2013 | Dept Tender | Yes |
| 47 | Kalaburagi | Afzalpur | Mannur | Mannur | 2016-17 | KRIDL | No |
| 48 | Kalaburagi | Afzalpur | Mannur | Sheshgiri Wadi | 2015-2016 | Dept Tender | Yes |
| 49 | Kalaburagi | Afzalpur | Mashal | Balu Tanda | 2013-2014 | Dept Tender | No |
| 50 | Kalaburagi | Afzalpur | Mashal | Mashal | 2015-2016 | Dept Tender | Yes |
| 51 | Kalaburagi | Afzalpur | Mashal | Mashal | 2012-2013 | Dept Tender | Yes |
| 52 | Kalaburagi | Afzalpur | Mashal | Mashal | 2016-17 | KRIDL | No |
| 53 | Kalaburagi | Afzalpur | Neloor | Neloor | 2016-17 | KRIDL | Yes |
| 54 | Kalaburagi | Afzalpur | Neloor | Neloor | 2016-17 | KRIDL | No |
| 55 | Kalaburagi | Afzalpur | Revoor B | Revoor B | 2017-2018 | Dept Tender | No |
| 56 | Kalaburagi | Afzalpur | Tellur | Awarad | 2015-16 | Others (jalamrit scheme) | No |
| 57 | Kalaburagi | Afzalpur | Udachan | Udachan | 2016-2017 | Dept Tender | Yes |
| 58 | Kalaburagi | Afzalpur | Udachan | Udachan Hatti | 2017-2018 | Dept Tender | No |
| 59 | Kalaburagi | Kalaburagi | Basavpattan | Basavapattan | 2014-15 | Dept Tender | Yes |
| 60 | Kalaburagi | kalaburagi | Farthabad | Farthabad | 2016-17 | KRIDL | Yes |
| 61 | Kalaburagi | Kalaburagi | Farthabad | Tadtegnoor | 2012-2013 | Dept Tender | Yes |
| 62 | Kalaburagi | Kalaburagi | Ferozabad | Ferozabad | 2012-2013 | Dept Tender | Yes |

| 63 | Kalaburagi | Kalaburagi | Ferozabad | Nadi Sitnoor | 2012-2013 | Dept Tender | Yes |
|---|---|---|---|---|---|---|---|
| 64 | Kalaburagi | Kalaburagi | Heroor B | Belgumpa | 2013-14 | Dept Tender | Yes |
| 65 | Kalaburagi | kalaburagi | Heroor B | Heroor B | 2016-17 | KRIDL | No |
| 66 | Kalaburagi | kalaburagi | Honnakirangi | Honnakirangi | 2016-17 | KRIDL | No |
| 67 | Kalaburagi | Kalaburagi | Kawalga B | Basanal | 2013-14 | Dept Tender | Yes |
| 68 | Kalaburagi | Kalaburagi | Kawalga B | Hargargundagi | 2014-15 | Dept Tender | Yes |
| 69 | Kalaburagi | Kalaburagi | Kawalga B | Kawalga B | 2014-15 | Dept Tender | Yes |
| 70 | Kalaburagi | kalaburagi | Kawalga B | Kawalga B | 2016-17 | KRIDL | No |
| 71 | Kalaburagi | kalaburagi | Khanadal | Khanadal | 2016-17 | KRIDL | Yes |
| 72 | Kalaburagi | Kalaburagi | Kirangi | Kirangi | 2014-15 | Dept Tender | Yes |

EE

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1036 |
| ಸದಸ್ಯರ ಹೆಸರು | ಶ್ರೀ ಮಹಾದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು 2019-20ನೇ ಸಾಲಿನಲ್ಲಿ ಎಷ್ಟು ಕಾಮಗಾರಿಗಳು ತಡೆ ಹಿಡಿಯಲಾಗಿದೆ; (ಮತ ಕ್ಷೇತ್ರವಾರು ವಿವರ ನೀಡುವುದು) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ 2019-20ನೇ ಸಾಲಿನ ಯಾವುದೇ ಕಾಮಗಾರಿಗಳನ್ನು ತಡೆಹಿಡಿದಿರುವುದಿಲ್ಲ. ಆದರೆ ಸುತ್ತೋಲೆ ಸಂಖ್ಯೆ: ಆಇ/02/ಟಿಎಫ್‌ಪಿ/2020, ದಿ; 04.05.2020ರಲ್ಲಿ ಸರ್ಕಾರದ ಮಂಜೂರಾತಿ ಪಡೆದು ಆರಂಭಗೊಳ್ಳದಿರುವ ಕಾಮಗಾರಿಗಳನ್ನು ಪ್ರಾರಂಭಿಸಲು ಆರ್ಥಿಕ ಇಲಾಖೆಯ ಪೂರ್ವಾನುಮೋದನೆ ಪಡೆಯಬೇಕೆಂದು ಸೂಚಿಸಿರುತ್ತದೆ. |
| ಆ. | ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:197:ಆರ್‌ಆರ್‌ಸಿ:2020, ದಿನಾಂಕ:07.09.2020ರ ಆದೇಶದ ಪ್ರಕಾರ ಯಾವ ಮತ ಕ್ಷೇತ್ರದ ಕಾಮಗಾರಿಗಳನ್ನು ಮುಂದುವರೆಸಲು ತಿಳಿಸಲಾಗಿದೆ. (ಮತ ಕ್ಷೇತ್ರದ ವಿವರ ನೀಡುವುದು) | 2019-20ನೇ ಸಾಲಿನಲ್ಲಿ ಲೆ.ಶೀ; 3054ರಡಿ ಮಂಜೂರು ಮಾಡಿದ ರೂ. 187.00 ಕೋಟಿಗಳ ಮೊತ್ತದ ಕಾಮಗಾರಿಗಳನ್ನು ಆರ್ಥಿಕ ಇಲಾಖೆಯ ಸೂಚನೆಯಂತೆ ಮುಂದುವರೆಸಲಾಗಿದೆ.<br><br>ವಿಧಾನಸಭಾ ಕ್ಷೇತ್ರಗಳ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಇ. | 2018-19ರ ಕಾಮಗಾರಿಗಳನ್ನು ಯಾವ ವಿಧಾನಸಭಾ ಕ್ಷೇತ್ರದಲ್ಲಿ ತಡೆಹಿಡಿಯಲಾಗಿದೆ. | 2018-19ನೇ ಸಾಲಿನ ವಿಶೇಷ ಅನುದಾನದಡಿ ರೂ.943.48 ಕೋಟಿಗಳ ಮೊತ್ತದಲ್ಲಿ ಮಂಜೂರಾಗಿದ್ದ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳ ಕಾಮಗಾರಿಗಳನ್ನು ತಡೆಹಿಡಿಯಲಾಗಿದೆ. |
| ಈ. | 2018-19ನೇ ಸಾಲಿನ ತಡೆಹಿಡಿದಿರು ಕಾಮಗಾರಿಗಳ ಪೈಕಿ ರಾಜ್ಯದ ಯಾವ ವಿಧಾನಸಭಾ ಕ್ಷೇತ್ರಕ್ಕೆ ಸಂಪೂರ್ಣವಾಗಿ ಕಾಮಗಾರಿ ಪುನಃ ಮುಂದುವರೆಸಲಾಗಿದೆ. (ಮತ ಕ್ಷೇತ್ರದ ವಿವರ ನೀಡುವುದು) | ತಡೆಹಿಡಿದಿರುವ ಕಾಮಗಾರಿಗಳ ಪೈಕಿ ಸಂಪೂರ್ಣವಾಗಿ ಮಂಜೂರು ಮಾಡಿರುವ ವಿಧಾನಸಭಾ ಕ್ಷೇತ್ರಗಳ ಕಾಮಗಾರಿಗಳ ವಿವರಗಳನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. |

| | | |
|---|---|---|
| ಉ. | ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ 2019ರಲ್ಲಿ 3054-ಲಮ್‌ಸಮ್ ರಡಿ ರೂ.8.00 ಕೋಟಿ ಕಾಮಗಾರಿಗಳ ಟೆಂಡರ್ ಆಗಿದ್ದು; ಹಾಗೂ 3.00 ಕೋಟಿಗಳ ಆದೇಶ ನೀಡಲು 1 ವರ್ಷವಾದರೂ ಕಾಮಗಾರಿಗಳನ್ನು ಮುಂದುವರೆಸಲು ಸರ್ಕಾರಕ್ಕಿರುವ ತೊಂದರೆ ಏನು; | ಆರ್ಥಿಕ ಇಲಾಖೆಯು ಸಹಮತಿ ನೀಡಿದಂತೆ ಕಾಮಗಾರಿಗಳನ್ನು ಮುಂದುವರಿಸಲಾಗಿದೆ. |
| ಊ. | ಸರ್ಕಾರ 2019-20ನೇ ಸಾಲಿನ ಕಾಮಗಾರಿ ಮುಂದುವರೆದಲು ಆದೇಶ ಮಾಡಿ 2018-19ನೇ ಸಾಲಿನ ಕಾಮಗಾರಿಗಳನ್ನು ಮುಂದುವರೆಸಲು ತಾರತಮ್ಯ ಮಾಡುತ್ತಿರುವುದು ನಿಜವೇ; | ಇಲ್ಲ, ಆರ್ಥಿಕ ಲಭ್ಯತೆಯನ್ನಾಧರಿಸಿ ಕಾಮಗಾರಿಗಳನ್ನು ಮುಂದುವರಿಸಲಾಗಿದೆ. |
| ಋ. | ಸದರಿ ಮತಕ್ಷೇತ್ರದ ತಡೆಹಿಡಿದಿರುವ ಕಾಮಗಾರಿಗಳನ್ನು ಮುಂದುವರೆಸಲು ಯಾವಾಗ ಆದೇಶ ನೀಡಲಾಗುವುದು? | ತಡೆಹಿದಿರುವ ಕಾಮಗಾರಿಗಳನ್ನು ಆರ್ಥಿಕ ಲಭ್ಯತೆಯನ್ನಾಧರಿಸಿ ಮುಂದುವರೆಸಲು ಕ್ರಮ ಕೈಗೊಳ್ಳಬೇಕಿದೆ. |

**ಕಡತ ಸಂಖ್ಯೆ: ಗ್ರಾಅಪ:ಅಧಿ07/19:ಆರ್‌ಆರ್‌ಸಿ:2020**

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1065
ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್
ಉತ್ತರಿಸುವ ದಿನಾಂಕ : 23.09.2020
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರ ಇಲಾಖಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಡಿ ಅಂಗನವಾಡಿ ಕಾರ್ಯಕರ್ತೆಯಾಗಿ ಸೇವೆ ಸಲ್ಲಿಸುತ್ತಿರುವ ಪದವೀಧರ ಕಾರ್ಯಕರ್ತೆಯರಿಗೆ ಹತ್ತು ವರ್ಷ ಸೇವೆ ಸಲ್ಲಿಸಿದ್ದಲ್ಲಿ ಮೇಲ್ವಿಚಾರಕ ಹುದ್ದೆಗೆ ಬಡ್ತಿ ನೀಡುವಾಗ ಶೇಕಡಾ 50ರಷ್ಟು ಮೀಸಲಾತಿ ನೀಡುವಂತೆ ಕೇಂದ್ರ ಸರ್ಕಾರ ಆದೇಶ ಮಾಡಿದ್ದರೂ ಇಲಾಖೆಯಿಂದ ವೃಂದ ಮತ್ತು ನೇಮಕಾತಿಯಲ್ಲಿ ಅವಕಾಶ ಇರುವುದಿಲ್ಲವೆಂದು ಪ್ರಸ್ತಾವನೆಗಳನ್ನು ತಡೆಹಿಡಿದು ಕಾನೂನು ಇಲಾಖೆಯ ಅಭಿಪ್ರಾಯಕ್ಕೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಭಾರತ ಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮಂತ್ರಾಲಯದ ಪತ್ರ ಸಂಖ್ಯೆ:1-2/2014-CDI, ದಿನಾಂಕ:15.09.2015ರ ಮಾರ್ಗಸೂಚಿಯಲ್ಲಿ ಅಂಗನವಾಡಿ ಕಾರ್ಯಕರ್ತೆಯರ ವೃತ್ತಿಯನ್ನು ಬಲವರ್ಧನೆಗೊಳಿಸಲು ಈ ಕೆಳಗಿನಂತೆ ಅಂಶಗಳನ್ನು ಅಳವಡಿಸಿಕೊಳ್ಳಲು ಸೂಚಿಸಲಾಗಿದೆ.<br>I. **The 50% of Vacancies in the post of Supervisors would be filled up by promotion from amongst Anganwadi Workers with 10 years of experience as Anganwadi Workers and having the prescribed educational qualifications as per the Recruitment Rules for the post of Supervisors, failing which the vacancies would be filled up by direct recruitment; and**<br>II. **The remaining 50% vacancies in the posts of Supervisors would be filled up by direct recruitment.**<br>ಮೇಲಿನ ಅಂಶಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಳ್ಳುವ ವಿಚಾರದಲ್ಲಿ ಹಲವಾರು ಬಾರಿ ಆರ್ಥಿಕ ಇಲಾಖೆ/ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ/ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸೇವಾ ನಿಯಮ ಮತ್ತು ಕಾನೂನು ಇಲಾಖೆಯ ಪ್ರತಿನಿಧಿಗಳೊಂದಿಗೆ ಸಭೆ ಜರುಗಿಸಿ ಚರ್ಚಿಸಲಾಗಿದೆ. |

| | | |
|---|---|---|
| | | 2020ರ ಸಾಲಿನಲ್ಲಿ ಇಲಾಖೆಯು ಹೊಸದಾಗಿ ರಚಿಸಿದ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಮೇಲ್ವಿಚಾರಕಿಯರ ವೃಂದದ ನೇಮಕಾತಿ ವಿಧಾನದಲ್ಲಿ ಭಾರತ ಸರ್ಕಾರದ ಮಾರ್ಗಸೂಚಿಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮೇಲ್ವಿಚಾರಕಿಯರ ವೃಂದದ ಮುಂಬಡ್ತಿಗೆ ಈ ಕೆಳಗಿನಂತೆ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.<br>"ಮೇಲ್ವಿಚಾರಕಿಯರ ನೇರ ನೇಮಕಾತಿಗೆ ಶೇ.20ರಷ್ಟು ಕರ್ನಾಟಕ ನಾಗರಿಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ) (ಆಯ್ಕೆ) (ಸಾಮಾನ್ಯ) ನಿಯಮಾವಳಿ 2006ರ ಮೂಲಕ ಮತ್ತು ಶೇ.5ರಷ್ಟು ಮೇಲ್ವಿಚಾರಕಿ ವೃಂದದ ವೇತನ ಶ್ರೇಣಿಗಿಂತ ಕಡಿಮೆ ವೇತನ ಶ್ರೇಣಿ ಹೊಂದಿರುವ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರುಗಳು ನೇರ ನೇಮಕಾತಿಯಡಿ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಿದೆ."<br>"ಉಳಿದ ಶೇ.75ರಲ್ಲಿ:-<br>1. ಶೇ.25ರಷ್ಟು ಪಿ.ಯು.ಸಿ. ತೇರ್ಗಡೆ, ಜೊತೆಗೆ 10 ವರ್ಷದ ಸತತ ಸೇವೆಯ ಅಂಗನವಾಡಿ ಕಾರ್ಯಕರ್ತೆಯರಿಂದ ಆಯ್ಕೆಗೊಳಿಸಲು<br>ಶೇ.50ರಷ್ಟು ಪದವಿ ಹೊಂದಿದ್ದು, 5 ವರ್ಷಗಳ ಅಂಗನವಾಡಿ ಕಾರ್ಯಕರ್ತೆಯಾಗಿ ಸತತ ಸೇವೆ ಸಲ್ಲಿಸಿದ್ದವರನ್ನು ಆಯ್ಕೆ ಮಾಡಲು ಅವಕಾಶ ಕಲ್ಪಿಸಲಾಗಿದೆ." |
| ಆ) | ಈ ಬಗ್ಗೆ ಕಾನೂನು ಇಲಾಖೆಯು ವೃಂದ ಮತ್ತು ನೇಮಕಾತಿ ನಿಯಮಾವಳಿಗಳನ್ನು ಸರ್ಕಾರ ಬದಲಾಯಿಸಿ ಸೂಕ್ತ ನಿರ್ಧಾರ ಕೈಗೊಳ್ಳಬಹುದೆಂದು ಅಭಿಪ್ರಾಯ ನೀಡಿರುವುದು ನಿಜವೇ; | ಇಲ್ಲ<br>ಕರ್ನಾಟಕ ನಾಗರಿಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ) (ಆಯ್ಕೆ) (ಸಾಮಾನ್ಯ) ನಿಯಮಾವಳಿ 2006ನ್ನು ಕಾನೂನು ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯ ಪರಿಷ್ಕರಣೆಯೊಂದಿಗೆ ದಿನಾಂಕ:20.04.2020ರಂದು ಕ್ರೋಢೀಕೃತ ತಿದ್ದುಪಡಿಯನ್ನು ಹೊರಡಿಸಲಾಗಿದೆ. |

1065

| ಇ) | ಹಾಗಿದ್ದಲ್ಲಿ, ಹತ್ತು ವರ್ಷ ಸೇವೆ ಸಲ್ಲಿಸಿದ ಪದವೀಧರ ಅಂಗನವಾಡಿ ಕಾರ್ಯಕರ್ತೆಯರಿಗೆ ಸೂಕ್ತ ನ್ಯಾಯ ಒದಗಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಕನಿಷ್ಟ 5 ವರ್ಷಗಳ ಸತತ ಸೇವೆ ಸಲ್ಲಿಸಿದ ಪದವೀಧರ ಅಂಗನವಾಡಿ ಕಾರ್ಯಕರ್ತೆಯರಿಗೆ ನೇರ ನೇಮಕಾತಿ ಕೋಟಾದಡಿ ಶೇ.50ರಷ್ಟು ಹುದ್ದೆಗಳನ್ನು ಮೀಸಲಿರಿಸಿ ಭರ್ತಿ ಮಾಡುವಲ್ಲಿ ಅವಕಾಶ ಕಲ್ಪಿಸಲಾಗಿದೆ. |
|---|---|---|

ಸಂ: ಮಮಇ 242 ಎಸ್‌ಜೆಡಿ 2020

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖಾ ಸಚಿವರು.

ಕರ್ನಾಟಕ ವಿಧಾನಸಭೆ
**15ನೇ ವಿಧಾನಸಭೆ**
**7ನೇ ಅಧಿವೇಶನ**

ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1051**
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಉಮಾನಾಥ. ಎ. ಕೋಟ್ಯಾನ್
ಉತ್ತರಿಸಬೇಕಾದ ದಿನಾಂಕ : 23-09-2020
ಉತ್ತರಿಸುವವರು : ಮಾನ್ಯ ಸಚಿವರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ವ್ಯಾಪ್ತಿಯಲ್ಲಿ ಅನುಷ್ಠಾನ ಗೊಳಿಸುತ್ತಿರುವ ಮಕ್ಕಳ ಮತ್ತು ಪ್ರಾಯ ಪೂರ್ವ ಬಾಲಕಿಯರ ಯೋಜನೆಯಡಿ ಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಮಕ್ಕಳು ಮತ್ತು ಬಾಲಕಿಯರಿಗೆ ಯೋಜನಾ ಸೌಲಭ್ಯಗಳನ್ನು ನೀಡಲಾಗಿದೆ. | **ವಿವರಗಳನ್ನು ಅನುಬಂಧ-1**ರಲ್ಲಿ ಒದಗಿಸಲಾಗಿದೆ. |
| ಆ) | ಸರ್ಕಾರ ನಿಗದಿಪಡಿಸಿರುವ ಎಲ್ಲಾ ಯೋಜನಾ ಸೌಲಭ್ಯಗಳನ್ನು ಫಲಾನುಭವಿ ಗಳಿಗೆ ತಲುಪಿಸುಲ್ಲಿ ಯೋಜನಾನುದಾನ ವನ್ನು ಸಕಾಲಿಕವಾಗಿ ಬಳಸಿ ಫಲಾನುಭವಿ ಗಳಿಗೆ ತಲುಪಿಸುವಲ್ಲಿ ಗುರಿ ಮತ್ತು ಸಾಧನೆಗಳ ಎರಡು ವರ್ಷದ ವಿವರಗಳೇನು; | **ವಿವರಗಳನ್ನು ಅನುಬಂಧ**-2ರಲ್ಲಿ ಒದಗಿಸಲಾಗಿದೆ. |
| ಇ) | ಪ್ರಧಾನಮಂತ್ರಿಯವರ ವಂದನಾ ಯೋಜನೆಯ ವಿವರಗಳು ಹಾಗೂ ಯೋಜನೆಯ ಅನುಷ್ಠಾನದ ವಿವರಗಳೇನು; ವಿಶೇಷಿತ ಗ್ರಾಮೀಣರಿಗೆ ಯೋಜನೆಗಳ ಕುರಿತು ಅರಿವು ಮೂಡಿಸುವ ಸೌಲಭ್ಯ ತಲುಪಿಸುವ ಕುರಿತು ಇಲಾಖೆಯ ಕ್ರಮಗಳೇನು; | "ಇಂದಿರಾ ಗಾಂಧಿ ಮಾತೃತ್ವ ಸಹಯೋಗ ಯೋಜನೆ"ಯನ್ನು 2017 ರಲ್ಲಿ ಮರು ನಾಮಕರಣ ಮಾಡಿ ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ ಎಂಬ ಹೆಸರಿನೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ.<br>**ಯೋಜನೆಯಡಿ ಒದಗಿಸುವ ಸೌಲಭ್ಯಗಳು:**<br>• ಇದು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, ಗರ್ಭಿಣಿ/ಬಾಣಂತಿ ಮಹಿಳೆಯರಿಗೆ ರೂ.5000/-ಗಳ ಸಹಾಯಧನವನ್ನು ಮೂರು ಕಂತುಗಳಲ್ಲಿ ನೇರ ನಗದು ವರ್ಗಾವಣೆ ಮೂಲಕ ಫಲಾನುಭವಿಯ ಖಾತೆಗೆ ವರ್ಗಾಯಿಸಲಾಗುವುದು.<br>• **1ನೇ ಕಂತು: ರೂ.1000/-ಗಳನ್ನು** ಗರ್ಭಿಣಿ ಎಂದು ಅಂಗನವಾಡಿ ಕೇಂದ್ರಗಳಲ್ಲಿ ನೋಂದಣಿಯಾದಾಗ (150 ದಿನಗಳೊಳಗಾಗಿ) ವರ್ಗಾಯಿಸಲಾಗುವುದು.<br>• **2ನೇ ಕಂತು:** ರೂ. 2000/-ಗಳನ್ನು ಕನಿಷ್ಠ ಒಂದು ಆರೋಗ್ಯ ತಪಾಸಣೆಕ್ಕೈಗೊಂಡಾಗ (ಗರ್ಭಿಣಿಯಾಗಿ 6ತಿಂಗಳ ನಂತರ) ವರ್ಗಾಯಿ ಸಲಾಗುವುದು.<br>• **3ನೇ ಕಂತು:** ರೂ.2000/-ಗಳನ್ನು ಮಗುವಿನ ಜನನದ ನಂತರ ಜನನ ನೋಂದಣಿ ಮತ್ತು ಮೊದಲನೇ ಹಂತದ ಚುಚ್ಚುಮದ್ದು (OPV, BCG, DPT, Hepatitis-B ಅಥವಾ ಬದಲಿ |

| | | |
|---|---|---|
| | | ಲಸಿಕೆಯನ್ನು ಪಡೆದಲ್ಲಿ)ಪಡೆದ ನಂತರ ವರ್ಗಾಯಿಸಲಾಗುವುದು.<br><br>**ಯೋಜನೆಯ ಫಲಾನುಭವಿಗಳು:**<br>• ಸದರಿ ಯೋಜನೆಯ ಸೌಲಭ್ಯವು ಮೊದಲ ಜೀವಂತ ಹೆರಿಗೆಗೆ ಮಾತ್ರ ಸೀಮಿತವಾಗಿರುತ್ತದೆ.<br>• ಕೇಂದ್ರ/ರಾಜ್ಯ ಸರ್ಕಾರಿ ನೌಕರರು ಹಾಗೂ ಸಾರ್ವಜನಿಕ ಉದ್ದಿಮೆಗಳ ನೌಕರರನ್ನು ಹೊರತು ಪಡಿಸಿ ಎಲ್ಲಾ ಗರ್ಭಿಣಿ ಮತ್ತು ಬಾಣಂತಿಯರು, ಈ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.<br><br>**ಯೋಜನೆಯ ಅನುಷ್ಠಾನ :** ಈ ಯೋಜನೆಯನ್ನು ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಅಂಗನವಾಡಿ ಕಾರ್ಯಕರ್ತೆಯರು, ಗರ್ಭಿಣಿ/ಬಾಣಂತಿಯರಿಂದ ಅರ್ಜಿಗಳನ್ನು ಮತ್ತು ದಾಖಲೆಗಳನ್ನು ಪಡೆದು ಮೇಲ್ವಿಚಾರಕಿ ಮೂಲಕ ಯೋಜನಾ ಕಛೇರಿ ಸಲ್ಲಿಸುತ್ತಾರೆ. ಯೋಜನಾ ಕಚೇರಿಯಲ್ಲಿ ಕೇಂದ್ರ ಸರ್ಕಾರವು ಅಭಿವೃದ್ಧಿ ಪಡಿಸಿರುವ COMMON APPLICATION SOFTWARE ತಂತ್ರಾಂಶದ ಮೂಲಕ ಮಂಜೂರಾತಿ ನೀಡಲಾಗುತ್ತಿದೆ. ಸಹಾಯಧನವನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಡಿಬಿಟಿ ಮೂಲಕ ಜಮೆ ಮಾಡಲಾಗುತ್ತದೆ.<br><br>**ಅರಿವು ಮೂಡಿಸಲು ಇಲಾಖೆಯಿಂದ ಕೈಗೊಂಡ ಕ್ರಮಗಳು:**<br>• ಸಾರ್ವಜನಿಕರಿಗೆ ಅರಿವು ಮೂಡಿಸಲು ಬ್ರೋಚರ್ಸ್, ಕರ ಪತ್ರಗಳನ್ನು ತಯಾರಿಸಲಾಗಿದೆ,<br>• ಪ್ರತಿ ವರ್ಷ ನವೆಂಬರ್ ಮಾಹೆಯಲ್ಲಿ ಮಾತೃವಂದನಾ ಸಪ್ತಾಹ ಕಾರ್ಯ ಕ್ರಮವನ್ನು ಎಲ್ಲಾ ಗ್ರಾಮಗಳಲ್ಲಿ ಹಮ್ಮಿಕೊಳ್ಳಲಾಗುತ್ತಿದೆ.<br>• ವಾರ್ತಾ ಪತ್ರಿಕೆಗಳಲ್ಲಿ ಜಾಹೀರಾತು ನೀಡುವ ಮೂಲಕ ಹಾಗೂ ದೂರದರ್ಶನ ಕಾರ್ಯಕ್ರಮಗಳ ಮೂಲಕ ಯೋಜನೆಯ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.<br>• ಸದರಿ ಯೋಜನೆಯ ಸೌಲಭ್ಯವು ಮೊದಲ ಜೀವಂತ ಹೆರಿಗೆಗೆ ಮಾತ್ರ ಸೀಮಿತವಾಗಿರುತ್ತದೆ.<br>• ತಾಯಿ ಮತ್ತು ಮಗುವಿನ ರಕ್ಷಣಾ (ಎಮ್.ಸಿ.ಪಿ) ಕಾರ್ಡ್‌ನಲ್ಲಿರುವ ಕೊನೆಯ ಮುಟ್ಟಿನ ದಿನಾಂಕದ ಆಧಾರದ ಮೇಲೆ ಫಲಾನುಭವಿ ಗರ್ಭವತಿ ಆಗಿರುವ (ಎಲ್.ಎಂ.ಪಿ) ದಿನಾಂಕ ಮತ್ತು ಹಂತವನ್ನು ಗಣನೆಗೆ ತೆಗೆದು ಕೊಳ್ಳಲಾಗುವುದು. |
| ಈ) | ಮೂಲ್ಕಿ/ ಮೂಡಬಿದ್ರೆ ಕ್ಷೇತ್ರ ವ್ಯಾಪ್ತಿಯಲ್ಲಿನ ಅಂಗನವಾಡಿ ಕಟ್ಟಡಗಳ ಸುವ್ಯವಸ್ಥೆ ಕುರಿತಾದ ಕ್ರಮಗಳೇನು; ಎಷ್ಟು ಅಂಗನವಾಡಿ ಕೇಂದ್ರಗಳು ಬಾಡಿಗೆ ಕಟ್ಟಡಗಳಲ್ಲಿ ನಡೆಯುತ್ತಿವೆ ಹಾಗೂ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರದ ಸಕಾಲಿಕ ಕ್ರಮಗಳೇನು? | ▪ 2019-20ನೇ ಸಾಲಿನಲ್ಲಿ 10 ಅಂಗನವಾಡಿ ಕಟ್ಟಡಗಳನ್ನು ನಿರ್ವಹಣೆಯಡಿ ದುರಸ್ತಿಗೊಳಿಸಲಾಗಿದೆ. 7 ಅಂಗನವಾಡಿ ಕಟ್ಟಡಗಳಿಗೆ ತಲಾ ರೂ.1.00 ಲಕ್ಷದಂತೆ ನಗರ ಪ್ರದೇಶ ಅನುದಾನದಡಿ ದುರಸ್ಥಿಗೊಳಿಸಲಾಗಿದೆ. 4 ಅಂಗನವಾಡಿ ಕಟ್ಟಡಗಳಿಗೆ ತಲಾ ರೂ. 1.00 ಲಕ್ಷದಂತೆ ಉನ್ನತೀಕರಣಕ್ಕೆ ಅನುದಾನ ಬಿಡುಗಡೆಯಾಗಿದೆ.<br>▪ 4 ಕೇಂದ್ರಗಳು ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿವೆ.<br>▪ ಈ ಕ್ಷೇತ್ರ ವ್ಯಾಪ್ತಿಯಲ್ಲಿ 221 ಕೇಂದ್ರಗಳು ಮಂಜೂರಾಗಿದ್ದು, 196 ಅಂಗನವಾಡಿ ಕೇಂದ್ರಗಳಿಗೆ ಸ್ವಂತ ಕಟ್ಟಡವಿದ್ದು, 5 ಕೇಂದ್ರಗಳ |

| | | |
|---|---|---|
| | | ಕಟ್ಟಡ ಕಾಮಗಾರಿಯು ವಿವಿಧ ಯೋಜನೆಯಡಿ ಮಂಜೂರಾಗಿದ್ದು, ಪ್ರಗತಿ ಹಂತದಲ್ಲಿರುತ್ತದೆ.<br>▪ ಉಳಿದ 21 ಕೇಂದ್ರಗಳು ಬಾಡಿಗೆ &ಪರ್ಯಾಯ ವ್ಯವಸ್ಥೆಯಡಿ<br>▪ ಕಾರ್ಯನಿರ್ವಹಿಸುತ್ತಿದ್ದು, ಇವುಗಳಿಗೆ ನಿವೇಶನ ಲಭ್ಯವಿರುವುದಿಲ್ಲ. ನಿವೇಶನ ಹಾಗೂ ಅನುದಾನ ಲಭ್ಯತೆಗನುಗುಣವಾಗಿ ಹಂತ ಹಂತವಾಗಿ ಕಟ್ಟಡ ನಿರ್ಮಿಸಲು ಕ್ರಮವಹಿಸಲಾಗುತ್ತಿದೆ. |

**ಸಂ:ಮಮಇ 187 ಸ್ಲೀಮರ 2020**

(ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಅನುಬಂಧ–1

## 1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

### ಅ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸುತ್ತಿರುವ ಮಕ್ಕಳ ಮತ್ತು ಪ್ರಾಯ ಪೂರ್ವ ಬಾಲಕಿಯರ ಯೋಜನೆಯಡಿಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಮಕ್ಕಳು ಮತ್ತು ಬಾಲಕಿಯರಿಗೆ ಒದಗಿಸಿರುವ ಸೌಲಭ್ಯಗಳ ವಿವರ

| ಕ್ರಸಂ | ಯೋಜನೆ/ ಫಲಾನುಭವಿಗಳ ವಿವರ | 2018–19ನೇ ಸಾಲಿನಲ್ಲಿ ಯೋಜನೆ ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ | 2019–20ನೇ ಸಾಲಿನಲ್ಲಿ ಯೋಜನೆ ಸೌಲಭ್ಯ ಪಡೆದ ಫಲಾನುಭ ವಿಗಳ ಸಂಖ್ಯೆ |
|---|---|---|---|
| 1. | ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮ (6 ತಿಂಗಳಿಂದ 6 ವರ್ಷದ ಮಕ್ಕಳು) | 3686771 | 3575604 |
| 2. | ಪ್ರಾಯಪೂರ್ವ ಬಾಲಕಿಯರು | 27127 | 15566 |
| 3. | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ | 10000 | 10000 |
| 4. | ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ | 480637 | 335400 |
| 5. | ಮಾತೃಶ್ರೀ | 36818 | 379728 |
| 6. | ರಾಷ್ಟ್ರೀಯ ಶಿಶು ಪಾಲನಾ ಕೇಂದ್ರ | 15275 | 15275 |
| 7. | ಸ್ತ್ರೀಶಕ್ತಿ ಯೋಜನೆ | 10051 | 7500 |
| 8. | ಸಾಂತ್ವನ | 48948 | 66401 |
| 9. | ಬಾಲಕಿಯರ ವಸತಿ ನಿಲಯ | 2569 | 2569 |
| 10. | ಡಿ.ವಿ.ಕಾಯ್ದೆ | 4075 | 3536 |
| 11. | ಗೆಳತಿ–ವಿ.ಚಿ.ಫ | 2338 | 1317 |
| 12. | ಸ್ವಾಧಾರ ಗೃಹ | 1410 | 1227 |
| 13. | ಸ್ಥೈರ್ಯ ನಿಧಿ | – | 66401 |
| 14. | ಹೊಯ್ಸಳ ಮತ್ತು ಕೆಳದಿ ಚೆನ್ನಮ್ಮ ಶೌರ್ಯ | 369 | 245 |
| 15. | ಭಾಗ್ಯಲಕ್ಷ್ಮಿ ಯೋಜನೆ | 150552 | 150569 |

# ಅನುಬಂಧ-2

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಅನುಷ್ಠಾನಗೊಳ್ಳುತ್ತಿರುವ ಯೋಜನೆ/ಕಾರ್ಯಕ್ರಮಗಳ ಆರ್ಥಿಕ ಮತ್ತು ಭೌತಿಕ ಗುರಿ ಮತ್ತು ಸಾಧನೆಯ ವಿವರ

| ಕ್ರಸಂ | ಯೋಜನೆಯ ಹೆಸರು | ಆರ್ಥಿಕ ವರ್ಷ 2018-19 (ರೂ. ಲಕ್ಷಗಳಲ್ಲಿ) | | | | ಆರ್ಥಿಕ ವರ್ಷ 2019-20 (ರೂ. ಲಕ್ಷಗಳಲ್ಲಿ) | | | |
|---|---|---|---|---|---|---|---|---|---|
| | | ಭೌತಿಕ ಗುರಿ | ಭೌತಿಕ ಸಾಧನೆ | ಆರ್ಥಿಕ ಗುರಿ | ಆರ್ಥಿಕ ಸಾಧನೆ | ಭೌತಿಕ ಗುರಿ | ಭೌತಿಕ ಸಾಧನೆ | ಆರ್ಥಿಕ ಗುರಿ | ಆರ್ಥಿಕ ಸಾಧನೆ |
| 1. | ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮ (ಸಮಗ್ರ) | 5060654 | 4506412 | 215042.00 | 156487.68 | 5060654 | 4279858 | 205442.00 | 147736.28 |
| 2. | ಪ್ರಾಯಪೂರ್ವ ಬಾಲಕಿಯರು | 27127 | 27127 | 423.00 | 12.66 | 17106 | 15566 | 200.00 | 75.26 |
| 3. | ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ | 200 | 10000 | 166.93 | 8346.00 | 200 | 10000 | 163.20 | 9506.00 |
| 4. | ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ | 180000 | 480637 | 10000.00 | 7228.17 | 19800 | 335400 | 1000.00 | 22982.74 |
| 5. | ಮಾತೃಶ್ರೀ | 583249 | 36818 | 3500.00 | 515.72 | 5244777 | 379728 | 47000.00 | 7824.29 |
| 6. | ರಾಷ್ಟ್ರೀಯ ಶಿಶು ಪಾಲನಾ ಕೇಂದ್ರ | 15275 | 15275 | 914.00 | 0.00 | 15275 | 15275 | 200.00 | 750.14 |
| 7. | ಸ್ತ್ರೀಶಕ್ತಿ ಯೋಜನೆ | 10152 | 10051 | 1470.00 | 1224.64 | 7729 | 7500 | 1105.86 | 949.36 |
| 8. | ಸಾಂತ್ವನ | 194 ಕೇಂದ್ರಗಳು | 48948 | 729.00 | 726.08 | 193 ಕೇಂದ್ರಗಳು | 66401 | 1380.00 | 1256.57 |
| 9. | ಬಾಲಕಿಯರ ವಸತಿ ನಿಲಯ | 40 ಕೇಂದ್ರಗಳು | 2569 | 475.00 | 474.68 | 41 ಕೇಂದ್ರಗಳು | 2569 | 532.00 | 456.50 |
| 10. | ಡಿ.ವಿ.ಕಾಯ್ದೆ | 234 ಕೇಂದ್ರಗಳು | 4075 | 566.49 | 559.38 | 234 ಕೇಂದ್ರಗಳು | 3536 | 723.50 | 701.50 |
| 11. | ಗೆಳತಿ-ವಿ.ಚಿ.ಫ | 33 ಕೇಂದ್ರಗಳು | 2338 | 262.51 | 223.24 | 33 ಕೇಂದ್ರಗಳು | 1317 | 194.61 | 109.95 |
| 12. | ಸ್ವಾಧಾರ ಗೃಹ | 47 ಕೇಂದ್ರಗಳು | 1410 | 300.00 | 300.00 | 53 ಕೇಂದ್ರಗಳು | 1227 | 425.57 | 425.57 |
| 13. | ಸ್ಥೈರ್ಯ ನಿಧಿ | – | – | 20.00 | 20.00 | 193 ಕೇಂದ್ರಗಳು | 66401 | 1380.00 | 1256.57 |
| 14. | ಹೊಯ್ಸಳ ಮತ್ತು ಕೆಳದಿ ಚೆನ್ನಮ್ಮ ಶೌರ್ಯ | 369 | 369 | 44.00 | 43.83 | 245 | 245 | 30.00 | 25.36 |
| 15. | ಭಾಗ್ಯಲಕ್ಷ್ಮಿ ಯೋಜನೆ | 150552 | 150552 | 29443.00 | 29442.00 | 150569 | 150569 | 29442.19 | 29430.33 |

ಕರ್ನಾಟಕ ವಿಧಾನಸಭೆ
15ನೇ ವಿಧಾನಸಭೆ
7ನೇ ಅಧಿವೇಶನ

ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1068
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಗಣೇಶ್ ಜೆ.ಎನ್. (ಕಂಪ್ಲಿ)
ಉತ್ತರಿಸಬೇಕಾದ ದಿನಾಂಕ : 23-09-2020
ಉತ್ತರಿಸುವವರು : ಮಾನ್ಯ ಸಚಿವರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ವತಿಯಿಂದ ಯಾವ ಯೋಜನೆಗಳಿವೆ; ಅವುಗಳ ಮಂಜೂರಾತಿಗಾಗಿ ಇರುವಂತಹ ಮಾನದಂಡಗಳೇನು. | 1. <u>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ:</u><br>ಮಾಹಿತಿಯನ್ನು **ಅನುಬಂಧ-1**ರಲ್ಲಿ ಲಗತ್ತಿಸಿದೆ.<br><br>**<u>2.ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ</u>**<br>ಯೋಜನೆಗಳ ವಿವರ ಹಾಗೂ ಯೋಜನೆಗಳ ಮಾನದಂಡಗಳ ವಿವರವನ್ನು ಅನುಬಂಧ 2 ರಲ್ಲಿ ಲಗತ್ತಿಸಿದೆ.<br>**3. ಸಮಗ್ರ ಮಕ್ಕಳ ರಕ್ಷಣಾ ಯೋಜನೆ**<br>ಫಲಾನುಭವಿ ಆಧಾರಿತವಾಗಿ ಪ್ರಾಯೋಜಕತ್ವ ಕಾರ್ಯಕ್ರಮ ಮತ್ತು ವಿಶೇಷ ಪಾಲನಾ ಯೋಜನೆಯನ್ನು ನಿರ್ವಹಿಸಲಾಗುತ್ತಿದೆ.<br>ಮಂಜೂರಾತಿಗಾಗಿ ಇರುವ ಮಾನದಂಡಗಳ ವಿವರಗಳನ್ನು **ಅನುಬಂಧ-3 ರಲ್ಲಿ** ಲಗತ್ತಿಸಿದೆ.<br>ಅಲ್ಲದೆ ಪಾಲನೆ ಮತ್ತು ರಕ್ಷಣೆಗೆ ಅಗತ್ಯವಿರುವ ಮಕ್ಕಳಿಗಾಗಿ ಸಮಗ್ರ ಮಕ್ಕಳ ರಕ್ಷಣಾ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>• ಬಾಲ ನ್ಯಾಯ (ಮಕ್ಕಳ ಪೋಷಣೆ ಮತ್ತು ರಕ್ಷಣೆ) ಕಾಯ್ದೆ 2015 ರಡಿ ರಕ್ಷಣೆ ಮತ್ತು ಪೋಷಣೆ ಅಗತ್ಯವಿರುವ ಮಕ್ಕಳಿಗಾಗಿ ಸರ್ಕಾರದಿಂದ 62 ಬಾಲಮಂದಿರಗಳನ್ನು (ಗಂಡು ಮಕ್ಕಳಿಗಾಗಿ: 30 ಬಾಲಮಂದಿರಗಳು ಮತ್ತು 1 ಮನೋವಿಕಲ ಬಾಲಮಂದಿರಗಳು, ಹೆಣ್ಣು ಮಕ್ಕಳಿಗಾಗಿ 29 ಬಾಲಕಿಯರ ಬಾಲಮಂದಿರಗಳು, ಮತ್ತು 1 ಮನೋವಿಕಲ ಬಾಲಮಂದಿರಗಳು, ಶಿಶು ಮಂದಿರ-1 (0ರಿಂದ 6ವರ್ಷದ ಮಕ್ಕಳಿಗಾಗಿ) ನಡೆಸಲಾಗುತ್ತಿದೆ.<br>• ಕಾನೂನು ಸಂಘರ್ಷಕ್ಕೊಳಗಾದ ಮಕ್ಕಳಿಗಾಗಿ 17 ವೀಕ್ಷಣಾಲಯಗಳನ್ನು ಸರ್ಕಾರದಿಂದ ಹಾಗೂ 1 ವಿಶೇಷ ಗೃಹವನ್ನು ಸ್ವಯಂ ಸೇವಾ ಸಂಸ್ಥೆಯ ಮೂಲಕ ನಡೆಸಲಾಗುತ್ತಿದೆ.<br>• ಸರ್ಕಾರವು ಸ್ವಯಂ ಸೇವಾ ಸಂಸ್ಥೆಗಳನ್ನು |

| | | |
|---|---|---|
| | | ಬಾಲನ್ಯಾಯ ಕಾಯ್ದೆಯಡಿ ನೋಂದಣಿ ಮಾಡಿಕೊಂಡು ಅರ್ಹವಿರುವ ಸಂಸ್ಥೆಗಳನ್ನು ಅರ್ಹ ಸಂಸ್ಥೆಯೆಂದು ಮಾನ್ಯತೆ ನೀಡುತ್ತಿದೆ. ಅಂತಹ ಸಂಸ್ಥೆಗಳಿಗೆ ರಕ್ಷಣೆ ಮತ್ತು ಪೋಷಣೆಯ ಅಗತ್ಯವಿರುವ ಮಕ್ಕಳನ್ನು 33 ಮಕ್ಕಳ ಕಲ್ಯಾಣ ಸಮಿತಿ ಹಾಗೂ 30 ಬಾಲನ್ಯಾಯ ಮಂಡಳಿಗಳ ಮೂಲಕ ದಾಖಲಿಸಲಾಗುವುದು. ಅಂತಹ 6 ಅನುದಾನಿತ ಸ್ವಯಂ ಸೇವಾ ಸಂಸ್ಥೆಗಳಿಂದ ನಿರ್ವಹಿಸಲ್ಪಡುತ್ತಿರುವ ಮಕ್ಕಳ ಪಾಲನಾ ಸಂಸ್ಥೆಗಳು (ಅರ್ಹಸಂಸ್ಥೆ) ಹಾಗೂ ಒಂದು ವಿಶೇಷ ಗೃಹ ಕಾರ್ಯನಿರ್ವಹಿಸುತ್ತಿವೆ.<br>• ನಗರ ಮತ್ತು ಅರೆನಗರ ಪ್ರದೇಶದಲ್ಲಿ ಬೀದಿ ಮಕ್ಕಳ ರಕ್ಷಣೆಗಾಗಿ 35 ತೆರೆದ ತಂಗುದಾಣಗಳನ್ನು ನಡೆಸಲಾಗುತ್ತಿದೆ.<br><br>ಸದರಿ ಯೋಜನೆಯನ್ನು ಈ ಕೆಳಕಂಡ ಭಾರತ ಸರ್ಕಾರದ ಮಾನದಂಡಗಳನ್ವಯ (ಕಾಯ್ದೆ ಮತ್ತು ನಿಯಮಗಳನ್ವಯ) ಕಾರ್ಯಗತಗೊಳಿಸಲಾಗುತ್ತಿದೆ.<br>• ಬಾಲ ನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯ್ದೆ 2015,<br>• ಬಾಲ ನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಮಾದರಿ ನಿಯಮಗಳು, 2016,<br>• ಸಮಗ್ರ ಮಕ್ಕಳ ರಕ್ಷಣಾ ಮಾರ್ಗಸೂಚಿಗಳು<br><br>**4. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ.**<br>ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಯೋಜನೆ ಹಾಗೂ ಮಾನದಂಡಗಳನ್ನು **ಅನುಬಂಧ-4** ರಲ್ಲಿ ಲಗತ್ತಿಸಿದೆ.<br><br>**5. ಕರ್ನಾಟಕ ಬಾಲವಿಕಾಸ ಅಕಾಡೆಮಿ:**<br>ಅಕಾಡೆಮಿಯಿಂದ ಯಾವುದೇ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿಲ್ಲ. ಬದಲಾಗಿ 0-18 ವರ್ಷದ ಮಕ್ಕಳಿಗೆ ವಿವಿಧ ವೈವಿಧ್ಯಮಯ ಕಾರ್ಯಕ್ರಮ ಗಳನ್ನು ಆಯೋಜಿಸಲಾಗುತ್ತಿದೆ. |
| ಆ | 2017-18ನೇ ಸಾಲಿನಿಂದ ಇಲ್ಲಿಯವರೆಗೆ ಈ ಯೋಜನೆಗಳ ಅಡಿ ಬಳ್ಳಾರಿ ಜಿಲ್ಲೆಯಲ್ಲಿ ಯಾವ ಯೋಜನೆಗಳನ್ನು ಕೈಗೊಳ್ಳಲಾಗಿದೆ? (ತಾಲ್ಲೂಕುವಾರು ವಿವರ ನೀಡುವುದು) | 1. <u>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ:</u><br>2017-18ನೇ ಸಾಲಿನಿಂದ ಇಲ್ಲಿಯವರೆಗೆ ಬಳ್ಳಾರಿ ಜಿಲ್ಲೆಯಲ್ಲಿರುವ ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಸಿರುಗುಪ್ಪ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಹರಪನಹಳ್ಳಿ ತಾಲ್ಲೂಕುಗಳಲ್ಲಿ ಅನುಷ್ಠಾನಗೊಳ್ಳುತ್ತಿರುವ ಯೋಜನೆಗಳ ಮಾಹಿತಿ ಯನ್ನು ಅನುಬಂಧ-5ರಲ್ಲಿ ಲಗತ್ತಿಸಿದೆ.<br><br>2. <u>ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ</u><br>ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಂಡೂರು, ಹಡಗಲಿ, |

1068

ಹಗರಿಬೊಮ್ಮನಹಳ್ಳಿ, ಸಿರುಗುಪ್ಪ, ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ ತಾಲ್ಲೂಕುಗಳಿದ್ದು, ಎಲ್ಲಾ ತಾಲ್ಲೂಕಿನಲ್ಲಿ ವಿಕಲಚೇತನರು ಹಾಗೂ ಹಿರಿಯ ನಾಗರಿಕರಿಗಾಗಿ ಇಲಾಖೆಯಡಿ ಬರುವ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**3. ಸಮಗ್ರ ಮಕ್ಕಳ ರಕ್ಷಣಾ ಯೋಜನ**

2017-18ನೇ ಸಾಲಿನಿಂದ ಇಲ್ಲಿಯವರೆಗೆ ಬಳ್ಳಾರಿ ಜಿಲ್ಲೆಯಲ್ಲಿ ಪ್ರಾಯೋಜಕತ್ವ ಕಾರ್ಯಕ್ರಮ ಮತ್ತು ವಿಶೇಷ ಪಾಲನಾ ಯೋಜನೆಯನ್ನು ಕೈಗೊಳ್ಳಲಾಗಿದೆ. ಫಲಾನುಭವಿಗಳ ಜಿಲ್ಲಾವಾರು ವಿವರ ಈ ಮುಂದಿನಂತಿದೆ;

| ಕ್ರ ಸಂ | ಯೋಜನೆ | 2017-18 | 2018-19 | 2019-20 |
|---|---|---|---|---|
| 1 | ಪ್ರಾಯೋಜಕತ್ವ ಕಾರ್ಯಕ್ರಮ | 200 | 80 | 50 |
| 2 | ವಿಶೇಷ ಪಾಲನಾ ಯೋಜನೆ | 1359 | 1318 | 1290 |

ಬಳ್ಳಾರಿ ಜಿಲ್ಲೆಯಲ್ಲಿ ಸಮಗ್ರ ಮಕ್ಕಳ ರಕ್ಷಣಾ ಯೋಜನೆಯಡಿ 1 ಬಾಲಕರ ಬಾಲಮಂದಿರ, 1 ಬಾಲಕಿಯರ ಬಾಲಮಂದಿರ, 1 ಮನೋವಿಕಲ ಬಾಲಕರ ಬಾಲಮಂದಿರ, 1 ವೀಕ್ಷಣಾಲಯಗಳು ಕಾರ್ಯನಿರ್ವಹಿಸುತ್ತಿವೆ.

**4. ಕರ್ನಾಟಕ ಬಾಲವಿಕಾಸ ಅಕಾಡೆಮಿ:**

ಕರ್ನಾಟಕ ಬಾಲವಿಕಾಸ ಅಕಾಡೆಮಿಗೆ ಕಾರ್ಯಕ್ರಮಗಳ ಆಯೋಜನೆಗೆ ಹಾಗೂ ಸಿಬ್ಬಂದಿ ವೇತನ ಬಾಬುಗಳು ಒಳಗೊಂಡು ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿದೆ.

| ಕ್ರ ಸಂ | ವರ್ಷ | ಬಿಡುಗಡೆಯಾದ ಅನುದಾನ |
|---|---|---|
| 1 | 2017-18 | 300.00 ಲಕ್ಷಗಳು |
| 2 | 2018-19 | 150.00 ಲಕ್ಷಗಳು |
| 3 | 2019-20 | 140.00 ಲಕ್ಷಗಳು |
| 4 | 2020-21 | 139.00 ಲಕ್ಷಗಳು |

ಅಕಾಡೆಮಿಯಿಂದ ಯಾವುದೇ ಯೋಜನೆಗಳನ್ನು ಅನುಷ್ಠಾನ ಗೊಳಿಸುತ್ತಿಲ್ಲ. ಬದಲಾಗಿ 0-18 ವರ್ಷದ ಮಕ್ಕಳಿಗೆ ವಿವಿಧ ವೈವಿಧ್ಯಮಯ ಕಾರ್ಯಕ್ರಮ ಗಳನ್ನು ಆಯೋಜಿಸಲಾಗುತ್ತಿದೆ.

**ಸಂ:ಮಮಇ 187 ಸ್ತ್ರೀಮರ 2020**

(ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1069

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ಗಣೇಶ್ ಜಿ.ಎನ್. (ಕಂಪ್ಲಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯವತಿಯಿಂದ ರಾಜ್ಯದಲ್ಲಿ ಯಾವ ಯೋಜನೆಗಳನ್ನು ರೂಪಿಸಲಾಗಿರುತ್ತದೆ, ಅದಕ್ಕೆ ಇರುವಂತಹ ಮಾನ ದಂಡಗಳೇನು; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ರಾಜ್ಯದಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ ಮತ್ತು ಮಾನದಂಡಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಆ) | ಬಳ್ಳಾರಿ ಜಿಲ್ಲೆಯಲ್ಲಿ ಬರುವಂತಹ ಎಲ್ಲಾ ತಾಲ್ಲೂಕು ಕೇಂದ್ರಗಳಿಗೆ ಮತ್ತು ಗ್ರಾಮಗಳಿಗೆ 2016-17 ರಿಂದ ಇಲ್ಲಿಯವರೆಗೆ ಯಾವ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗಿದೆ (ವಿವರ ನೀಡುವುದು) | ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಮತ್ತು ಗ್ರಾಮಗಳಲ್ಲಿ 2016-17 ರಿಂದ ಇಲಾಖೆಯ ವತಿಯಿಂದ ಕೈಗೊಳ್ಳಲಾಗಿರುವ ಯೋಜನೆಗಳ ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಿದೆ. |

ವೈಎಸ್ ಡಿ-/ಇಬಿಬಿ/84/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

# ಅನುಬಂಧ-1

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ರಾಜ್ಯದಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ ಮತ್ತು ಮಾನದಂಡಗಳು

1. **ನಗದು ಪುರಸ್ಕಾರ:** ರಾಷ್ಟ್ರೀಯ ಮತ್ತು ಅಂತರ-ರಾಷ್ಟ್ರೀಯ ಮಟ್ಟದ ಕ್ರೀಡಾಕೂಟಗಳಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ಕೆಳಕಾಣಿಸಿದಂತೆ ನಗದು ಪುರಸ್ಕಾರವನ್ನು ನೀಡಲಾಗುತ್ತಿದೆ.

| ಕ್ರಸ | ವಿವರ | ಚಿನ್ನ (ರೂ ಲಕ್ಷಗಳಲ್ಲಿ) | ಬೆಳ್ಳಿ (ರೂ ಲಕ್ಷಗಳಲ್ಲಿ) | ಕಂಚು (ರೂ ಲಕ್ಷಗಳಲ್ಲಿ) |
|---|---|---|---|---|
| 1 | ಒಲಂಪಿಕ್ಸ್ | 500.00 | 300.00 | 200.00 |
| 2 | ಏಷಿಯನ್ ಗೇಮ್ಸ್ | 25.00 | 15.00 | 8.00 |
| 3 | ಕಾಮನ್ ವೆಲ್ತ್ ಗೇಮ್ಸ್ | 25.00 | 15.00 | 8.00 |
| 4 | ವರ್ಲ್ಡ್ ಕಪ್/ಚಾಂಪಿಯನ್ ಶಿಪ್ (ಭಾರತ ಸರ್ಕಾರದಿಂದ ಅಂಗೀಕೃತವಾಗಿ ಭಾರತ ತಂಡದ ಭಾಗವಾಗಿ ಪ್ರತಿನಿಧಿಸಿರಬೇಕು) | 5.00 | 3.00 | 2.00 |
| 5 | ನ್ಯಾಷನಲ್ ಗೇಮ್ಸ್ (ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ಕ್ರೀಡೆಗಳು) | 5.00 | 3.00 | 2.00 |
| 6 | ನ್ಯಾಷನಲ್ ಚಾಂಪಿಯನ್ ಶಿಪ್ (ಒಲಂಪಿಕ್ ಕ್ರೀಡೆಗಳಿಗೆ) | 2.00 | 1.00 | 0.50 |
| 7 | ಜೂನಿಯರ್ ನ್ಯಾಷನಲ್ (ಒಲಂಪಿಕ್ ಕ್ರೀಡೆಗಳಿಗೆ) | 0.50 | 0.25 | 0.15 |
| 8 | ಸಬ್ ಜೂನಿಯರ್ ನ್ಯಾಷನಲ್ (ಒಲಂಪಿಕ್ ಕ್ರೀಡೆಗಳಿಗೆ) | 0.25 | 0.15 | 0.10 |

2. **ಏಕಲವ್ಯ ಪ್ರಶಸ್ತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಏಕಲವ್ಯ ಪ್ರಶಸ್ತಿ ನೀಡಲಾಗುವುದು.
3. **ಜೀವಮಾನ ಸಾಧನೆ ಪ್ರಶಸ್ತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳಿಗೆ ತರಬೇತಿ ನೀಡಿದ ರಾಜ್ಯದ ತರಬೇತುದಾರರಿಗೆ ಅವರ ಜೀವಮಾನ ಸಾಧನೆಗೆ ಪ್ರಶಸ್ತಿ ನೀಡಲಾಗುವುದು.
4. **ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ:** ದೇಸೀ ಗ್ರಾಮೀಣ ಕ್ರೀಡೆಗಳಲ್ಲಿ ವಿಶೇಷ ಸಾಧನೆ ಮಾಡಿದ ರಾಜ್ಯದ ಗ್ರಾಮೀಣ ಕ್ರೀಡಾ ಪ್ರತಿಭೆಗಳಿಗೆ ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ ಹಾಗೂ ನಗದನ್ನು ನೀಡಿ ಗೌರವಿಸಲಾಗುವುದು.
5. **ಕ್ರೀಡಾ ಪೋಷಕ ಪ್ರಶಸ್ತಿ:** ಕ್ರೀಡೆಯ ಅಭಿವೃದ್ಧಿಗೆ ಗಣನೀಯ ಕೊಡುಗೆ ನೀಡಿದ ಖಾಸಗಿ ಸಂಘ-ಸಂಸ್ಥೆಗಳಿಗೆ ಉತ್ತೇಜನ ನೀಡಲು ಕ್ರೀಡಾ ಪೋಷಕ ಪ್ರಶಸ್ತಿ ನೀಡಲಾಗುತ್ತಿದೆ.
6. **ಶೈಕ್ಷಣಿಕ ಶುಲ್ಕ ಮರುಪಾವತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯದಿಂದ ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗುತ್ತಿದೆ.
7. **ಕ್ರೀಡಾ ವಿದ್ಯಾರ್ಥಿ ವೇತನ:** ರಾಜ್ಯ ಮಟ್ಟದ ಪದಕ ವಿಜೇತರಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ರೂ.10,000/- ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.
8. **ಮಾಸಾಶನ:** 50 ವರ್ಷ ವಯೋಮಾನ ಮೀರಿದ ಕಷ್ಟ ಪರಿಸ್ಥಿತಿಯಲ್ಲಿರುವ ಮಾಜಿ ಕ್ರೀಡಾಪಟುಗಳಿಗೆ ಮಾಸಾಶನವನ್ನು ಕೆಳಕಾಣಿಸಿದಂತೆ ನೀಡಲಾಗುತ್ತಿದೆ.

| ವಿವರ | ಮಾಜಿ ಕುಸ್ತಿ ಪೈಲ್ವಾನರುಗಳಿಗೆ ನೀಡಲಾಗುತ್ತಿರುವ ಮಾಸಾಶನದ ವಿವರ | ಮಾಜಿ ಕುಸ್ತಿಯೇತರ ಕ್ರೀಡಾಪಟುಗಳಿಗೆ ನೀಡಲಾಗುತ್ತಿರುವ ಮಾಸಾಶನದ ವಿವರ |
|---|---|---|
| ರಾಜ್ಯ ಮಟ್ಟ | ರೂ 2,500/- | ರೂ 1,000/- |
| ರಾಷ್ಟ್ರಮಟ್ಟ | ರೂ 3,000/- | ರೂ 1,500/- |
| ಅಂತರ-ರಾಷ್ಟ್ರೀಯ ಮಟ್ಟ | ರೂ 4,000/- | ರೂ 2,000/- |

9. ಯುವ ಸಂಘಗಳಿಗೆ 'ಯುವ ಚೈತನ್ಯ' ಕಾರ್ಯಕ್ರಮದಡಿ ಕ್ರೀಡಾ ಕಿಟ್ ಗಳನ್ನು ವಿತರಿಸಲಾಗುತ್ತಿದೆ.
10. ಪರಿಶಿಷ್ಟ ಜಾತಿ ಮತ್ತು ಪಂಗಡದ ಸಾಧಕ ಕ್ರೀಡಾಪಟುಗಳಿಗೆ ವಿಶೇಷ ನಗದು ಪುರಸ್ಕಾರ ವಿತರಿಸಲಾಗುತ್ತಿದೆ. ಅಂತರ-ರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಕ್ರೀಡಾಕೂಟಗಳ ಪದಕ ವಿಜೇತರಿಗೆ ಕ್ರಮವಾಗಿ ತಲಾ ರೂ 5.00, 3.00 ಮತ್ತು 1.00 ಲಕ್ಷಗಳ ನಗದು ಪುರಸ್ಕಾರ ನೀಡಲಾಗುತ್ತಿದೆ.

11. ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ ಪ್ರವೇಶ ಪಡೆಯುವ ಪ್ರತಿಭಾವಂತ ಯುವ ಕ್ರೀಡಾಪಟುಗಳಿಗೆ ಉಚಿತ ಊಟೋಪಹಾರ, ವಸತಿ, ಕ್ರೀಡಾ ತರಬೇತಿ ಮತ್ತು ಕ್ರೀಡಾ ಸಮವಸ್ತ್ರ ಒದಗಿಸಲಾಗುತ್ತಿದೆ. ದೈಹಿಕ ಕ್ಷಮತಾ ಪರೀಕ್ಷೆಗಳಲ್ಲಿ ಹಾಗೂ ಕ್ರೀಡಾ ಕೌಶಲ್ಯ ಪರೀಕ್ಷೆ ಆಧಾರಿತವಾಗಿ 5ನೇ ತರಗತಿ ಮೇಲ್ಪಟ್ಟ ಕ್ರೀಡಾಪಟುಗಳಿಗೆ ಆಯ್ಕೆ ಪ್ರಕ್ರಿಯೆ ನಡೆಸಿ, ಪ್ರವೇಶಾವಕಾಶ ಕಲ್ಪಿಸಲಾಗುತ್ತಿದೆ.
12. **ಕ್ರೀಡಾ ಮೂಲಸೌಕರ್ಯಗಳ ಸೃಜನೆ:** ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ನಿವೇಶನಗಳಲ್ಲಿ ಕ್ರಿಡಾ ಮೂಲಸೌಕರ್ಯಗಳನ್ನು ಸೃಜಿಸುವ ಮೂಲಕ ಕ್ರೀಡಾಪಟುಗಳ ಕ್ರೀಡಾ ತರಬೇತಿಗೆ ಉತ್ತೇಜನ ನೀಡಲಾಗುತ್ತಿದೆ.
13. **ಗರಡಿ ಮನೆ ನಿರ್ಮಾಣ:** ಗ್ರಾಮೀಣ ಕುಸ್ತಿ ಕ್ರೀಡಾಪಟುಗಳಿಗೆ ಉತ್ತೇಜನ ನೀಡುವ ಸಲುವಾಗಿ ಗರಡಿ ಮನೆ ನಿರ್ಮಾಣ ಮತ್ತು ನವೀಕರಣಕ್ಕೆ ಆದ್ಯತೆ ನೀಡಲಾಗುತ್ತಿದೆ.
14. **ನಮ್ಮೂರ ಶಾಲೆಗೆ ನಮ್ಮ ಯುವಜನರು:** ಈ ಕಾರ್ಯಕ್ರಮದಡಿ ಕ್ರೀಡಾ ಕ್ಷೇತ್ರದಡಿ ಸಾಧನೆ ಮಾಡಿದ ಸರಕಾರಿ ಶಾಲೆಗಳು ಕ್ರೀಡಾ ಚಟುವಟಿಕೆಗಳ ಪ್ರೋತ್ಸಾಹಕ್ಕಾಗಿ ಕ್ರೀಡಾ ಸಾಮಗ್ರಿಗಳನ್ನು ಪೂರೈಸಿಕೊಳ್ಳಲು ಪ್ರೋತ್ಸಾಹಧನ ಮತ್ತು ದೈಹಿಕ ಶಿಕ್ಷಕರ ಗೌರವಧನ ನೀಡಲಾಗುವುದು.
15. **ಯುವ ಕ್ರೀಡಾ ಮಿತ್ರ :** ಗ್ರಾಮೀಣ ಭಾಗಗಳಲ್ಲಿ ಯುವಜನ ಚಟುವಟಿಕೆಗೆ ಉತ್ತೇಜನ ನೀಡಿ, ಕ್ರೀಡಾ ಸಂಸ್ಕೃತಿಯನ್ನು ಬೆಳೆಸಲು ಕ್ರೀಡಾ ಸಂಘಗಳಿಗೆ ಕ್ರೀಡಾ ಸಲಕರಣೆ ನೀಡಲಾಗುವುದು.
16. **ಗ್ರಾಮೀಣ ಕ್ರೀಡೋತ್ಸವ:** ಗ್ರಾಮೀಣ ಪ್ರದೇಶದಲ್ಲಿ ದೇಸಿ ಕ್ರೀಡೆಗಳನ್ನು ಸ್ಥಳೀಯ ಮಟ್ಟದಲ್ಲಿ ಪ್ರೋತ್ಸಾಹಿಸಲು ಕಾರ್ಯಕ್ರಮಗಳ ಆಯೋಜನೆ.
17. **ಯುವ ಶಕ್ತಿ ಕೇಂದ್ರ :** ಯುವಜನರ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸಲು ಇಲಾಖಾ ಕ್ರೀಡಾಂಗಣಗಳು, ಕ್ರೀಡಾ ವಸತಿ ನಿಲಯಗಳು ಮತ್ತು ಸರ್ಕಾರಿ ಕಾಲೇಜುಗಳಿಗೆ ಜಿಮ್ ಉಪಕರಣಗಳನ್ನು ಒದಗಿಸಲಾಗುವುದು.
18. **ಯುವಜನ ಮೇಳ :** ಯುವಜನರು ಜಾನಪದ ಕಲೆಯನ್ನು ಉಳಿಸಿ, ಬೆಳೆಸಲು ಪೂರಕವಾಗುವಂತೆ 17 ವಿವಿಧ ಪ್ರಕಾರಗಳ ಜನಪದ ಸ್ಪರ್ಧೆಗಳನ್ನು ಜಿಲ್ಲಾ, ವಿಭಾಗ ಮತ್ತು ರಾಜ್ಯ ಮಟ್ಟದಲ್ಲಿ ಆಯೋಜಿಸುವುದು.
19. **ಯುವಜನೋತ್ಸವ:** ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳನ್ನು ಆಯೋಜಿಸಿ, ರಾಜ್ಯ ಮಟ್ಟದ ವಿಜೇತರನ್ನು ಸ್ವಾಮಿ ವಿವೇಕಾನಂದರ ಜನ್ಮದಿನೋತ್ಸವದ ಅಂಗವಾಗಿ ನಡೆಯುವ ರಾಷ್ಟ್ರೀಯ ಯುವಜನೋತ್ಸವಕ್ಕೆ ನಿಯೋಜಿಸುವುದು.
20. **ಯುವಜನ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ :** ಯುವಜನರಿಗಾಗಿ ಜನಪದ ಕಲೆಗಳು, ಸಾಂಸ್ಕೃತಿಕ ಸ್ಪರ್ಧೆಗಳ ಬಗ್ಗೆ ಹೆಚ್ಚಿನ ತರಬೇತಿ ನೀಡಲು ಯುವಜನ ಸಮ್ಮೇಳನ, ಕಾರ್ಯಾಗಾರ ಮತ್ತು ತರಬೇತಿ ಕಾರ್ಯಕ್ರಮವನ್ನು ಆಯೋಜಿಸಲಾಗುತ್ತಿದೆ.
21. ಮಾನ್ಯತೆ ಪಡೆದ ರಾಜ್ಯ ಕ್ರೀಡಾ ಸಂಸ್ಥೆಗಳಿಗೆ ಕ್ರೀಡಾಕೂಟಗಳ ಆಯೋಜನೆ, ತರಬೇತಿ ಶಿಬಿರಗಳ ಆಯೋಜನೆ ಹಾಗೂ ಕ್ರೀಡಾಕೂಟಗಳಿಗೆ ರಾಜ್ಯ ತಂಡದ ನಿಯೋಜನೆಗೆ ಅನುದಾನ ನೀಡಲಾಗುತ್ತಿದೆ.
22. ಯುವಜನರಿಗೆ ಸಾಹಸ ಕ್ರಿಡಾ ಪ್ರಶಿಕ್ಷಕರಾಗಲು ವಿವಿಧ ಹಂತಗಳ ತರಬೇತಿಯನ್ನು ನೀಡಲಾಗುತ್ತಿದೆ.
23. ರಾಷ್ಟ್ರೀಯ ಸೇವಾ ಯೋಜನೆ ಮೂಲಕ ನಿಮ್ಹಾನ್ಸ್ ಸಂಸ್ಥೆಯ ಸಹಯೋಗದೊಂದಿಗೆ ಜೀವನ ಕೌಶಲ್ಯ ತರಬೇತಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

## ಅನುಬಂಧ-2

## ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಮತ್ತು ಗ್ರಾಮಗಳಲ್ಲಿ 2016-17 ರಿಂದ ಇಲಾಖೆಯ ವತಿಯಿಂದ ಕೈಗೊಳ್ಳಲಾಗಿರುವ ಯೋಜನೆಗಳ ವಿವರ

1. ಕಲ್ಯಾಣ-ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮಂಡಳಿ (ಕೆ.ಕೆ.ಆರ್.ಡಿ.ಬಿ) ವತಿಯಿಂದ ಹಡಗಲಿ ಕ್ರೀಡಾಂಗಣದಲ್ಲಿ ಗ್ಯಾಲರಿ ಮತ್ತು ಮೇಲ್ಛಾವಣಿ ಕಾಮಗಾರಿ ರೂ.100-00 ಲಕ್ಷಗಳಲ್ಲಿ ಕೈಗೊಳ್ಳಲಾಗಿದೆ.
2. ಇಲಾಖೆ ವತಿಯಿಂದ ಕೂಡ್ಲಿಗಿ ಪಟ್ಟಣದಲ್ಲಿ ಮಹಾದೇವ ಮೈಲಾರ ಕ್ರೀಡಾಂಗಣಕ್ಕೆ ರೂ.25.00 ಲಕ್ಷ ಅನುದಾನದಲ್ಲಿ ಕಾಂಪೌಂಡ್ ಗೋಡೆ ನಿರ್ಮಿಸಲಾಗಿರುತ್ತದೆ.
3. ಕೂಡ್ಲಿಗಿ ಪಟ್ಟಣದಲ್ಲಿ ರೂ.10-00 ಲಕ್ಷಗಳಲ್ಲಿ ಗರಡಿ ನಿರ್ಮಾಣ ಮಾಡಲು ಅನುದಾನ ಮಂಜೂರಾಗಿದೆ. ಕಾಮಗಾರಿ ಶೀಘ್ರದಲ್ಲಿ ಕೈಗೊಳ್ಳಬೇಕಾಗಿದೆ.
4. ಕೆ.ಕೆ.ಆರ್.ಡಿ.ಬಿ. ಅನುದಾನದಲ್ಲಿ ಜಿಲ್ಲಾ ಕ್ರೀಡಾಂಗಣದಿಂದ ಮುಖ್ಯ ರಸ್ತೆವರೆಗೆ ಡಾಂಬರೀಕರಣ ರಸ್ತೆಯನ್ನು ರೂ. 100-00 ಲಕ್ಷಗಳಲ್ಲಿ ಕೆ.ಆರ್.ಡಿ.ಎಲ್ ವತಿಯಿಂದ ಕಾಮಗಾರಿ ಪೂರ್ಣಗೊಂಡಿದೆ.
5. ಜಿಲ್ಲಾ ಪಂಚಾಯತ್ ಅನುದಾನದಲ್ಲಿ ಜಿಲ್ಲಾ ಕ್ರೀಡಾಂಗಣದಲ್ಲಿ ರೂ. 2638 ಲಕ್ಷಗಳಲ್ಲಿ 4 ಹೈ-ಮಾಸ್ಟ್ ದೀಪಗಳನ್ನು ಅಳವಡಿಸಲಾಗಿದೆ.
6. ಜಿಂದಾಲ್ ಅನುದಾನದಿಂದ ಜಿಲ್ಲಾ ಕ್ರೀಡಾಂಗಣದ 100 ಮೀಟರ್ ಸಿಟ್ಟಿಂಗ್ ಗ್ಯಾಲರಿ ಮತ್ತು ಮೇಲ್ಛಾವಣಿ ಕಾಮಗಾರಿ ಪ್ರಗತಿಯಲ್ಲಿದೆ.
7. ಕೆ.ಕೆ.ಆರ್.ಡಿ.ಬಿ. ಮತ್ತು ಎಸ್.ಎಂ.ಡಿ.ಸಿ. ಅನುದಾನದಿಂದ ಈ ಕೆಳಕಂಡ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರದವರಿಂದ ಕೈಗೊಳ್ಳಲಾಗಿದೆ:

| ಕ್ರಸ | ಕಾಮಗಾರಿ ವಿವರ | ಅಂದಾಜು ವೆಚ್ಚ (ರೂ ಲಕ್ಷಗಳಲ್ಲಿ) | ಈವರೆಗೆ ಬಿಡುಗಡೆಯಾದ ಅನುದಾನ (ರೂ ಲಕ್ಷಗಳಲ್ಲಿ) | ಪ್ರಸ್ತುತ ಹಂತ |
|---|---|---|---|---|
| 1 | ಸಂಡೂರು ತಾಲ್ಲೂಕು ಕ್ರೀಡಾಂಗಣದಲ್ಲಿ ಅಥ್ಲೆಟಿಕ್ ಟ್ರ್ಯಾಕ್ ನಿರ್ಮಾಣ | 48.79 | 46.43 | ಕಾಮಗಾರಿ ಅಂತಿಮ ಹಂತದಲ್ಲಿದೆ. |
| 2 | ಸಂಡೂರು ತಾಲ್ಲೂಕು ಕ್ರೀಡಾಂಗಣದಲ್ಲಿ ಆರ್.ಸಿ.ಸಿ. ಚರಂಡಿ ನಿರ್ಮಾಣ | 18.31 | 10.30 | ಕಾಮಗಾರಿ ಮುಕ್ತಾಯಗೊಂಡಿದೆ. |
| 3 | ಸಂಡೂರು ತಾಲ್ಲೂಕು ಕ್ರೀಡಾಂಗಣದಲ್ಲಿ ಆವರಣ ಗೋಡೆ ನಿರ್ಮಾಣ | 61.22 | 3.10 | ಅಡಿಪಾಯ ಕಾಮಗಾರಿ ಪ್ರಗತಿಯಲ್ಲಿದೆ. |
| | ಒಟ್ಟು | 128.32 | 59.83 | |

8. ಜಿಲ್ಲಾ ಪಂಚಾಯತ್ ವಲಯದಿಂದ 2016-17 ನೇ ಮತ್ತು 2017-18 & 2019-20 ನೇ ಸಾಲಿನಲ್ಲಿ ತಾಲ್ಲೂಕು ಮಟ್ಟದ ದಸರಾ ಕ್ರೀಡಾಕೂಟ, ಜಿಲ್ಲಾ ಮಟ್ಟದ ದಸರಾ ಕ್ರೀಡಾಕೂಟ, ವಿಭಾಗ ಮಟ್ಟದ ದಸರಾ ಕ್ರೀಡಾಕೂಟ ಸಂಘಟನೆ ಮತ್ತು ರಾಜ್ಯ ಮಟ್ಟದ ದಸರಾ ಕ್ರೀಡಾಕೂಟದಲ್ಲಿ ಭಾಗವಹಿಸಿದ ಕ್ರೀಡಾಪಟುಗಳಿಗೆ ನಿಯಮಾನುಸಾರ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನೀಡಲು ವಿನಿಯೋಗಿಸಿದೆ.
9. ಜಿಲ್ಲಾ ಪಂಚಾಯತ್ ವಲಯದಿಂದ 2016-17 ನೇ ಮತ್ತು 2017-18 & 2019-20 ನೇ ಸಾಲಿನಲ್ಲಿ ಯುವಜನಮೇಳ ಮತ್ತು ಯುವಜನೋತ್ಸವ ಕಾರ್ಯಕ್ರಮ ಸಂಘಟನೆ, ಭಾಗವಹಿಸಿದವರಿಗೆ ನಿಯಮಾನುಸಾರ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನೀಡಲು ವಿನಿಯೋಗಿಸಿದೆ.
10. ಜಿಲ್ಲಾ ಪಂಚಾಯತ್ ವಲಯದಿಂದ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಹೆಚ್ಚಿನ ಪ್ರತಿಭಾವಂತ ಕ್ರೀಡಾಪಟುಗಳು ಹೊಂದಿದ ಶಾಲೆಗಳಿಗೆ ಕ್ರೀಡಾ ಸಾಮಾಗ್ರಿ ಖರೀದಿಗಾಗಿ ಸರ್ಕಾರಿ ಪ್ರೌಢಶಾಲೆಗಳಿಗೆ ತಲಾ ರೂ. 5000-00 ರಂತೆ 59 ಶಾಲೆಗಳಿಗೆ ವಿತರಿಸಲಾಗಿದೆ.
11. ಜಿಲ್ಲಾ ಪಂಚಾಯತ್ ವಲಯದಿಂದ ಜಿಲ್ಲೆಯಿಂದ ರಾಜ್ಯ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಿ ಪದಕ ಪಡೆದ ಕ್ರೀಡಾಪಟುಗಳಿಗೆ ರೂ. 10,000-00 ಪ್ರೋತ್ಸಾಹಧನದಂತೆ ಒಟ್ಟು 20 ಜನ ಕ್ರೀಡಾಪಟುಗಳಿಗೆ ವಿತರಿಸಲಾಯಿತು ಹಾಗೂ ಟ್ರ್ಯಾಕ್‌ಸೂಟ್ ಖರೀದಿಗಾಗಿ ತಲಾ ರೂ.1000-00 ರಂತೆ ಒಟ್ಟು 60 ಕ್ರೀಡಾಪಟುಗಳಿಗೆ ಸಹಾಯಧನ ವಿತರಿಸಲಾಯಿತು.
12. ರಾಜ್ಯ ವಲಯದಿಂದ 2019-20 ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಹೋಬಳಿ ಮಟ್ಟದಲ್ಲಿ ಗ್ರಾಮೀಣ ಕ್ರೀಡೋತ್ಸವ ಆಯೋಜಿಸಲಾಗಿದೆ.
13. ರಾಜ್ಯ ವಲಯದಿಂದ 2019-20 ನೇ ಸಾಲಿಗೆ ನಮ್ಮೂರ ಶಾಲೆಗೆ, ನಮ್ಮ ಯುವಜನರು ಕಾರ್ಯಕ್ರಮಡಿ ಬಳ್ಳಾರಿ ಜಿಲ್ಲೆಯ 9 ತಾಲ್ಲೂಕಿನ ಆಯ್ದ ಸರ್ಕಾರಿ ಶಾಲೆಗಳಿಗೆ ರೂ. 1-00 ಲಕ್ಷ ದಂತೆ ಅನುದಾನ ಬಿಡುಗಡೆ ಮಾಡಲಾಗಿದೆ.
14. ರಾಜ್ಯ ವಲಯದಿಂದ 2019-20 ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಪರಿಶಿಷ್ಟ ಜಾತಿ ಉಪ ಯೋಜನೆ ಮತ್ತು ಪರಿಶಿಷ್ಟ ಪಂಗಡ ಉಪಯೋಜನೆ ಅಡಿಯಲ್ಲಿ ವಿಶೇಷ ತರಬೇತಿ ಶಿಬಿರ ಕಾರ್ಯಕ್ರಮ ಆಯೋಜಿಸಲಾಗಿದೆ.

15. 2019-20 ನೇ ಸಾಲಿನಲ್ಲಿ ರಾಜ್ಯ ವಲಯದ ಯುವ ಚೈತನ್ಯ ಕಾರ್ಯಕ್ರಮದಡಿಯಲ್ಲಿ ಅರ್ಹ ಯುವಕ / ಯುವತಿ ಸಂಘಗಳಿಗೆ 35 ಕಿಟ್‌ಗಳು, ಕ್ರೀಡಾ ಮಿತ್ರ ಕಾರ್ಯಕ್ರಮದಡಿಯಲ್ಲಿ ಅರ್ಹ ಯುವಕ / ಯುವತಿ ಸಂಘಗಳಿಗೆ 27 ಕಿಟ್‌ಗಳು, ಗ್ರಾಮಾಂತರ ಕ್ರೀಡಾ ಶಾಲೆಗಳಿಗೆ 25 ಕ್ರೀಡಾ ಕಿಟಗಳನ್ನು ವಿತರಿಸಲು ಸ್ವೀಕರಿಸಲಾಗಿದೆ.
16. ರಾಜ್ಯವಲಯದಿಂದ 2019-20 ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಪರಿಶಿಷ್ಟ ಪಂಗಡ ಉಪ ಯೋಜನ ಅಡಿಯಲ್ಲಿ ಯುವಜನ ಮೇಳ/ಯುವಜನೋತ್ಸವ ಕಾರ್ಯಕ್ರಮದ ಸ್ಪರ್ದೆಗಳಲ್ಲಿ ಭಾಗವಹಿಸಿ ಪ್ರಶಸ್ತಿ ವಿಜೇತರಿಗೆ ಹಾಗೂ ಯುವಕ/ಯುವತಿ ಸಂಘಕ್ಕೆ ಪ್ರೊತ್ಸಾಹ ಧನ ರೂ.1-00 ಲಕ್ಷ ನೀಡಲಾಗಿದೆ.
17. ರಾಜ್ಯವಲಯದಿಂದ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕಿನ ಕ್ರೀಡಾಪಟುಗಳಿಗೆ ಶಾಲಾ ಶುಲ್ಕ ಮರುಪಾವತಿ ಸಹಾಯ ಧನ ನೀಡಲಾಗಿದೆ.
18. ರಾಜ್ಯ ವಲಯದಿಂದ ರಾಜ್ಯ ಮಟ್ಟದ ಕ್ರೀಡಾ ಕೂಟಗಳಲ್ಲಿ ಭಾಗವಹಿಸಿ ಪದಕ ಪಡೆದ ಬಳ್ಳಾರಿ ಜಿಲ್ಲೆಯ 9 ಕ್ರೀಡಾಪಟುಗಳಿಗೆ ತಲಾ ರೂ. 10,000-00 ರಂತೆ ಕ್ರೀಡಾ ವಿದ್ಯಾರ್ಥಿ ವೇತನ ನೀಡಲಾಗಿದೆ.

# ಕರ್ನಾಟಕ ವಿಧಾನ ಸಭೆ

## ಚುಕ್ಕೆ ಗುರುತಿಲ್ಲದ ಪ್ರಶ್ನೆ

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ರಘುಮೂರ್ತಿ ಟಿ. (ಚಳ್ಳಕೆರೆ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1072
ಉತ್ತರಿಸಬೇಕಾದ ದಿನಾಂಕ : 23-09-2020
ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ. ಸಂ | ಪ್ರಶ್ನೆ | ಇಲಾಖೆಯ ಮಾಹಿತಿ |
|---|---|---|
| ಅ | ಕಳೆದ ಮೂರು ವರ್ಷಗಳಲ್ಲಿ ಚಿತ್ರದುರ್ಗ ಜಿಲ್ಲೆಗೆ ಇಲಾಖೆ ವತಿಯಿಂದ ಕೈಗೊಂಡ ಕಾಮಗಾರಿಗಳು ಯಾವುವು ; | 2017-18 ರಿಂದ 2019-20 ರವರೆಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಕೈಗೊಂಡ ಕಾಮಗಾರಿಗಳ ವಿವರವನ್ನು (ಅನುಬಂಧ-1 ಎ, ಬಿ, ಸಿ)ರಲ್ಲಿ ಒದಗಿಸಿದೆ. |
| ಆ | ಅದರಲ್ಲಿ ಪೂರ್ಣಗೊಂಡ ಕಾಮಗಾರಿಗಳು ಯಾವುವು; ಮತ್ತು ಪೂರ್ಣಗೊಳ್ಳದ ಕಾಮಗಾರಿಗಳನ್ನು ಪೂರ್ಣಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು : (ವಿವರ ನೀಡುವುದು) | |
| ಇ | ಚಳ್ಳಕೆರೆ ಕ್ಷೇತ್ರದಲ್ಲಿ 2019 ಜುಲೈವರೆವಿಗೆ ಅನುಮೋದನೆಗೊಂಡಿರುವ ಕಾಮಗಾರಿಗಳು ಯಾವುವು ; (ವಿವರ ನೀಡುವುದು) | ಚಳ್ಳಕೆರೆ ಕ್ಷೇತ್ರದಲ್ಲಿ 2019 ಜುಲೈವರೆವಿಗೆ ಅನುಮೋದನೆಗೊಂಡಿರುವ ಕಾಮಗಾರಿಗಳ ವಿವರವನ್ನು (ಅನುಬಂಧ-2) ರಲ್ಲಿ ಒದಗಿಸಿದೆ. |
| ಈ | ಅನುಮೋದನೆಗೊಂಡಿದ್ದರೂ ಸ್ಥಗಿತಗೊಳಿಸಿರುವ ಅಭಿವೃದ್ಧಿ ಕಾಮಗಾರಿಗಳು ಯಾವುವು; (ಜಿಲ್ಲೆಯ ಎಲ್ಲಾ ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು) | 2018-19 ನೇ ಸಾಲಿನ ವಿಶೇಷ ಅನುದಾನದಲ್ಲಿ ಚಳ್ಳಕೆರೆ ವಿಧಾನಸಭಾ ಕ್ಷೇತ್ರಕ್ಕೆ ರೂ. 6.00 ಕೋಟಿಗಳ ಮೊತ್ತದ 9 ರಸ್ತೆ ಕಾಮಗಾರಿಗಳನ್ನು ಕೈಗೊಳ್ಳಲು ಮಂಜೂರು ಮಾಡಿ ತಡೆಹಿಡಿಯಲಾಗಿದ್ದು, ಇದರಲ್ಲಿ ರೂ. 2.00 ಕೋಟಿಗಳ ಮೊತ್ತದ ಕಾಮಗಾರಿಗಳನ್ನು ಮುಂದುವರೆಸಲಾಗಿದೆ. ಸ್ಥಗಿತಗೊಂಡಿರುವ ಕಾಮಗಾರಿಗಳ ವಿವರಗಳನ್ನು (ಅನುಬಂಧ-3) ರಲ್ಲಿ ಒದಗಿಸಿದೆ. |
| ಉ | ತುಂಗಭದ್ರಾ ಹಿನ್ನೀರು ಯೋಜನೆಯ ಕಾಮಗಾರಿಯನ್ನು ಯಾವಾಗ ಮಂಜೂರು ಮಾಡಲಾಗಿದೆ ಮತ್ತು ಕಾಮಗಾರಿಯನ್ನು ಯಾವಾಗ ಪ್ರಾರಂಭ ಮಾಡಲಾಗಿದೆ ; (ವಿವರಿಸಿ) | ಪಾವಗಡ ಹಾಗೂ ಇತರೆ ತಾಲ್ಲೂಕುಗಳ DBOT ಕಾಮಗಾರಿಯು ತುಂಗಭದ್ರಾ ಅಣೆಕಟ್ಟಿನ ಹಿನ್ನೀರಿನಿಂದ ನೀರು ಸರಬರಾಜು ಮಾಡುವ ಉದ್ದೇಶವಿದ್ದು, ಕಾಮಗಾರಿಯನ್ನು ದಿನಾಂಕ: 05-01-2018 ರಂದು ಮಂಜೂರು ಮಾಡಲಾಗಿರುತ್ತದೆ. ದಿನಾಂಕ:13-12-2018 ರಂದು ಪ್ರಾರಂಭ ಮಾಡಲಾಗಿದೆ. |

ಪ್ರೈ. ತಿ. ನೋ

ಊ

ತುಂಗಭದ್ರಾ ಹಿನ್ನೀರು ಯೋಜನೆಯ ವ್ಯಾಪ್ತಿಗೆ ಬರುವ ಚಳ್ಳಕೆರೆ, ಕೂಡ್ಲಿಗಿ, ಮೊಳಕಾಲ್ಮೂರು, ಪಾವಗಡ ತಾಲ್ಲೂಕುಗಳಲ್ಲಿ ಕಾಮಗಾರಿಯು ಯಾವ ಹಂತದಲ್ಲಿದೆ ಮತ್ತು ತಾಲ್ಲೂಕುವಾರು ಪ್ರಗತಿಯ ಮಾಹಿತಿ ನೀಡುವುದು; ಸದರಿ ಯೋಜನೆಯು ಮೂಲಭೂತ ಸೌಕರ್ಯಗಳಲ್ಲಿ ಪ್ರಮುಖವಾದ ಕುಡಿಯುವ ನೀರಿನ ಪೂರೈಕೈ ಮಾಡುವ ಯೋಜನೆಯಾಗಿದ್ದು ಇದರ ಈಗಿನ ಆರ್ಥಿಕ ಪ್ರಗತಿ ಮತ್ತು ಭೌತಿಕ ಪ್ರಗತಿಯ ಬಗ್ಗೆ.

ಪಾವಗಡ ಹಾಗೂ ಇತರೆ ತಾಲ್ಲೂಕುಗಳ DBOT ಕಾಮಗಾರಿಯು ಪ್ರಗತಿಯಲ್ಲಿದ್ದು, ವಿವರಗಳು ಈ ಕೆಳಗಿನಂತಿರುತ್ತದೆ. ತಾಲ್ಲೂಕುವಾರು ಆರ್ಥಿಕ ಮತ್ತು ಭೌತಿಕ ಪ್ರಗತಿ ವಿವರದ ಅನುಬಂಧಗಳನ್ನು 4(ಎ), 4(ಬಿ) & 4(ಸಿ) ನಲ್ಲಿ ಲಗತ್ತಿಸಿದೆ. ಒಟ್ಟು ಕಾಮಗಾರಿಯಲ್ಲಿ ಆರ್ಥಿಕ ಪ್ರಗತಿ ರೂ.1036.98 ಕೋಟಿಗಳು ವೆಚ್ಚಮಾಡಲಾಗಿದೆ.

| Sl No | Details | Physical Progress | | |
|---|---|---|---|---|
| | | Scope (Nos) | Completed (Nos) | Under Progress (Nos) |
| I | **Structure** | | | |
| 1 | Water treatment Plant | 1 | 0 | 1 |
| 2 | Major Balancing Reservior | 2 | 0 | 1 |
| 3 | Zonal Balancing Reservior | 21 | 13 | 3 |
| 4 | Zonal Balancing Tank | 27 | 1 | 6 |
| 5 | Intermediate Pumping Station | 8 | 0 | 0 |
| 6 | Lifting Station | 1 | 0 | 0 |
| 7 | Overhead Tanks | 569 | 330 | 99 |
| II | **Pipeline Laying** | scope (m) | supplied (m) | Laid (m) |
| | MS Pipe in Mts | 321211 | 159351 | 76562 |
| | DI Pipe in Mts | 2360212 | 2335884 | 1812221 |
| | **Total in Mts** | **2681423** | **2495235** | **1888783** |

ಸಂಖ್ಯೆ: ಗ್ರಾಅಪ 100 ಯೋಉಮಾ 2020

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1075 |
| ಸದಸ್ಯರ ಹೆಸರು | ಶ್ರೀ ಸಾ. ರಾ. ಮಹೇಶ್ (ಕೃಷ್ಣರಾಜನಗರ) |
| ಉತ್ತರಿಸಬೇಕಾದ ದಿನಾಂಕ | 23.9.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ 3054 ಟಾಸ್ಕ್‌ಫೋರ್ಸ (ನಿರ್ವಹಣೆ ಆನುದಾನ) ವಾರ್ಷಿಕವಾಗಿ ಎಲ್ಲಾ ತಾಲ್ಲೂಕುವಾರು ಅನುದಾನ ಹಂಚಿಕೆಯಾಗುತ್ತಿದ್ದು, 2017-18, 2018-19 ಹಾಗೂ 2019-20ನೇ ಟಾಸ್ಕ್ ಫೋರ್ಸನಲ್ಲಿ ಪಾವತಿ ಮಾಡಲು ಬಾಕಿ ಇರುವ ಬಿಲ್ಲಿನ ಮೊತ್ತವೆಷ್ಟು; (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ 3054 ಟಾಸ್ಕ್ ಫೋರ್ಸ್ (ನಿರ್ವಹಣೆ ಅನುದಾನ) ಹಂಚಿಕೆಯಾಗುತ್ತಿದ್ದು, 2017-18, 2018-19 ಹಾಗೂ 2019-20ನೇ ಟಾಸ್ಕ್‌ಫೋರ್ಸ್‌ನಲ್ಲಿ ಪಾವತಿ ಮಾಡಲು ಬಾಕಿ ಇರುವ ಬಿಲ್ಲಿನ ಮೊತ್ತ ಕೆಳಕಂಡಂತಿವೆ: (ರೂ. ಲಕ್ಷಗಳಲ್ಲಿ) (see table below) ಮೇಲಿನ ಕೋಷ್ಟಕದಲ್ಲಿನ ತಾಲ್ಲೂಕುವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ. | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ 3054 ಟಾಸ್ಕ್‌ಫೋರ್ಸ (ನಿರ್ವಹಣೆ ಅನುದಾನ)ದಡಿಯಲ್ಲಿ ಆಯಾ ಶಾಸಕರುಗಳೇ ಅಧ್ಯಕ್ಷರಾಗಿದ್ದು 2019-20 ಮತ್ತು 2020-21ನೇ ಸಾಲಿನಲ್ಲಿ ರಸ್ತೆ ಕಾಮಗಾರಿಗಳಿಗೆ ಈ ಲೆಕ್ಕಶೀರ್ಷಿಕೆಯಡಿ ಕೆಲವೇ ಆಡಳಿತ ಪಕ್ಷದ ಶಾಸಕರುಗಳಿಗೆ ವಿಶೇಷವಾಗಿ ಅನುದಾನವನ್ನು ಮಂಜೂರು ಮಾಡಿರುವುದು ನಿಜವೇ; ಈ ರೀತಿ 3054 ಟಾಸ್ಕ್‌ಫೋರ್ಸ್ (ನಿರ್ವಹಣೆ ಅನುದಾನ)ದಡಿಯಲ್ಲಿ ವಿಶೇಷವಾಗಿ | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ 3054 ಟಾಸ್ಕ್‌ಫೋರ್ಸ (ನಿರ್ವಹಣೆ ಅನುದಾನ)ದಡಿಯಲ್ಲಿ ಆಯಾ ಶಾಸಕರುಗಳೇ ಅಧ್ಯಕ್ಷರಾಗಿದ್ದು 2019-20 ನೇ ಸಾಲಿನಲ್ಲಿ ರೂ. 131.23 ಕೋಟಿಗಳ ಅನುದಾನವನ್ನು ಮಂಜೂರು ಮಾಡಿದ್ದು, ತಾಲ್ಲುಕುವಾರು ವಿವರಗಳನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ. 2020-21ನೇ ಸಾಲಿನಲ್ಲಿ ಆರ್ಥಿಕ ಇಲಾಖೆಯ |

(ರೂ. ಲಕ್ಷಗಳಲ್ಲಿ)

| ಕ್ರ ಸಂ. | ವರ್ಷ | ಮಂಜೂರಾತಿ | ಬಿಡುಗಡೆ | ಬಾಕಿ ಬಿಡುಗಡೆ |
|---|---|---|---|---|
| 01 | 2017-18 | 11431.93 | 11431.93 | 0.00 |
| 02 | 2018-19 | 12242.09 | 12242.09 | 0.00 |
| 03 | 2019-20 | 13123.00 | 11561.67 | 1561.33 |

| | | |
|---|---|---|
| | ಅನುದಾನವನ್ನು ಕೆಲವೇ ಶಾಸಕರುಗಳಿಗೆ ನೀಡಲು ಅವಕಾಶವಿದೆಯೇ; (ಹಂಚಿಕೆಯಾಗಿರುವ ವಿಶೇಷ ಅನುದಾನದ ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಸುತ್ತೋಲೆ ಸಂ: ಆಇ 02 ಟಿಎಫ್‌ಪಿ 2020, ದಿನಾಂಕ: 16.05.2020 ರಂತೆ ಸದರಿ ಯೋಜನೆಯಡಿ ಯಾವುದೇ ಕಾಮಗಾರಿಗಳಿಗೆ ಅನುದಾನವನ್ನು ಮಂಜೂರು ಮಾಡಿರುವುದಿಲ್ಲ. |
| ಇ. | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ 3054 ಟಾಸ್ಕ್‌ಪೋರ್ಸ (ನಿರ್ವಹಣೆ ಅನುದಾನ) 2017-18, 2018-19 ಹಾಗೂ 2019-20ನೇ ಟಾಸ್ಕ್‌ಪೋರ್ಸ್‌ನಲ್ಲಿ ನಿರ್ವಹಿಸಲಾದ ಕಾಮಗಾರಿಗಳಿಗೆ ಪಾವತಿ ಮಾಡಲು ಕೋಟ್ಯಾಂತರ ರೂಗಳ ಬಿಲ್ಲುಗಳು ಬಾಕಿ ಇದ್ದರೂ ಸಹ ಇದೇ ಲೆಕ್ಕಶೀರ್ಷಿಕೆಯಲ್ಲಿ ಹೊಸದಾಗಿ ಕಾಮಗಾರಿಗಳಿಗೆ ಅನುದಾನವನ್ನು ಮಂಜೂರು ಮಾಡಿರುವುದು ನಿಜವೇ? (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ 3054 ಟಾಸ್ಕ್‌ಪೋರ್ಸ (ನಿರ್ವಹಣೆ ಅನುದಾನ) 2017-18, 2018-19 ಹಾಗೂ 2019-20ನೇ ಸಾಲಿನವರೆವಿಗೂ ಟಾಸ್ಕ್‌ಪೋರ್ಸ್‌ನಲ್ಲಿ ನಿರ್ವಹಿಸಲಾದ ಕಾಮಗಾರಿಗಳಿಗೆ ರೂ. 15.613 ಕೋಟಿಗಳನ್ನು ಮಾತ್ರ ಬಿಡುಗಡೆ ಬಾಕಿಯಿದ್ದು, 2020-21ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಿನಲ್ಲಿ ಬಾಕಿಯಿರುವ ಅನುದಾನವನ್ನು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದ್ದು, ಪ್ರಸ್ತುತ ಸಾಲಿನಲ್ಲಿ ಯಾವುದೇ ಹೊಸ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. |

ಕಡತ ಸಂಖ್ಯೆ: ಗ್ರಾಅಪ:01/116:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1076 |
| ಸದಸ್ಯರ ಹೆಸರು | : ಶ್ರೀ ರಿಜ್ವಾನ್ ಅರ್ಷದ್ (ಶಿವಾಜಿನಗರ) |
| ಉತ್ತರಿಸಬೇಕಾದ ದಿನಾಂಕ | : 23.09.2020 |
| ಉತ್ತರಿಸುವ ಸಚಿವರು | : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಎಂ.ಎಸ್.ಡಿ.ಪಿ ಯೋಜನೆಯಡಿಯಲ್ಲಿ ಸ್ವಂತ ಕಟ್ಟಡ ನಿರ್ಮಿಸಲಾಗಿರುವ 25 ವಸತಿ ನಿಲಯಗಳನ್ನು ಪ್ರಾರಂಭಿಸಲು ಸಲ್ಲಿಸಲಾದ ಪ್ರಸ್ತಾವನೆ ಮಂಜೂರಾಗದೇ ವಿಳಂಬವಾಗಲು ಕಾರಣವೇನು; (ಪೂರ್ಣ ವಿವರ ನೀಡುವುದು). | 2018–19ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ –217 ರಲ್ಲಿ ಘೋಷಿಸಿರುವಂತೆ ಎಂಎಸ್‌ಡಿಪಿ ಯೋಜನೆಯಡಿಯಲ್ಲಿ ಸ್ವಂತ ಕಟ್ಟಡ ನಿರ್ಮಿಸಲಾಗಿರುವ 25 ಸ್ಥಳಗಳಲ್ಲಿ ವಿಧ್ಯಾರ್ಥಿ ನಿಲಯ /ಮಾದರಿ /ಆದರ್ಶ ಶಾಲೆ/ವಸತಿ ಕಾಲೇಜುಗಳನ್ನು ಪ್ರಾರಂಭಿಸುವ ಬಗ್ಗೆ ಪ್ರಸ್ತುತ ಆರ್ಥಿಕ ನಿರ್ಬಂಧ ಇರುವ ಹಿನ್ನೆಲೆಯಲ್ಲಿ ವಸತಿ ಶಾಲೆಗಳ ಹುದ್ದೆಗಳನ್ನು ಸೃಜಿಸಲು ಮುಂದಿನ 2 ವರ್ಷಗಳಿಗೆ ಮುಂದೂಡುವಂತೆ ಆರ್ಥಿಕ ಇಲಾಖೆಯವರು ತಿಳಿಸಿರುತ್ತಾರೆ.<br>ಪೂರ್ಣ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ | ಸದರಿ ವಸತಿ ನಿಲಯಗಳನ್ನು ಈ ವರ್ಷ ಪ್ರಾರಂಭಿಸಲಾಗುತ್ತದೆಯೇ; ಹಾಗಿದ್ದಲ್ಲಿ, ಯಾವಾಗ ಮಂಜೂರಾತಿ ನೀಡಲಾಗುತ್ತದೆ? | ಅನ್ವಯಿಸುವುದಿಲ್ಲ |

ಸಂಖ್ಯೆ: ಎಂಡಬ್ಲ್ಯೂಡಿ 97 ಎಲ್.ಎಂ.ಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

1076

ಅನುಬಂಧ

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಿಜ್ವಾನ್ ಅರ್ಷದ್ (ಶಿವಾಜಿನಗರ) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1076ಕ್ಕೆ ಉತ್ತರ

## ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಎಂಎಸ್‌ಡಿಪಿ ಯೋಜನೆಯಡಿಯಲ್ಲಿ ಸ್ವಂತ ಕಟ್ಟಡ ನಿರ್ಮಿಸಲಾಗಿರುವ 25 ವಸತಿ ನಿಲಯಗಳನ್ನು ಪ್ರಾರಂಭಿಸಲು ಸಲ್ಲಿಸಿರುವ ಪಟ್ಟಿ.

### (1) 08 ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಹೊಸದಾಗಿ ಪ್ರಾರಂಭಿಸಲು ವಿವರ

| ಜಿಲ್ಲೆ | ಕ್ರ.ಸಂ | ತಾಲ್ಲೂಕು | ವಿದಾರ್ಥಿನಿಲಯದ ಹೆಸರು | ಬಾಲಕ/ ಬಾಲಕಿ | ಸಂಖ್ಯಾಬಲ |
|---|---|---|---|---|---|
| ರಾಯಚೂರು | 1 | ರಾಯಚೂರು | ಮೆಟ್ರಿಕ ನಂತರ ವಿದ್ಯಾರ್ಥಿನಿಲಯ, ಕೃಷಿ ವಿಶ್ವ ವಿದ್ಯಾನಿಲಯ, ರಾಯಚೂರು | ಬಾಲಕಿ | 75 |
| | 2 | ರಾಯಚೂರು | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, (ವೃತ್ತಿಪರ), ಬಾಲಭವನ | ಬಾಲಕಿ | 75 |
| | 3 | ರಾಯಚೂರು | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, ಪಿ.ಜಿ ಸೆಂಟರ್, ರಾಯಚೂರು | ಬಾಲಕಿ | 75 |
| | 4 | ಮಾನ್ವಿ | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, ಮಾನ್ವಿ | ಬಾಲಕಿ | 75 |
| | 5 | ಲಿಂಗಸೂಗೂರು | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, ಲಿಂಗಸೂಗೂರು | ಬಾಲಕಿ | 75 |
| ಕೊಪ್ಪಳ | 6 | ಕುಷ್ಟಗಿ | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, ಕುಷ್ಟಗಿ | ಬಾಲಕಿ | 75 |
| | 7 | ಯಲಬುರ್ಗಾ | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, ಯಲಬುರ್ಗಾ | ಬಾಲಕಿ | 75 |
| | 8 | ಕನಕಗಿರಿ | ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ, ಕನಕಗಿರಿ | ಬಾಲಕ | 75 |

### (2)11 ಮೊರಾರ್ಜಿದೇಸಾಯಿ ವಸತಿ ಶಾಲೆಗಳನ್ನು ಹೊಸದಾಗಿ ಪ್ರಾರಂಭಿಸಲು ವಿವರ

| ಜಿಲ್ಲೆ | ಕ್ರ.ಸಂ | ತಾಲ್ಲೂಕು | ಸ್ಥಳ | ಲಿಂಗವಾರು | ಬೋಧಿಸುತ್ತಿರುವ ಮಾಧ್ಯಮ | ಸಂಖ್ಯಾಬಲ |
|---|---|---|---|---|---|---|
| ಕಲಬುರಗಿ | 1 | ಚಿತ್ತಾಪುರ | ಕಾಳಗಿ | ಸಹ ಶಿಕ್ಷಣ | ಆಂಗ್ಲ | 250 |
| ರಾಯಚೂರು | 2 | ದೇವದುರ್ಗ | ದೇವದುರ್ಗ | ಸಹ ಶಿಕ್ಷಣ | ಆಂಗ್ಲ | 250 |
| | 3 | ಕವಿತಾಳ | ಕವಿತಾಳ | ಸಹ ಶಿಕ್ಷಣ | ಆಂಗ್ಲ | 250 |
| | 4 | ಲಿಂಗಸೂಗೂರು | ಹಟ್ಟಿ | ಸಹ ಶಿಕ್ಷಣ | ಆಂಗ್ಲ | 250 |
| ಬೀದರ್ | 5 | ಬಸವ ಕಲ್ಯಾಣ | ಬಸವ ಕಲ್ಯಾಣ | ಸಹ ಶಿಕ್ಷಣ | ಆಂಗ್ಲ | 250 |
| | 6 | ಭಾಲ್ಕಿ | ಭಾಲ್ಕಿ | ಸಹ ಶಿಕ್ಷಣ | ಆಂಗ್ಲ | 250 |
| ಹಾವೇರಿ | 7 | ಸವಣೂರು | ಸವಣೂರು | ಬಾಲಕಿ | ಆಂಗ್ಲ | 250 |
| | 8 | ಶಿಗ್ಗಾಂವ್ | ಶಿಗ್ಗಾಂವ್ | ಸಹ ಶಿಕ್ಷಣ | ಆಂಗ್ಲ | 250 |
| | 9 | ಹಿರೇಕೆರೂರು | ಹಿರೇಕೆರೂರು | ಸಹ ಶಿಕ್ಷಣ | ಆಂಗ್ಲ | 250 |
| ಕೊಪ್ಪಳ | 10 | ಗಂಗಾವತಿ | ಕನಕಗಿರಿ | ಬಾಲಕಿ | ಆಂಗ್ಲ | 250 |
| | 11 | ಯಲಬುರ್ಗಾ | ಯಲಬುರ್ಗಾ | ಬಾಲಕಿ | ಆಂಗ್ಲ | 250 |

02 ಮೊರಾರ್ಜಿದೇಸಾಯಿ ಪದವಿ ಪೂರ್ವ ಕಾಲೇಜುಗಳನ್ನು ಹೊಸದಾಗಿ ಪ್ರಾರಂಭಿಸಲು ವಿವರ

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ಲಿಂಗವಾರು | ವಸತಿ ಶಾಲೆ ಮಂಜೂರಾದ ವರ್ಷ | ಬೋಧಿಸುತ್ತಿರುವ ವಿಷಯ | ವಿದ್ಯಾರ್ಥಿಗಳ ಸಂಖ್ಯಾಬಲ |
|---|---|---|---|---|---|---|
| 1 | ರಾಯಚೂರು | ಸಿಂಧನೂರು | ಹೆಣ್ಣು ಮಕ್ಕಳ | 2018-19 | ಪಿಸಿಎಂಬಿ & ಹೆಚ್ಇಬಿಎ | 240 |
| 2 | ಬಳ್ಳಾರಿ | ಹೊಸಪೇಟೆ | ಹೆಣ್ಣು ಮಕ್ಕಳ | 2018-19 | ಪಿಸಿಎಂಬಿ & ಹೆಚ್ಇಬಿಎ | 240 |

(3)02 ಅಲ್ಪಸಂಖ್ಯಾತರ ಮಾದರಿ ವಸತಿ ಶಾಲೆಗಳನ್ನು ಹೊಸದಾಗಿ ಪ್ರಾರಂಭಿಸಲು ವಿವರ

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ಲಿಂಗವಾರು | ವಸತಿ ಶಾಲೆ ಮಂಜೂರಾದ ವರ್ಷ | ಬೋಧಿಸುತ್ತಿರುವ ಮಾಧ್ಯಮ | ವಿದ್ಯಾರ್ಥಿಗಳ ಸಂಖ್ಯಾಬಲ |
|---|---|---|---|---|---|---|
| 1 | ರಾಯಚೂರು | ಸಿಂಧನೂರು | ಹೆಣ್ಣು ಮಕ್ಕಳ | 2018-19 | ಆಂಗ್ಲ | 560 |
| 2 | ಕಲಬುರಗಿ | ಚಿತ್ತಾಪುರ | ಹೆಣ್ಣು ಮಕ್ಕಳ | 2018-19 | ಆಂಗ್ಲ | 560 |

(4)02 ಲ್ಪಸಂಖ್ಯಾತರ ಮಹಿಳಾ ಬಿಎಡ್ ಕಾಲೇಜುಗಳನ್ನು ಹೊಸದಾಗಿ ಪ್ರಾರಂಭಿಸಲು ವಿವರ

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಲಿಂಗವಾರು | ವಸತಿ ಶಾಲೆ ಮಂಜೂರಾದ ವರ್ಷ | ಭೋಧಿಸುವ ಮಾಧ್ಯಮ | ವಿದ್ಯಾರ್ಥಿಗಳ ಸಂಖ್ಯಾಬಲ |
|---|---|---|---|---|---|---|
| 1 | ರಾಯಚೂರು | ರಾಯಚೂರು | ಹೆಣ್ಣು ಮಕ್ಕಳ | 2018-19 | ಆಂಗ್ಲ | 100 |
| 2 | ಬಳ್ಳಾರಿ | ಬಳ್ಳಾರಿ | ಹೆಣ್ಣು ಮಕ್ಕಳ | 2018-19 | ಆಂಗ್ಲ | 100 |

19/2/2020

ನಿರ್ದೇಶಕರು
ಅಲ್ಪಸಂಖ್ಯಾತರ ನಿರ್ದೇಶನಾಲಯ
ಬೆಂಗಳೂರು-01

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1079

ಉತ್ತರಿಸಬೇಕಾದ ದಿನಾಂಕ : 23.09.2020

ಸದಸ್ಯರ ಹೆಸರು : ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ)

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ರಾಯಚೂರು ಜಿಲ್ಲೆಯ ಯುವ ಸಬಲೀಕರಣ ಮತ್ತು ಕ್ರೀಡಾ ಕ್ಷೇತ್ರದ ಸಾಧನೆಯಲ್ಲಿ ಹಿಂದುಳಿದ ಪ್ರದೇಶವಾಗಿದ್ದು ಅಲ್ಲಿನ ಯುವ ಜನಾಂಗವನ್ನು ಉತ್ತೇಜಿಸಲು ಸರ್ಕಾರದ ಕೈಗೊಂಡ ಕ್ರಮಗಳೇನು | ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ರಾಯಚೂರು ಜಿಲ್ಲೆಯೂ ಒಳಗೊಂಡಂತೆ ರಾಜ್ಯದಲ್ಲಿ ಸರ್ಕಾರವು ಯುವಜನಾಂಗವನ್ನು ಉತ್ತೇಜಿಸಲು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ರೂಪಿಸಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| ಆ | ಕೇಂದ್ರ ಸರ್ಕಾರದ ಪುರಸ್ಕೃತ ಚಟುವಟಿಕೆಗಳನ್ನು ಸ್ಥಳೀಯ ಮಟ್ಟದಲ್ಲಿ ಉತ್ತೇಜಿಸಲು ಜಿಲ್ಲೆಗಳಲ್ಲಿ ಖೇಲೋ ಇಂಡಿಯಾ ಸೆಂಟರ್ ಗಳನ್ನು ಸ್ಥಾಪಿಸಲು ಕರ್ನಾಟಕ ಸರ್ಕಾರದಿಂದ ಯಾವ ಜಿಲ್ಲೆಗಳನ್ನು ಆಯ್ಕೆ ಮಾಡಲಾಗಿದೆ. | ಕೇಂದ್ರ ಸರ್ಕಾರದ ಯುವ ವ್ಯವಹಾರಗಳು ಮತ್ತು ಕ್ರೀಡಾ ಮಂತ್ರಾಲಯದ ಮಾರ್ಗಸೂಚಿಗಳನ್ವಯ ಎಲ್ಲ ಜಿಲ್ಲೆಗಳಲ್ಲಿ ಖೇಲೋ ಇಂಡಿಯಾ ಸೆಂಟರ್ ಗಳನ್ನು ಸ್ಥಾಪಿಸಬೇಕಾಗಿದ್ದು,<br>ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮುಖಾಂತರ ಅರ್ಹ ಕೇಂದ್ರಗಳನ್ನು ಗುರುತಿಸಬೇಕಾಗಿದ್ದು, ಈ ಕಾರ್ಯ ಪ್ರಗತಿಯಲ್ಲಿದೆ. |
| ಇ | ರಾಯಚೂರು ಜಿಲ್ಲೆಯನ್ನು ಖೆಲೋ ಇಂಡಿಯಾ ಸೆಂಟರ್ (ಕೆ.ಐ.ಸಿ)ಗೆ ಆಯ್ಕೆ ಮಾಡಿ ಈ ಭಾಗದ ಯುವ ಜನಾಂಗವನ್ನು ಉತ್ತೇಜಿಸಲು ಸರ್ಕಾರ ಕೂಡಲೇ ಕ್ರಮ ವಹಿಸಲಾಗುವುದೇ ? (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಕೇಂದ್ರ ಸರ್ಕಾರದ ಯುವ ವ್ಯವಹಾರಗಳು ಮತ್ತು ಕ್ರೀಡಾ ಮಂತ್ರಾಲಯದ ಮಾರ್ಗಸೂಚಿಗಳನ್ವಯ ರಾಯಚೂರು ಜಿಲ್ಲೆಯಲ್ಲಿ ಖೇಲೋ ಇಂಡಿಯಾ ಸೆಂಟರ್ ಗಳನ್ನು ಸ್ಥಾಪಿಸಲು ಅರ್ಹ ಕೇಂದ್ರಗಳನ್ನು ಜಿಲ್ಲಾಧಿಕಾರಿಗಳ ಮುಖೇನ ಗುರುತಿಸುವ ಕಾರ್ಯ ಪ್ರಗತಿಯಲ್ಲಿದೆ. |

ವೈಎಸ್ ಡಿ-/ಇಬಿಬಿ/82/2020

(ಸಿ. ಟಿ. ರವಿ)

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಅನುಬಂಧ-1

# ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ರಾಯಚೂರು ಜಿಲ್ಲೆಯು ಸೇರಿದಂತೆ ಯುವ ಜನಾಂಗವನ್ನು ಉತ್ತೇಜಿಸಲು ಸರ್ಕಾರವು ರೂಪಿಸಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳ ವಿವರಗಳು.

* ರಾಜ್ಯದಲ್ಲಿ ಒಟ್ಟು 34 ಕ್ರೀಡಾಶಾಲೆ/ನಿಲಯಗಳಿದ್ದು, ಇವುಗಳಿಗೆ ಪ್ರವೇಶ ನೀಡುವ ಸಂಬಂಧ ತಾಲ್ಲೂಕು, ಜಿಲ್ಲಾ, ವಿಭಾಗ ಮತ್ತು ರಾಜ್ಯಮಟ್ಟದಲ್ಲಿ ಆಯ್ಕೆ ಶಿಬಿರಗಳನ್ನು ನಡೆಸಿ ಕ್ರೀಡಾಪಟುಗಳ ದೈಹಿಕ ಕ್ಷಮತೆಯನ್ನು ಪರೀಕ್ಷಿಸಿ ಅರ್ಹ ಕ್ರೀಡಾಪಟುಗಳಿಗೆ ಕ್ರೀಡಾಶಾಲೆ/ನಿಲಯಗಳಿಗೆ ಪ್ರವೇಶ ನೀಡಲಾಗುತ್ತಿದೆ.

* ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಅಧಿಕೃತ ಕ್ರೀಡಾಕೂಟಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿ ಭಾಗವಹಿಸಿ ವಿಜೇತರಾದ ಕ್ರೀಡಾಪಟುಗಳಿಗೆ ನಗದು ಪುರಸ್ಕಾರ, ಶೈಕ್ಷಣಿಕ ಶುಲ್ಕ ಮರುಪಾವತಿ ಹಾಗೂ ಕ್ರಿಡಾ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ.
* ಕರ್ನಾಟಕ ಸ್ಪೋರ್ಟ್ಸ್ ಆಕಾಡೆಮಿ ಫಾರ್ ಎಕ್ಸಲೆನ್ಸ್ ಯೋಜನೆಯಡಿಯಲ್ಲಿ ಪ್ರತಿಭಾನ್ವಿತ ಕ್ರೀಡಾಪಟುಗಳಿಗೆ ಉನ್ನತ ಕ್ರೀಡಾ ತರಬೇತಿಗಾಗಿ ಸಹಾಯಧನ ನೀಡಲಾಗುತ್ತಿದೆ.
* ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಲಾದ ಕ್ರೀಡಾಪಟುಗಳಿಗೆ ಸಿ.ಇ.ಟಿ ಮೂಲಕ ವೃತ್ತಿಪರ ಕೋರ್ಸ್ ಗಳಲ್ಲಿ ಪ್ರವೇಶಕ್ಕೆ ಮೀಸಲಾತಿ ನೀಡಲಾಗುವುದು.

* ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಏಕಲವ್ಯ ಪ್ರಶಸ್ತಿ, ಜೀವಮಾನ ಸಾಧನೆ ಪ್ರಶಸ್ತಿ ಮತ್ತು ನಗದು ಪುರಸ್ಕಾರವನ್ನು ನೀಡಲಾಗುವುದು. ಕ್ರೀಡೆಯನ್ನು ಪ್ರೋತ್ಸಾಹಿಸುತ್ತಿರುವ ಸಂಸ್ಥೆಗಳಿಗೆ ಕ್ರೀಡಾ ಪೋಷಕ ಪ್ರಶಸ್ತಿ ನೀಡಲಾಗುವುದು.

* ದೇಸೀ ಗ್ರಾಮೀಣ ಕ್ರೀಡೆಗಳಲ್ಲಿ ವಿಶೇಷ ಸಾಧನೆ ಮಾಡಿದ ರಾಜ್ಯದ ಗ್ರಾಮೀಣ ಕ್ರೀಡಾ ಪ್ರತಿಭೆಗಳಿಗೆ ಕರ್ನಾಟಕ ಕ್ರೀಡಾ ರತ್ನ ಪ್ರಶಸ್ತಿ ಹಾಗೂ ನಗದನ್ನು ನೀಡಿ ಗೌರವಿಸಲಾಗುವುದು.

* ಕೇಂದ್ರ ಸರ್ಕಾರ ಪುರಸ್ಕೃತ ಅರ್ಜುನ, ಧ್ಯಾನಚಂದ, ದ್ರೋಣಾಚಾರ್ಯ ಹಾಗೂ ರಾಜೀವ್ ಗಾಂಧಿ ಖೇಲ್ ರತ್ನ ಪ್ರಶಸ್ತಿಗಳಿಗೆ ಇಲಾಖೆಯಿಂದ ಶಿಫಾರಸ್ಸು ಮಾಡಲಾಗುವುದು. ಸದರಿ ಪ್ರಶಸ್ತಿ ಪುರಸ್ಕೃತರಾದ ರಾಜ್ಯದ ಕ್ರೀಡಾಪಟುಗಳಿಗೆ ಉಚಿತ ಬಸ್ ಪಾಸ್ ಸೌಲಭ್ಯವನ್ನು ನೀಡಲಾಗುತ್ತಿದೆ.

* ಖೇಲೋ ಇಂಡಿಯಾ ಯೋಜನೆ: ಕೇಂದ್ರ ಸರ್ಕಾರದ ಖೇಲೋ ಇಂಡಿಯಾ ಯೋಜನೆಯಡಿಯಲ್ಲಿ ಕ್ರೀಡಾಕೂಟಗಳ ಸಂಘಟನೆ, ನಗರ ಪ್ರದೇಶಗಳಲ್ಲಿ ಕ್ರೀಡಾ ಮೂಲಭೂತ ಸೌಕರ್ಯಗಳ ನಿರ್ಮಾಣ ಹಾಗೂ ಕ್ರೀಡಾ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹ ನೀಡಲಾಗುತ್ತಿದೆ. "ಖೇಲೋ ಇಂಡಿಯಾ" ಯೋಜನೆಯನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು ಶೇ.100% ರಷ್ಟು ಅನುದಾನವನ್ನು ನೀಡುತ್ತಿದೆ.
* ರಾಜ್ಯ, ರಾಷ್ಟ್ರ ಹಾಗೂ ಅಂತಾರಾಷ್ಟ್ರ ಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ಸಾಧನೆಗೈದ, 50 ವರ್ಷಕ್ಕಿಂತ ಹೆಚ್ಚು ವಯೋಮಾನದ ಪ್ರಸ್ತುತ ಸಂಕಷ್ಟ ಪರಿಸ್ಥಿತಿಯಲ್ಲಿರುವ ಮಾಜಿ ಕ್ರೀಡಾಪಟುಗಳಿಗೆ ಇಲಾಖೆಯಿಂದ ಮಾಸಾಶನವನ್ನು ನೀಡಲಾಗುತ್ತಿದೆ.

ಯುವಜನ ಮೇಳ : ಗ್ರಾಮೀಣ ಸ್ಥಳೀಯ ಮಟ್ಟದ ಯುವಜನರು ಜನಪದವನ್ನು ಉಳಿಸಿ ಬೆಳೆಸಲು 17 ವಿವಿಧ ಪ್ರಕಾರಗಳ ಜನಪದ ಸ್ಪರ್ಧೆಗಳನ್ನು ಜಿಲ್ಲಾ, ವಿಭಾಗ ಮತ್ತು ರಾಜ್ಯ ಮಟ್ಟದವರೆಗೆ ಕಾರ್ಯಕ್ರಮವನ್ನು ಏರ್ಪಡಿಸಲಾಗುತ್ತಿದೆ.

*ಯುವಜನೋತ್ಸವ : ಕೇಂದ್ರ ಸರಕಾರದ ಕಾರ್ಯಕ್ರಮವಾದ ಯುವಜನೋತ್ಸವವನ್ನು ರಾಜ್ಯದಲ್ಲಿ ಜಿಲ್ಲಾ ಮತ್ತು ರಾಜ್ಯ ಮಟ್ಟದವರೆಗೆ ಆಯೋಜಿಸಿ ರಾಜ್ಯ ಮಟ್ಟದ ವಿಜೇತರನ್ನು ಸ್ವಾಮಿ ವಿವೇಕಾನಂದರ ಜನ್ಮದಿನೋತ್ಸವದ ಅಂಗವಾಗಿ ನಡೆಯುವ ರಾಷ್ಟ್ರ ಮಟ್ಟಕ್ಕೆ ರಾಜ್ಯದ ತಂಡವನ್ನು ನಿಯೋಜಿಸಲಾಗುವುದು.

| | | |
|---|---|---|
| (ಇ) | ಬೆಳಗಾವಿ ನಗರದಲ್ಲಿ ಒಂದೇ ಪ್ರಾದೇಶಿಕ ಸಾರಿಗೆ ಕಚೇರಿ ಇರುವುದರಿಂದ ಸಾರ್ವಜನಿಕರಿಗೆ, ವಾಹನಗಳ ಮಾರಾಟಗಾರರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಾರ್ವಜನಿಕರಿಗೆ ಅಥವಾ ವಾಹನಗಳ ಮಾರಾಟಗಾರರಿಗೆ ಯಾವುದೇ ತೊಂದರೆ ಆಗದಂತೆ ಬೆಳಗಾವಿ ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿ ಕಾರ್ಯನಿರ್ವಹಿಸಲಾಗುತ್ತಿದೆ. ಅಲ್ಲದೆ ಖಾನಾಪೂರ ಪಟ್ಟಣದ ಸಾರ್ವಜನಿಕರ ಕೆಲಸ ಕಾರ್ಯಗಳ ಸುಗಮ ನಿರ್ವಹಣೆಗೆ ಪ್ರತಿ ಬುಧವಾರದಂದು ಶಿಬಿರವನ್ನು ನಡೆಸಲಾಗುತ್ತಿದೆ. |
| (ಈ) | ಬಂದಿದ್ದಲ್ಲಿ, ಬೆಳಗಾವಿ ನಗರದಲ್ಲಿ ಮತ್ತೊಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯನ್ನು ಆರಂಭಿಸುವ ಉದ್ದೇಶವು ಸರ್ಕಾರಕ್ಕೆ ಇದೆಯೇ; ಇದ್ದಲ್ಲಿ, ಯಾವಾಗ, ಯಾವ ಪ್ರದೇಶದಲ್ಲಿ ಮಾಡಲಾಗುವುದು; ಮತ್ತೊಂದು ಕಚೇರಿಯನ್ನು ಆರಂಭಿಸಲು ಯಾರಾದರೂ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆಯೇ; ಸಲ್ಲಿಸಿದ್ದಲ್ಲಿ ಯಾರು, ಯಾವಾಗ ಸಲ್ಲಿಸಿದ್ದಾರೆ? | ಬೆಳಗಾವಿ ನಗರದ ದಕ್ಷಿಣ ಮತ ಕ್ಷೇತ್ರದ ವ್ಯಾಪ್ತಿಯ ಅನಗೋಳ, ಟಿಳಕವಾಡಿ, ಉದ್ಯಮಬಾಗ, ಹಿಂದವಾಡಿ ಪ್ರದೇಶದಲ್ಲಿ ಮತ್ತೊಂದು ಪ್ರಾದೇಶಿಕ ಸಾರಿಗೆ ಕಚೇರಿಯನ್ನು ತೆರೆಯುವ ಕುರಿತಂತೆ ಶಾಸಕರು, ಬೆಳಗಾವಿ ದಕ್ಷಿಣ ಕ್ಷೇತ್ರ ರವರು ದಿನಾಂಕ:15-11-2018 ರಂದು ಹಾಗೂ ದಿನಾಂಕ:28-11-2018 ರ ಪತ್ರಗಳು ಸ್ವೀಕೃತಗೊಂಡಿರುತ್ತದೆ.<br><br>ಬೆಳಗಾವಿ ಜಿಲ್ಲೆಯ ತಾಲ್ಲೂಕುಗಳನ್ನೊಳಗೊಂಡಂತೆ ಈಗಾಗಲೇ ಐದು ಸಾರಿಗೆ ಕಛೇರಿಗಳು ಕಾರ್ಯನಿರ್ವಹಿಸುತ್ತಿವೆ. ಬೆಳಗಾವಿ ಕಛೇರಿಯು ಖಾನಾಪುರ ತಾಲ್ಲೂಕನ್ನು ಒಳಗೊಂಡಂತೆ ಕಾರ್ಯ ನಿರ್ವಹಿಸುತ್ತಿದೆ. ಖಾನಾಪುರ ತಾಲ್ಲೂಕಿನ ಹಾಗೂ ಸುತ್ತಮುತ್ತಲಿನ ಸಾರ್ವಜನಿಕರಿಗೆ ಅನುಕೂಲವಾಗುವ ದೃಷ್ಟಿಯಿಂದ ಪ್ರತಿ ಬುಧವಾರದಂದು ಶಿಬಿರವನ್ನು ಏರ್ಪಡಿಸುತ್ತಿದ್ದು ಸಾರ್ವಜನಿಕರಿಗೆ ಯಾವುದೇ ತೊಂದರೆಯಾಗದಂತೆ ಕಾರ್ಯನಿರ್ವಹಿಸುತ್ತಿರುತ್ತದೆ. ಬೆಳಗಾವಿ ನಗರದಿಂದ ಅನಗೋಳ ಸುಮಾರು 4 ಕಿ.ಮೀ., ಟಿಳಕವಾಡಿ 2.3 ಕಿ.ಮೀ., ಉದ್ಯಮಭಾಗ 5.5 ಕಿ.ಮೀ. ಮತ್ತು ಹಿಂದವಾಡಿ 3.6 ಕಿ.ಮೀ. ಅಂತರದಲ್ಲಿ ಇದ್ದು ಸಾರ್ವಜನಿಕರಿಗೆ ಈಗಾಗಲೇ ಕಾರ್ಯ ನಿರ್ವಹಿಸುತ್ತಿರುವ ಸಾರಿಗೆ ಕಛೇರಿಯು ಹತ್ತಿರವಿರುವುದರಿಂದ ಮತ್ತು ಬೆಳಗಾವಿ ನಗರದ ಮಧ್ಯಭಾಗದಲ್ಲಿರುವುದರಿಂದ ಯಾವುದೇ ತೊಂದರೆ ಯಾಗುವುದಿಲ್ಲವೆಂದು, ಅಲ್ಲದೆ ಸಾರ್ವಜನಿಕರು ವಿವಿಧ ಕೆಲಸಗಳಿಗಾಗಿ ಪ್ರತಿ ದಿನ ಬೆಳಗಾವಿ ನಗರಕ್ಕೆ ಭೇಟಿ ನೀಡುತ್ತಿರುವುದರಿಂದ ತೊಂದರೆ ಯಾಗುವುದಿಲ್ಲವೆಂದು ಹಾಗೂ ಈಗಾಗಲೇ ಕಛೇರಿಯಲ್ಲಿ ಪೂರ್ಣ ಪ್ರಮಾಣದ ಅಧಿಕಾರಿ ಮತ್ತು ಪ್ರವರ್ತನ, ಲಿಪಿಕ ಸಿಬ್ಬಂದಿಯ ಹುದ್ದೆಗಳು ಮಂಜೂರಾಗಿರುವುದರಿಂದ ಪ್ರಸ್ತುತ ಪರಿಸ್ಥಿತಿಯಲ್ಲಿ ಯಾವುದೇ ಹೊಸ ಕಛೇರಿಯನ್ನು ಪ್ರಾರಂಭಿಸುವುದು ಸೂಕ್ತವಾಗಿರುವುದಿಲ್ಲ ಹಾಗೂ ಮುಂಬರುವ ದಿನಗಳಲ್ಲಿ ವಾಹನ ಸಂಖ್ಯೆ ಮತ್ತು ಸಂಗ್ರಹಿಸಬಹುದಾದ ರಾಜಸ್ವವನ್ನು ಗಮನದಲ್ಲಿ ಇಟ್ಟುಕೊಂಡು ಹೊಸ ಕಛೇರಿಯನ್ನು ಪ್ರಾರಂಭಿಸುವ ಬಗ್ಗೆ ಪರಿಶೀಲಿಸಲಾಗುವುದು. |

ಟಿಡಿ 69 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 620

ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಡ್ರೈವರ್ / ಕಂಡಕ್ಟರ್‌ಗಳು ಪಾಸ್ ಹೊಂದಿರುವ ವಿದ್ಯಾರ್ಥಿಗಳ ವಿಚಾರದಲ್ಲಿ ಉದ್ಧಟತನದಿಂದ ವರ್ತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಹಾಗಿದ್ದಲ್ಲಿ, ವಿದ್ಯಾರ್ಥಿಗಳ ವಿಚಾರದಲ್ಲಿ ಅನುಚಿತ ವರ್ತನೆಗಾಗಿ ಇದುವರೆಗೆ ಜರುಗಿಸಿದ ಕ್ರಮದ ವಿವರಗಳನ್ನು ನೀಡುವುದು; | ವಿದ್ಯಾರ್ಥಿಗಳ ವಿಚಾರದಲ್ಲಿ ಅನುಚಿತ ವರ್ತನೆಗಾಗಿ ಕ.ರಾ.ರ.ಸಾ.ನಿಗಮ, ಬೆಂ.ಮ.ಸಾ.ಸಂಸ್ಥೆ, ವಾ.ಕ.ರ.ಸಾ.ಸಂಸ್ಥೆ ಮತ್ತು ಈ.ಕ.ರ.ಸಾ.ಸಂಸ್ಥೆಗಳಲ್ಲಿ ಇದುವರೆಗೆ ಜರುಗಿಸಿದ ಕ್ರಮದ ವಿವರಗಳನ್ನು ಅನುಬಂಧ-'ಅ, ಆ, ಇ ಮತ್ತು ಈ'ರಲ್ಲಿ ನೀಡಲಾಗಿದೆ.<br><br>ಸಾರ್ವಜನಿಕ ಪ್ರಯಾಣಿಕರೊಂದಿಗೆ ಅದರಲ್ಲೂ ವಿಶೇಷವಾಗಿ ವಿದ್ಯಾರ್ಥಿಗಳೊಂದಿಗೆ ಸೌಜನ್ಯದಿಂದ ವರ್ತಿಸುವಂತೆ ಸಂಸ್ಥೆಯ ಎಲ್ಲಾ ಚಾಲನಾ ಸಿಬ್ಬಂದಿಗಳಿಗೆ ಅಗತ್ಯ ತಿಳುವಳಿಕೆ ನೀಡಲಾಗಿರುತ್ತದೆ. |
| ಇ. | ಖಾನಾಪುರ ತಾಲ್ಲೂಕಿನ ಬೇಕ್ವಾಡ ಕ್ರಾಸ್ ಬಸ್ ಡ್ರೈವರ್ ತನ್ನ ಉದ್ಧಟತನದಿಂದ ವಿದ್ಯಾರ್ಥಿಗಳ ಮೇಲೆಯೇ ಬಸ್ ಹಾಯಿಸಲು ಪ್ರಯತ್ನಿಸಿದ್ದಕ್ಕೆ ಯಾವ ಕ್ರಮ ಜರುಗಿಸಿದೆ? | ಖಾನಾಪುರ ತಾಲ್ಲೂಕಿನ ಬೇಕ್ವಾಡ ಕ್ರಾಸ್ ಮಾರ್ಗದಲ್ಲಿ ಕಾರ್ಯಾಚರಣೆಯಾದ ವಾಹನವು ದಾಂಡೇಲಿ ಘಟಕದ್ದಾಗಿದ್ದು, ಈ ಅನುಸೂಚಿ ಕಾರ್ಯಾಚರಣೆಯಲ್ಲಿ ಕರ್ತವ್ಯ ನಿರ್ವಹಿಸಿದ ಚಾಲಕರ ವಿರುದ್ಧ ದಿನಾಂಕಃ 24-09-2019ರಂದು ಪ್ರಕರಣ ದಾಖಲಾಗಿರುತ್ತದೆ ಮತ್ತು ದಿನಾಂಕಃ 25-09-2019ರಂದು ಸದರಿ ಚಾಲಕರನ್ನು ಕರ್ತವ್ಯದಿಂದ ಅಮಾನತ್ತುಗೊಳಿಸಿ ಆದೇಶ ಜಾರಿ ಮಾಡಲಾಗಿದೆ. ಸದರಿಯವರ ಮೇಲೆ ಇಲಾಖಾ ವಿಚಾರಣೆ ಚಾಲ್ತಿಯಲ್ಲಿದ್ದು, ಪ್ರಸ್ತುತ ಸದರಿಯವರನ್ನು ಬೇರೆ ಘಟಕಕ್ಕೆ ಕರ್ತವ್ಯಕ್ಕೆ ನಿಯೋಜಿಸಲಾಗಿದೆ. |

ಸಂಖ್ಯೆ: ಟಿಡಿ 146 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 628

ಸದಸ್ಯರ ಹೆಸರು : ಶ್ರೀ ಮುನಿಯಪ್ಪ .ವಿ

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಶಿಡ್ಲಘಟ್ಟ ತಾಲ್ಲೂಕು ಕೇಂದ್ರದಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಚಿಕ್ಕಬಳ್ಳಾಪುರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನಲ್ಲಿ ಹೊಸದಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯನ್ನು ಪ್ರಾರಂಭಿಸುವ ಸಂಬಂಧದಲ್ಲಿ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| (ಆ) | ಹಾಗಿದ್ದಲ್ಲಿ, ಕಚೇರಿ ಮಂಜೂರು ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| (ಇ) | ಯಾವಾಗ ಮಂಜೂರು ಮಾಡಲಾಗುವುದು? (ವಿವರ ನೀಡುವುದು) | |

ಟಿಡಿ 68 ಟಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

ಕರ್ನಾಟಕ ವಿಧಾನಸಭೆ

1. ಸದಸ್ಯರ ಹೆಸರು : ಶ್ರೀ ಕೃಷ್ಣ ಭೈರೇಗೌಡ (ಬ್ಯಾಟರಾಯನಪುರ)

2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 695

3. ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018ನೇ ಏಪ್ರಿಲ್‌ನಿಂದ ಇಲ್ಲಿಯವರೆಗೆ ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ಆಗಿರುವ ಪ್ರಗತಿಯೆಷ್ಟು (ತಿಂಗಳವಾರು, ಮಾನವದಿನ ಸೃಜನೆ ಹಾಗೂ ಅದರ ಆರ್ಥಿಕ ಮೌಲ್ಯಗಳೊಂದಿಗೆ ಮಾಹಿತಿ ಒದಗಿಸುವುದು); | ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಆಗಿರುವ ಪ್ರಗತಿಯ ಮಾಹಿತಿಯನ್ನು ***ಅನುಬಂಧ- 1*** ಎಂದು ಗುರುತಿಸಿ ಲಗತ್ತಿಸಲಾಗಿದೆ. |
| ಆ) | ಉದ್ಯೋಗ ಖಾತ್ರಿಯಡಿ ಕೂಲಿ ಹಾಗೂ ಸಾಮಗ್ರಿಗಳ ವೆಚ್ಚವನ್ನು ಯಾವ ದಿನಾಂಕದವರೆಗೆ ಪಾವತಿಸಲಾಗಿದೆ; | ಉದ್ಯೋಗ ಖಾತ್ರಿಯಡಿ ಕೂಲಿ ವೆಚ್ಚವನ್ನು ದಿನಾಂಕ: 21-09-2020 ರವರೆಗೆ ಪಾವತಿಸಲಾಗಿದೆ. ಕೂಲಿ ಸಾಮಗ್ರಿ ವೆಚ್ಚಗಳಿಗೆ ಸಂಬಂಧಿಸಿದಂತೆ ಜಿಲ್ಲೆಗಳಿಂದ ಬಂದಿರುವ ವರದಿಗಳನ್ವಯ ಪರಿಶೀಲಿಸಿ ಸಾಮಗ್ರಿ ವೆಚ್ಚಗಳನ್ನು ಬಿಡುಗಡೆಗೊಳಿಸಲು ಕ್ರಮ ವಹಿಸಲಾಗುತ್ತಿದೆ. |
| ಇ) | ಕೂಲಿ ಕಾರ್ಮಿಕರಿಗೆ ಪಾವತಿ ಮಾಡದೆ ಸರ್ಕಾರ ಬಾಕಿ ಉಳಿಸಿಕೊಂಡಿರುವ ಮೊತ್ತವೆಷ್ಟು; ಬಾಕಿ ಇರುವ ಸಾಮಗ್ರಿ ವೆಚ್ಚವೆಷ್ಟು; | ದಿನಾಂಕ: 22-09-2020 ರವರೆಗೆ ಸರ್ಕಾರದಿಂದ ಕೂಲಿ ಕಾರ್ಮಿಕರಿಗೆ ಪಾವತಿಸಲು ಬಾಕಿ ಇರುವ ಮೊತ್ತವು ರೂ. 107.98 ಕೋಟಿಗಳು ಇರುತ್ತದೆ ಹಾಗೂ ಸಾಮಗ್ರಿ ವೆಚ್ಚಗಳಿಗೆ ರೂ.771.87 ಕೋಟಿಗಳು ಇರುತ್ತದೆ.<br><br>ವರ್ಷ / 2018-19 (ರೂ. ಲಕ್ಷಗಳಲ್ಲಿ) / 2019-20 (ರೂ. ಲಕ್ಷಗಳಲ್ಲಿ) / 2020-21 (ರೂ. ಲಕ್ಷಗಳಲ್ಲಿ) / ಒಟ್ಟು (ರೂ. ಲಕ್ಷಗಳಲ್ಲಿ)<br>ಕೂಲಿ / 2791.86 / 1741.40 / 6244.71 / 10777.94<br>ಸಾಮಗ್ರಿ / 3089.95 / 25811.53 / 48285.52 / 77187.00 |
| ಈ) | ಭಾರತ ಸಂಸತ್ತು ರೂಪಿಸಿರುವ ಕಾನೂನಿನಡಿ ಎಷ್ಟು ದಿನಗಳೊಳಗಾಗಿ ಈ ಮೊತ್ತ ಪಾವತಿಸಬೇಕು; ಕೂಲಿ ಪಾವತಿಸಲು ಎಷ್ಟು ದಿನಗಳ ಸಮಯ ತೆಗೆದುಕೊಳ್ಳಲಾಗುತ್ತಿದೆ; | ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ, 2005ರ ಸೆಕ್ಷನ್-3(3) ರನ್ವಯ, ವಾರಕ್ಕೊಮ್ಮೆ ಅಥವಾ ಕೆಲಸ ನಿರ್ವಹಿಸಿದ 15 ದಿನಗಳ ಒಳಗೆ ಕೂಲಿಯನ್ನು ಪಾವತಿಸಬೇಕು. ಪ್ರಸಕ್ತ ಸಾಲಿನಲ್ಲಿ 98.97% ಪ್ರಕರಣಗಳಲ್ಲಿ 15 ದಿನಗಳ ಒಳಗೆ ಕೂಲಿ ಪಾವತಿ ಮಾಡಲಾಗುತ್ತಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ N-efms ನಲ್ಲಿ ಅನುದಾನ ಲಭ್ಯವಿಲ್ಲದಿದ್ದಲ್ಲಿ ಕೂಲಿ ಪಾವತಿಗೆ ವಿಳಂಬವಾಗುತ್ತದೆ. |
| ಉ) | ಇಲ್ಲಿಯವರೆಗೂ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರದ ಪರವಾಗಿ ಮಾಡಿರುವ ಒಟ್ಟು ಹಿಂದಿನ ವರ್ಷಗಳು ಸೇರಿ ಮುಂಗಡ ಹಣವೆಷ್ಟು; ಇದರಲ್ಲಿ ರಾಜ್ಯ ಸರ್ಕಾರಕ್ಕೆ ಮರು ಸಂದಾಯವಾದದ್ದು ಎಷ್ಟು ಹಾಗೂ ಕೇಂದ್ರ ಸರ್ಕಾರ ರಾಜ್ಯಕ್ಕೆ ಇನ್ನೂ ಬಾಕಿ ಉಳಿಸಿಕೊಂಡಿರುವ ಮೊತ್ತವೆಷ್ಟು? | ಮಹಾತ್ಮಗಾಂಧಿ ನರೇಗಾ ಯೋಜನೆಯಡಿ 2015-16 ರಿಂದ 2019-20ನೇ ಸಾಲಿನವರೆಗೆ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರದ ಪರವಾಗಿ ರೂ. 351332.00 ಲಕ್ಷಗಳನ್ನು ಮುಂಗಡ ಪಾವತಿ ಮಾಡಿದ್ದು, ಈ ಮೊತ್ತವನ್ನು ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಮರು ಪಾವತಿ ಮಾಡಿದ್ದು, ಸದರಿ ಮುಂಗಡ ಹಣದಲ್ಲಿ ಯಾವುದೇ ಬಾಕಿ ಇರುವುದಿಲ್ಲ. |

ಸಂಖ್ಯೆ: ಗ್ರಾಅಪ 38(213) ಉಖಾಯೋ 2019

**(ಕೆ.ಎಸ್.ಈಶ್ವರಪ್ಪ)**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**Annexure -I**

LAQ-695

| Sl.No | Month | 2018-19 (In Lakhs) | | | | 2019-20 (In Lakhs) | | | | 2020-21 (In Lakhs) | | | |
|---|---|---|---|---|---|---|---|---|---|---|---|---|---|
| | | Projected Persondays | Persondays Generated | %age | Financial Achievement | Projected Persondays | Persondays Generated | %age | Financial Achievement | Projected Persondays | Persondays Generated | %age | Financial Ach |
| 1 | April | 38.22 | 38.16 | 99.82 | 8645.84 | 113.55 | 113.13 | 99.64 | 37581.95 | 60.74 | 60.72 | 99.98 | 9327. |
| 2 | May | 48.25 | 48.20 | 99.90 | 15693.27 | 160.63 | 159.88 | 99.54 | 97493.17 | 209.18 | 209.09 | 99.96 | 52233 |
| 3 | June | 62.86 | 62.81 | 99.92 | 73146.84 | 129.83 | 142.61 | 109.85 | 43056.90 | 244.20 | 243.79 | 99.83 | 97373. |
| 4 | July | 76.91 | 76.85 | 99.92 | 30718.75 | 104.00 | 141.79 | 136.33 | 40844.04 | 191.18 | 190.16 | 99.47 | 614[illegible] |
| 5 | August | 82.69 | 82.61 | 99.90 | 31618.33 | 101.00 | 91.56 | 90.66 | 59533.96 | 112.00 | 121.38 | 108.37 | 4480 |
| 6 | September | 75.75 | 75.67 | 99.89 | 23542.48 | 96.00 | 70.79 | 73.74 | 23715.10 | 98.00 | 42.75 (As on 23-09-2020) | 43.62 | 2588 (As on 23-0 |
| 7 | October | 102.75 | 102.61 | 99.87 | 28746.00 | 80.00 | 55.06 | 68.83 | 53286.10 | 71.00 | | | |
| 8 | November | 107.24 | 107.12 | 99.89 | 32368.49 | 82.00 | 58.73 | 71.62 | 14396.18 | 63.00 | | | |
| 9 | December | 147.02 | 146.97 | 99.96 | 22362.04 | 83.00 | 62.66 | 75.49 | 15391.56 | 67.00 | | | |
| 10 | January | 111.22 | 133.76 | 120.27 | 3347.95 | 85.00 | 76.13 | 89.56 | 17408.67 | 69.00 | | | |
| 11 | February | 80.90 | 109.53 | 135.39 | 37292.02 | 85.00 | 87.01 | 102.37 | 34515.56 | 69.00 | | | |
| 12 | March | 66.19 | 60.64 | 91.61 | 52767.28 | 80.00 | 62.42 | 78.02 | 34783.27 | 45.70 | | | |
| | Total | 1000.00 | 1044.92 | 104.49 | 360249.29 | 1200.00 | 1121.77 | 93.48 | 472006.46 | 1300.00 | 825.14 | 63.47 | 29111 |

# ಕರ್ನಾಟಕ ವಿಧಾನಸಭೆ

1. ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 811
3. ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವಸತಿ ಇಲಾಖೆಯಿಂದ ನೀಡಲಾಗುತ್ತಿರುವ ಆಶ್ರಯ ಮನೆಗಳನ್ನು ನರೇಗಾ ಯೋಜನೆಯಲ್ಲಿ ಸೇರ್ಪಡೆ ಮಾಡಿಕೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿ ವಸತಿ ಇಲಾಖೆ ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಆಶ್ರಯ ಯೋಜನೆಯ ಮನೆಗಳನ್ನು ನಿರ್ಮಿಸಲು ಒಗ್ಗೂಡಿಸುವಿಕೆ ಕಾರ್ಯಕ್ರಮದಡಿ 90 ಮಾನವ ದಿನಗಳಷ್ಟು ಹಣವನ್ನು ಫಲಾನುಭವಿಗಳಿಗೆ ಹಂತ ಹಂತವಾಗಿ ಬಿಡುಗಡೆ ಮಾಡಲಾಗುತ್ತಿದೆ. |
| ಆ) | ಆಶ್ರಯ ಮನೆಗಳನ್ನು ನರೇಗಾ ಯೋಜನೆಯಡಿ ಸೇರ್ಪಡೆ ಮಾಡಿದ್ದಲ್ಲಿ ವಸತಿ ಇಲಾಖೆಗೆ ನೀಡಲಾಗುವ ಅನುದಾನದ ಹೊರೆ ಕಡಿಮೆಯಾಗುವುದಿಲ್ಲವೇ; | ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಮಾರ್ಗಸೂಚಿಗಳಂತೆ, ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಆಶ್ರಯ ಯೋಜನೆಯ ಮನೆಗಳ ನಿರ್ಮಾಣಕ್ಕೆ ವಸತಿ ಇಲಾಖೆಯ ಅನುದಾನದ ಜೊತೆಗೆ 90 ಮಾನವ ದಿನಗಳ ಕೂಲಿ ಮೊತ್ತ ರೂ.24,750/- ಗಳನ್ನು ಫಲಾನುಭವಿಯ ಖಾತೆಗೆ ನೇರವಾಗಿ ಪಾವತಿಸಲಾಗುತ್ತಿದೆ. |
| ಇ) | ಸದರಿ ಯೋಜನೆಯಡಿ ಆಶ್ರಯ ಮನೆಯನ್ನು ಶೇಕಡಾ-20 ಕೂಲಿ ಮತ್ತು ಶೇಕಡಾ 80 ರಷ್ಟು ಸಾಮಗ್ರಿ ಬಿಲ್ ಮಾಡಲು ಯೋಜನೆ ರೂಪಿಸಿದರೆ ವಸತಿ ಇಲಾಖೆಗೆ ಆರ್ಥಿಕ ಹೊರೆ ಕಡೆಮೆಯಾಗುವುದಿಲ್ಲವೇ? (ವಿವರ ನೀಡುವುದು) | ಪ್ರಸ್ತುತ ಕೇಂದ್ರ ಗ್ರಾಮೀಣಭಿವೃದ್ಧಿ ಮಂತ್ರಾಲಯದ ಮಾರ್ಗಸೂಚಿಗಳನ್ವಯ ಗರಿಷ್ಠ 90 ದಿನಗಳ ಕೂಲಿ ಮೊತ್ತ ರೂ. 24,750/-ಗಳನ್ನು ಮಾತ್ರ ಒದಗಿಸಲು ಅವಕಾಶವಿರುತ್ತದೆ. |

ಸಂಖ್ಯೆ: ಗ್ರಾಅಪ 38(215) ಉಖಾಯೋ 2019

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನಸಭೆ

1. ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1043
3. ಉತ್ತರಿಸಬೇಕಾದ ದಿನಾಂಕ : 23-09-2020

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕೊಪ್ಪಳ ಜಿಲ್ಲೆಯಲ್ಲಿ 2018-19ನೇ ಸಾಲಿನಿಂದ ಪ್ರಸಕ್ತ ಸಾಲಿನವರೆಗೂ ಎಂ.ಜಿ.ಎನ್.ಆರ್.ಇ.ಜಿ.ಎ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು; (ತಾಲ್ಲೂಕುವಾರು ವಿವರ ನೀಡುವುದು)</td><td>ಕೊಪ್ಪಳ ಜಿಲ್ಲೆಯಲ್ಲಿ 2018-19ನೇ ಸಾಲಿನಿಂದ ಪ್ರಸಕ್ತ ಸಾಲಿನವರೆಗೂ ಎಂ.ಜಿ.ಎನ್.ಆರ್.ಇ.ಜಿ.ಎ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳ ವಿವರಗಳನ್ನು ಅನುಬಂಧ-1 ಎಂದು ಗುರುತಿಸಿ ಲಗತ್ತಿಸಿದೆ.</td></tr>
<tr><td>ಆ)</td><td>ಸದರಿ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳಿಗಾಗಿ ಬಿಡುಗಡೆ ಮಾಡಲಾದ ಅನುದಾನವೆಷ್ಟು;</td><td><table>
<tr><th>ವರ್ಷ</th><th>ಅನುದಾನ (ರೂ. ಕೋಟಿಗಳಲ್ಲಿ)</th></tr>
<tr><td>2018-19</td><td>132.92</td></tr>
<tr><td>2019-20</td><td>207.65</td></tr>
<tr><td>2020-21</td><td>81.79</td></tr>
</table>
ಅನುದಾನ ಕೊಪ್ಪಳ ಜಿಲ್ಲೆಗೆ ಬಿಡುಗಡೆಯಾಗಿರುತ್ತದೆ.</td></tr>
<tr><td>ಇ)</td><td>ಕಾಮಗಾರಿಗಳು ಮುಕ್ತಾಯಗೊಂಡು ಅನುದಾನ ಬಿಡುಗಡೆಗಾಗಿ ಬಾಕಿ ಇರುವ ಪ್ರಕರಣಗಳೇನಾದರೂ ಇವೆಯೇ; ಇದ್ದಲ್ಲಿ ವಿಳಂಬಕ್ಕೆ ಕಾರಣಗಳೇನು;</td><td>ಇದೆ. 2019-20ನೇ ಸಾಲಿನಲ್ಲಿ 29.87 ಕೋಟಿ ಅನುದಾನ ಬಿಡುಗಡೆಗೆ ಬಾಕಿ ಇರುತ್ತದೆ.<br>2020-21ನೇ ಸಾಲಿನಲ್ಲಿ ರೂ. 18.16 ಕೋಟಿ ಅನುದಾನ ಬಿಡುಗಡೆಯಾಗಬೇಕಿದೆ.</td></tr>
<tr><td>ಈ)</td><td>ಕಾಮಗಾರಿಗಳು ಪೂರ್ಣಗೊಂಡರೂ ಇದುವರೆಗೂ ಎಮ್.ಐ.ಎಸ್. ತಂತ್ರಾಂಶದಲ್ಲಿ ದಾಖಲಾಗದ ಪ್ರಕರಣಗಳು ಇವೆಯೇ; ಇದ್ದಲ್ಲಿ ಇದಕ್ಕೆ ಕಾರಣವೇನು</td><td>ಇಂತಹ ಪ್ರಕರಣಗಳು ವರದಿಯಾಗಿರುವುದಿಲ್ಲ.</td></tr>
</table>

ಸಂಖ್ಯೆ: ಗ್ರಾಅಪ 38(217) ಉಖಾಯೋ 2019

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

1043

# ಜಿಲ್ಲಾ ಪಂಚಾಯತ್, ಕೊಪ್ಪಳ.

ವಿಧಾನ ಸಭೆಯ ಸದಸ್ಯರು ಶ್ರೀ ಆಚಾರ್ ಹಾಲಪ್ಪ ಬಸಪ್ಪ ( ಯಲಬುರ್ಗಾ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1043 ಕ್ಕೆ ಉತ್ತರ

| ಕ್ರ.ಸಂ | ತಾಲೂಕು | 2018-19 | 2019-20 | 2020-21 |
|---|---|---|---|---|
| | | ಕಾಮಗಾರಿಗಳ ವಿವರ | ಕಾಮಗಾರಿಗಳ ವಿವರ | ಕಾಮಗಾರಿಗಳ ವಿವರ |
| 1 | ಕೊಪ್ಪಳ | ಕಟ್ಟಡ ಕಾಮಗಾರಿ-6, ಅರಣ್ಯೀಕರ-123, ಗೋದಾಮು-8, ಪ್ರವಾಹ ನಿಯಂತ್ರಣ ಕಾಮಗಾರಿ-37, ಕಿರುಗಾಲುವೆ ಹೂಳೆತ್ತುವುದು-3, ವೈಯಕ್ತಿಕ ಕಾಮಗಾರಿ-3575, ಭೂಮಿ ಸಮತಟ್ಟು ಕಾಮಗಾರಿ-23, ಆಟದ ಮೈದಾನ-2, ರಸ್ತೆ-38, ಕೆರೆ ಹೂಳೆತ್ತುವುದು-123. | ಕಟ್ಟಡ ಕಾಮಗಾರಿ-5, ಅರಣ್ಯೀಕರ-79, ಗೋದಾಮು-2, ಪ್ರವಾಹ ನಿಯಂತ್ರಣ ಕಾಮಗಾರಿ-15, ಕಿರುಗಾಲುವೆ ಹೂಳೆತ್ತುವುದು-2, ವೈಯಕ್ತಿಕ ಕಾಮಗಾರಿ-1988, ಭೂಮಿ ಸಮತಟ್ಟು ಕಾಮಗಾರಿ-14, ರಸ್ತೆ-58, ಕೆರೆ ಹೂಳೆತ್ತುವುದು-124, ಚೆಕ್ ಡ್ಯಾಂ-65. | ಕಟ್ಟಡ ಕಾಮಗಾರಿ-32, ಅರಣ್ಯೀಕರ-170, ಗೋದಾಮು-3, ಪ್ರವಾಹ ನಿಯಂತ್ರಣ ಕಾಮಗಾರಿ-49, ಕಿರುಗಾಲುವೆ ಹೂಳೆತ್ತುವುದು-3, ಭೂಮಿ ಸಮತಟ್ಟು-42, ವೈಯಕ್ತಿಕ ಕಾಮಗಾರಿ-5233, ರಸ್ತೆ-113, ಕೆರೆ ಹೂಳೆತ್ತುವುದು-13[illegible] |
| 2 | ಗಂಗಾವತಿ | ಕಟ್ಟಡ ಕಾಮಗಾರಿ-10, ಅರಣ್ಯೀಕರ-21, ಗೋದಾಮು-2, ಪ್ರವಾಹ ನಿಯಂತ್ರಣ ಕಾಮಗಾರಿ-191, ಕಿರುಗಾಲುವೆ ಹೂಳೆತ್ತುವುದು-17, ವೈಯಕ್ತಿಕ ಕಾಮಗಾರಿ-2352, ಭೂಮಿ ಸಮತಟ್ಟು ಕಾಮಗಾರಿ-13, ಆಟದ ಮೈದಾನ-6, ರಸ್ತೆ-197, ಕೆರೆ ಹೂಳೆತ್ತುವುದು-93. | ಕಟ್ಟಡ ಕಾಮಗಾರಿ-4, ಅರಣ್ಯೀಕರ-34, ಗೋದಾಮು-2, ಪ್ರವಾಹ ನಿಯಂತ್ರಣ ಕಾಮಗಾರಿ-96, ಕಿರುಗಾಲುವೆ ಹೂಳೆತ್ತುವುದು-14, ವೈಯಕ್ತಿಕ ಕಾಮಗಾರಿ-1279, ಭೂಮಿ ಸಮತಟ್ಟು ಕಾಮಗಾರಿ-13, ರಸ್ತೆ-134, ಕೆರೆ ಹೂಳೆತ್ತುವುದು-88, ಚೆಕ್ ಡ್ಯಾಂ-69. | ಕಟ್ಟಡ ಕಾಮಗಾರಿ-5, ಅರಣ್ಯೀಕರ-59, ಪ್ರವಾಹ ನಿಯಂತ್ರಣ ಕಾಮಗಾರಿ-1[illegible], ಕಿರುಗಾಲುವೆ ಹೂಳೆತ್ತುವುದು-98, ವೈಯಕ್ತಿಕ ಕಾಮಗಾರಿ-67[illegible] [illegible] ಕಾಮಗಾರಿ-3[illegible], ರಸ್ತೆ-[illegible], ಕೆರೆ ಹೂಳೆತ್ತುವುದು-[illegible] |
| 3 | ಕುಷ್ಟಗಿ | ಕಟ್ಟಡ ಕಾಮಗಾರಿ-04, ಅರಣ್ಯೀಕರ-45, ಗೋದಾಮು-2, ಪ್ರವಾಹ ನಿಯಂತ್ರಣ ಕಾಮಗಾರಿ-155, ವೈಯಕ್ತಿಕ ಕಾಮಗಾರಿ-2352, ಭೂಮಿ ಸಮತಟ್ಟು ಕಾಮಗಾರಿ-47, ಆಟದ ಮೈದಾನ-6, ರಸ್ತೆ-175, ಕೆರೆ ಹೂಳೆತ್ತುವುದು-206. | ಅರಣ್ಯೀಕರ-10, ಪ್ರವಾಹ ನಿಯಂತ್ರಣ ಕಾಮಗಾರಿ-73, ವೈಯಕ್ತಿಕ ಕಾಮಗಾರಿ-849, ಭೂಮಿ ಸಮತಟ್ಟು ಕಾಮಗಾರಿ-18, ರಸ್ತೆ-145, ಕೆರೆ ಹೂಳೆತ್ತುವುದು-212, ಚೆಕ್ ಡ್ಯಾಂ-635 | ಕಟ್ಟಡ ಕಾಮಗಾರಿ-16, ಅರಣ್ಯೀಕರ-104, ಪ್ರವಾಹ ನಿಯಂತ್ರಣ ಕಾಮಗಾರಿ-190, ವೈಯಕ್ತಿಕ ಕಾಮಗಾರಿ-7751, ಭೂಮಿ ಸಮತಟ್ಟು ಕಾಮಗಾರಿ-222, ರಸ್ತೆ-12[illegible], ಕೆರೆ ಹೂಳೆತ್ತುವುದು-208. |
| 4 | ಯಲಬುರ್ಗಾ | ಕಟ್ಟಡ ಕಾಮಗಾರಿ-2, ಅರಣ್ಯೀಕರ-45, ಗೋದಾಮು-2, ಪ್ರವಾಹ ನಿಯಂತ್ರಣ ಕಾಮಗಾರಿ-155, ವೈಯಕ್ತಿಕ ಕಾಮಗಾರಿ-2352, ಭೂಮಿ ಸಮತಟ್ಟು ಕಾಮಗಾರಿ-47, ಆಟದ ಮೈದಾನ-6, ರಸ್ತೆ-175, ಕೆರೆ ಹೂಳೆತ್ತುವುದು-206. | ಕಟ್ಟಡ ಕಾಮಗಾರಿ-3, ಅರಣ್ಯೀಕರ-51, ಗೋದಾಮು-1, ಪ್ರವಾಹ ನಿಯಂತ್ರಣ ಕಾಮಗಾರಿ-54, ವೈಯಕ್ತಿಕ ಕಾಮಗಾರಿ-1957, ಭೂಮಿ ಸಮತಟ್ಟು ಕಾಮಗಾರಿ-14, ಆಟದ ಮೈದಾನ-1, ರಸ್ತೆ-20, ಕೆರೆ ಹೂಳೆತ್ತುವುದು-46, ಚೆಕ್ ಡ್ಯಾಂ-23. | ಕಟ್ಟಡ ಕಾಮಗಾರಿ-3, ಅರಣ್ಯೀಕರ-93, ಪ್ರವಾಹ ನಿಯಂತ್ರಣ ಕಾಮಗಾರಿ-31, ವೈಯಕ್ತಿಕ ಕಾಮಗಾರಿ-3038, ಭೂಮಿ ಸಮತಟ್ಟು ಕಾಮಗಾರಿ-351, ಆಟದ ಮೈದಾನ-1, ರಸ್ತೆ-42, ಕೆರೆ ಹೂಳೆತ್ತುವುದು-79. |
| 5 | ಕನಕಗಿರಿ | - | - | ಕಟ್ಟಡ ಕಾಮಗಾರಿ-3, ಅರಣ್ಯೀಕರ-53, ಪ್ರವಾಹ ನಿಯಂತ್ರಣ ಕಾಮಗಾರಿ-30, ವೈಯಕ್ತಿಕ ಕಾಮಗಾರಿ-892, ಗೋದಾಮು-2, ಭೂಮಿ ಸಮತಟ್ಟು ಕಾಮಗಾರಿ-82, ಕಿರುಗಾಲುವೆ ಹೂಳೆತ್ತುವುದು-21, ರಸ್ತೆ-1[illegible], [illegible] 26. |

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1067
ಸದಸ್ಯರ ಹೆಸರು : ಶ್ರೀ ಗಣೇಶ್ ಜೆ.ಎನ್ (ಕಂಪ್ಲಿ)
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 23-09-2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಹೊಸದಾಗಿ ರಚನೆಯಾಗಿರುವಂತಹ ತಾಲ್ಲೂಕು ಕೇಂದ್ರಗಳಲ್ಲಿ ಬಸ್ ಡಿಪೋ ಮಂಜೂರು ಮಾಡುವ ಯೋಜನೆ ಸರ್ಕಾರದ ಮುಂದಿದೆಯೇ? | ರಾಜ್ಯದಲ್ಲಿ ಹೊಸದಾಗಿ ರಚನೆಯಾಗಿರುವಂತಹ ತಾಲ್ಲೂಕು ಕೇಂದ್ರಗಳಲ್ಲಿ ಸಂಸ್ಥೆಯ ನಿಯಮಾವಳಿಗಳನ್ವಯ ಪರಿಶೀಲಿಸಿ, ಅವಶ್ಯಕತೆಗೆ ಅನುಗುಣವಾಗಿ ಬಸ್ ಡಿಪೋ ಮಂಜೂರು ಮಾಡುವ ಕ್ರಮ ಜಾರಿಯಲ್ಲಿರುತ್ತದೆ. ಸಂಸ್ಥೆಯ ಸುತ್ತೋಲೆ ಸಂಖ್ಯೆ: 01/2015-16 ದಿನಾಂಕ: 06/06/2015ರನ್ವಯ ತಾಲ್ಲೂಕು ಮಟ್ಟದಲ್ಲಿ ಬಸ್ ಘಟಕ ನಿರ್ಮಿಸಲು ಕನಿಷ್ಠ 75 ಅನುಸೂಚಿಗಳು ಇದ್ದಲ್ಲಿ ಮಾತ್ರ ನಿರ್ಮಿಸುವಂತೆ, ಆದಾಗ್ಯೂ ಒಂದು ವೇಳೆ ಹತ್ತಿರದ ಘಟಕದಿಂದ 40 ರಿಂದ 50 ಕಿ.ಮೀ. ಅಂತರದಲ್ಲಿದ್ದು, ಆ ಘಟಕವು 125ರಿಂದ 150 ಅನುಸೂಚಿಗಳನ್ನು ಹೊಂದಿದ್ದಲ್ಲಿ, ಅಂತಹ ತಾಲೂಕು ಕೇಂದ್ರಗಳಲ್ಲಿ ಬಸ್ ಘಟಕ ಪ್ರಾರಂಭಿಸಲು ಕನಿಷ್ಠ 50 ಅನುಸೂಚಿಗಳೊಂದಿಗೆ ನೂತನ ಘಟಕ ಸ್ಥಾಪಿಸಲು ಪರಿಶೀಸಲಾಗುವುದು. |
| ಆ. | ಹಾಗಿದ್ದಲ್ಲಿ, ಕಂಪ್ಲಿ ಮತ್ತು ಕುರುಗೂಡು ತಾಲ್ಲೂಕು ಕೇಂದ್ರಕ್ಕೆ ಬಸ್ ಡಿಪೋ ಮಂಜೂರು ಮಾಡಲಾಗುವುದೇ? | ಬಳ್ಳಾರಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಕುರುಗೋಡು ತಾಲ್ಲೂಕು ಕೇಂದ್ರದಲ್ಲಿ ಏಪ್ರಿಲ್-2018ರಿಂದ ಬಸ್ ಡಿಪೋವನ್ನು ಪ್ರಾರಂಭಿಸಲಾಗಿರುತ್ತದೆ.<br>ಹೊಸಪೇಟೆ ವಿಭಾಗದ ವ್ಯಾಪ್ತಿಯಲ್ಲಿ ಬರುವ ಕಂಪ್ಲಿ ತಾಲ್ಲೂಕಿನ ಕೇಂದ್ರಸ್ಥಾನ ಕಂಪ್ಲಿಯಿಂದ 12 ಕಿ.ಮೀ ಅಂತರದಲ್ಲಿ ಗಂಗಾವತಿ ಘಟಕ, 28 ಕಿ.ಮೀ. ಅಂತರದಲ್ಲಿ ಕುರುಗೋಡ ಘಟಕ ಮತ್ತು 32 ಕಿ.ಮೀ. ಅಂತರದಲ್ಲಿ ಹೊಸಪೇಟೆ ಘಟಕ ಕಾರ್ಯಾಚರಣೆಯಲ್ಲಿರುತ್ತವೆ.<br>ಈ ಹಿನ್ನೆಲೆಯಲ್ಲಿ, ಈ.ಕ.ರ.ಸಾ.ಸಂಸ್ಥೆಯ ಆರ್ಥಿಕ ದೃಷ್ಟಿಯಿಂದ ಕಂಪ್ಲಿಯಲ್ಲಿ ನೂತನ ಬಸ್ ಘಟಕ ನಿರ್ಮಿಸುವುದು ಸೂಕ್ತವಾಗಿರುವುದಿಲ್ಲ. |

ಸಂಖ್ಯೆ: ಟಿಡಿ 151 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1030

ಸದಸ್ಯರ ಹೆಸರು : ಶ್ರೀ ಸುರೇಶ್ ಗೌಡ

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯ ರಸ್ತೆ ಸುರಕ್ಷತಾ ಪ್ರಾಧಿಕಾರದಲ್ಲಿ 2018-19 ಮತ್ತು 2019-20 ನೇ ಸಾಲಿನಲ್ಲಿ ಟೆಂಡರ್ ಕರೆಯದೆ ಕೆ.ಟಿ.ಪಿ.ಪಿ. 4(ಜಿ) ವಿನಾಯಿತಿ ಮೇರೆಗೆ ಖರ್ಚು ಮಾಡಿದ ಹಣವೆಷ್ಟು? (ಕಾಮಗಾರಿವಾರು ಪೂರ್ಣ ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಯಾವುದೇ ಕಾಮಗಾರಿಯನ್ನು ಕೈಗೊಂಡಿರುವುದಿಲ್ಲ.<br><br>ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಒಟ್ಟಾರೆಯಾಗಿ ರೂ.3,85,51,148.00 ಗಳ ಮೊತ್ತವನ್ನು ಸರ್ಕಾರದ ಸ್ವಾಮ್ಯದ ಸಂಸ್ಥೆಗಳ ಮುಖಾಂತರ ನಿಯಮಾನುಸಾರ ವೆಚ್ಚ ಮಾಡಲಾಗಿರುತ್ತದೆ. ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| (ಆ) | 2018-19 ಮತ್ತು 2019-20 ನೇ ಸಾಲಿನಲ್ಲಿ ಟೆಂಡರ್ ಕರೆಯದೆ ಕೆ.ಟಿ.ಪಿ.ಪಿ. ಕಾಯ್ದೆ ಉಲ್ಲಂಘನೆ ಮಾಡಿ, ತುಂಡು ಗುತ್ತಿಗೆ ಮೇರೆಗೆ ಕಾಮಗಾರಿಗಳನ್ನು ತಾಲ್ಲೂಕುವಾರು / ಜಿಲ್ಲಾವಾರು ಎಂದು ವಿಂಗಡಿಸಿ, ಕಾಮಗಾರಿ ಮೊತ್ತವನ್ನು ಕಡಿಮೆ ತೋರಿಸಿ, ಟೆಂಡರ್ ಕರೆಯದೆ ಖರ್ಚು ಮಾಡಿದ ಅಧಿಕಾರಿ / ನೌಕರರ ಮೇಲೆ ಕ್ರಮ ಕೈಗೊಳ್ಳಲಾಗುವುದೇ? (ಪೂರ್ಣ ವಿವರ ನೀಡುವುದು). | ಅನುಬಂಧ-2 ರಲ್ಲಿ ನೀಡಲಾಗಿರುವ ವಿವರಗಳನ್ವಯ ಯಾವುದೇ ರೀತಿಯಲ್ಲಿ ಕೆ.ಟಿ.ಪಿ.ಪಿ. ಕಾಯ್ದೆಯ ಉಲ್ಲಂಘನೆ ಆಗಿರುವುದಿಲ್ಲ. ಆದ ಕಾರಣ, ಅಧಿಕಾರಿ / ನೌಕರರ ಮೇಲೆ ಕ್ರಮ ಕೈಗೊಳ್ಳುವುದು ಉದ್ಭವಿಸುವುದಿಲ್ಲ. |

ಟಿಡಿ 61 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1091

ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಸಾರಿಗೆ ಇಲಾಖೆಯ ಮೋಟಾರ್ ವಾಹನ ನಿರೀಕ್ಷಕರು/ಹಿರಿಯ ಮೋಟಾರ್ ವಾಹನ ನಿರೀಕ್ಷಕರು/ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕಛೇರಿಗೆ ಮತ್ತು ತನಿಖಾ ಠಾಣೆಗಳಿಗೆ ಹಾಜರಾಗದೇ ಇದ್ದರೂ ಮೇಲಾಧಿಕಾರಿಗಳ ಸಹಕಾರದಿಂದ ಪೂರ್ಣವಾಗಿ ಸಂಬಳ ಪಡೆದು ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡುತ್ತಿರುವ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ; ಯಾವ ಕಾಲಮಿತಿಯಲ್ಲಿ ಇದನ್ನು ತಡೆಗಟ್ಟಲು ಕ್ರಮಕೈಗೊಳ್ಳಲಾಗುವುದು (ಪೂರ್ಣ ವಿವರ ನೀಡುವುದು) | ಸಾರಿಗೆ ಇಲಾಖೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು / ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು / ಹಿರಿಯ ಮೋಟಾರು / ಮೋಟಾರು ವಾಹನ ನಿರೀಕ್ಷಕರುಗಳಿಗೆ ಸಂಬಂಧಿಸಿದಂತೆ ಅನಧಿಕೃತ ಗೈರುಹಾಜರಿ ಕುರಿತಂತೆ ವರದಿಯಾಗಿರುವುದಿಲ್ಲ. ಆ ಕುರಿತಂತೆ ವರದಿಯಾದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಗಳು 1957 ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಪ್ರಕಾರ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |
| (ಆ) | ಸರ್ಕಾರದ ಹಣವನ್ನು ಖಜಾನೆಗೆ ಜಮಾ ಮಾಡುವಲ್ಲಿ ಹಣ ದುರುಪಯೋಗವಾದ ಪ್ರಕರಣಗಳು ಯಾವುವು; ಇವುಗಳಲ್ಲಿ ಆರೋಪಿತರಾಗಿರುವ ಅಧಿಕಾರಿ/ನೌಕರರ ಪೂರ್ಣ ವಿವರ ನೀಡುವುದು; | ಸರ್ಕಾರದ ಹಣವನ್ನು ಖಜಾನೆಗೆ ಜಮಾ ಮಾಡುವಲ್ಲಿ ದುರುಪಯೋಗವಾದ ಪ್ರಕರಣಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಇ) | ಸರ್ಕಾರದ ಹಣವನ್ನು ಖಜಾನೆಗೆ ಜಮಾ ಮಾಡುವಲ್ಲಿ ದುರುಪಯೋಗವಾದ ಹಣವನ್ನು ಸರ್ಕಾರದ ಖಾತೆಗೆ ಜಮಾ ಮಾಡುವಲ್ಲಿ ಯಾವ ಕಾಲಮಿತಿಯಲ್ಲಿ ತೆಗೆದು ಕೊಳ್ಳಲಾಗುವುದು (ಪೂರ್ಣ ವಿವರ ನೀಡುವುದು); | ಸರ್ಕಾರದ ಹಣ ದುರುಪಯೋಗ ಸಾಬೀತಾದ ಪ್ರಕರಣಗಳಲ್ಲಿ ಸಂಬಂಧಪಟ್ಟ ಅಧಿಕಾರಿ / ನೌಕರರುಗಳಿಂದ ಸರ್ಕಾರದ ಹಣವನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) 1957 ರ ನಿಯಮ 8(4), ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214, Litigation Act 1988 ಪ್ರಕಾರ ಹಾಗೂ ಹೆಚ್ಚಿನ ಮೊತ್ತ ಬಾಕಿಯಿದ್ದಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿ Arrears of Land Revenue ಮೂಲಕ ವಸೂಲಿಸಲು ಕ್ರಮವಹಿಸಲಾಗುತ್ತಿದೆ. |
| (ಈ) | ಗೋಕಾಕ್ ಎ.ಆರ್.ಟಿ.ಓ ಕಛೇರಿಯ ಹಣ ದುರುಪಯೋಗವಾದ ಪ್ರಕರಣವನ್ನು ಸಿ.ಓ.ಡಿ/ಸಿ.ಐ.ಡಿ ತನಿಖೆಗೆ ಒಳಪಡಿಸಲು ಶಿಫಾರಸ್ಸು ಮಾಡಿದ್ದರೂ ಸಹ ಸರ್ಕಾರ ಕ್ರಮ ವಹಿಸದೇ ಇರಲು ಕಾರಣಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಗೋಕಾಕ್ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿನ ಖಜಾನೆ ವಿಭಾಗದಲ್ಲಿ ಒಟ್ಟು ರೂ.4,84,32,809/- ಗಳ ಮೊತ್ತವು ದೂರುಪಯೋಗವಾಗಿರುವುದಾಗಿ ಮಹಾಲೇಖಪಾಲರು, ಬೆಂಗಳೂರು ಇವರ ಕಛೇರಿಯ ಲೆಕ್ಕ ಪರಿಶೋಧನಾ ತಂಡವು |

| | | |
|---|---|---|
| (ಉ) | ಗೋಕಾಕ್ ಎ.ಆರ್.ಟಿ.ಒ ಕಛೇರಿಯ ಹಣ ದುರುಪಯೋಗವಾದ ಒಟ್ಟು ಮೊತ್ತ ಎಷ್ಟು; ಇಲಾಖಾ ವಿಚಾರಣೆಗೆ ವಹಿಸಲಾಗಿದೆಯೇ; ಇದ್ದಲ್ಲಿ ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು; ಈ ಪ್ರಕರಣವನ್ನು ಸಿ.ಐ.ಡಿ ತನಿಖೆಗೆ ವಹಿಸದೇ ಆರೋಪಿಗಳನ್ನು ರಕ್ಷಿಸಲು ಸರ್ಕಾರ ಆಸಕ್ತಿ ವಹಿಸಿದೆಯೇ; ಪೂರ್ಣ ವಿವರಗಳನ್ನು ನೀಡುವುದು; | ದಿನಾಂಕ:31-08-2016 ರಂದು ವರದಿ ಸಲ್ಲಿಸಿರುತ್ತದೆ.<br><br>ಸದರಿ ಪ್ರಕರಣದಲ್ಲಿ ಆರೋಪಿತರಾದ ಒಟ್ಟು 20 ಅಧಿಕಾರಿ/ನೌಕರರ ವಿರುದ್ಧ ಕರ್ನಾಟಕ ನಾಗರೀಕಾ ಸೇವಾ (ಸಿ.ಸಿ.ಎ.) 1957 ರ ನಿಯಮ-13 ರಂತೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿದೆ ಹಾಗೂ ಸದರಿ ಪ್ರಕರಣದಲ್ಲಿ ಆರೋಪಿತರಾದ ಒಟ್ಟು 10 ಅಧಿಕಾರಿ/ನೌಕರರ ವಿರುದ್ಧ ಗೋಕಾಕ್ ನಗರ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂಖ್ಯೆ: 0176/2018 ರಂತೆ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಲಾಗಿದೆ.<br><br>ಗೋಕಾಕ್ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯ ಖಜಾನೆ ವಿಭಾಗದಲ್ಲಿನ ಸರ್ಕಾರಿ ಹಣ ದುರುಪಯೋಗದ ಬಗ್ಗೆ ಜಂಟಿ ಇಲಾಖಾ ವಿಚಾರಣೆಯನ್ನು ಹಾಗೂ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಿರುವುದರಿಂದ ಸಿ.ಐ.ಡಿ. ತನಿಖೆಗೆ ವಹಿಸಿರುವುದಿಲ್ಲ ಮತ್ತು ಆರೋಪಿತರನ್ನು ರಕ್ಷಿಸುವ ಯಾವುದೇ ಉದ್ದೇಶವಿರುವುದಿಲ್ಲ. |
| (ಊ) | ಸಾರಿಗೆ ಇಲಾಖೆಯಲ್ಲಿ ಕೆ.ಆರ್.ಪುರಂ ಕಛೇರಿಯ ಹಣ ದುರುಪಯೋಗ ಪ್ರಕರಣ ಯಾವ ವರ್ಷದಲ್ಲಿ ನಡೆಯಿತು; ದುರಪಯೋಗವಾದ ಮೊತ್ತವೆಷ್ಟು; ಇದುವರೆವಿಗೂ ಇಲಾಖಾ ವಿಚಾರಣೆ ನಡೆಸಿ ಕ್ರಮಕೈಗೊಳ್ಳದೆ ಇರಲು ಕಾರಣಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯ ಕೆ.ಆರ್.ಪುರಂ ಕಛೇರಿಯ ಹಣ ದುರುಪಯೋಗ ಪ್ರಕರಣವು 2014 ನೇ ಸಾಲಿನಲ್ಲಿ ವರದಿಯಾಗಿರುತ್ತದೆ. ಸದರಿ ಪ್ರಕರಣದಲ್ಲಿ ಒಟ್ಟು ರೂ.8,95,539/- ಗಳ ಮೊತ್ತವು ದುರುಪಯೋಗವಾಗಿರುವುದು ಕಂಡು ಬಂದಿರುತ್ತದೆ. ಸದರಿ ಪ್ರಕರಣದ ಬಗ್ಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿದ್ದು, ಆ ಸಂಬಂಧ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸಂಬಂಧಪಟ್ಟ ಆರೋಪಿತ ಅಧಿಕಾರಿ/ನೌಕರರುಗಳಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದ್ದು, ಇಲಾಖಾ ವಿಚಾರಣಾ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. |
| (ಋ) | ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿ, ಗೋಕಾಕ್/ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿ, ಬಂಟ್ವಾಳ ಮತ್ತು ಪ್ರಾದೇಶಿಕ ಸಾರಿಗೆ ಕಛೇರಿ, ಕೆ.ಆರ್. ಪುರಂ ಬೆಂಗಳೂರು ಖಜಾನೆಯ ಹಣ ದುರುಪಯೋಗ ಪ್ರಕರಣಗಳಲ್ಲಿ ಸಂಬಂದಪಟ್ಟ ಈ ಕಛೇರಿಗಳ ಉಸ್ತುವಾರಿ ಮೇಲಾಧಿಕಾರಿಗಳಾದ ಜಂಟಿ ಸಾರಿಗೆ ಆಯುಕ್ತರು ಮತ್ತು ಅಪರ ಸಾರಿಗೆ ಆಯುಕ್ತರುಗಳ ವಿರುದ್ಧ ವಿಚಾರಣೆ ಒಳಪಡಿಸದೆ ಖಜಾನೆಯಲ್ಲಿ ಆದ ದುರಪಯೋಗಕ್ಕೆ ನೇರವಾಗಿ ಕಾರಣರಾದ ಸಂಬಂಧಪಟ್ಟ ಅಧಿಕಾರಿಗಳಾದ ಜಂಟಿ ಸಾರಿಗೆ ಆಯುಕ್ತರು ಮತ್ತು ಅಪರ ಸಾರಿಗೆ ಆಯುಕ್ತರುಗಳ ಮೇಲೆ ಸರ್ಕಾರದ ರಾಜಸ್ವದ ಸಂಗ್ರಹಣಾ ಹಿತದೃಷ್ಟಿಯಿಂದ ಕ್ರಮಕೈಗೊಂಡಿಲ್ಲದಿರುವುದು ನಿಜವೆ; (ಯಾವ ಕಾಲಮಿತಿಯಲ್ಲಿ ಕ್ರಮಕೈಗೊಳ್ಳಲಾಗುವುದು ಪೂರ್ಣ ವಿವರ ನೀಡುವುದು) | ಸಾರಿಗೆ ಇಲಾಖೆಯ ಗೋಕಾಕ್ / ಬಂಟ್ವಾಳ / ಕೆ. ಅರ್. ಪುರಂ ಕಛೇರಿಯ ಹಣ ದುರುಪಯೋಗ ಪ್ರಕರಣಗಳಲ್ಲಿ ಸಲ್ಲಿಸಲಾಗಿರುವ ವಿಚಾರಣ ವರದಿಯಲ್ಲಿ ಪ್ರಸ್ತಾಪಿಸಲಾಗಿರುವ ಹಾಗೂ ಸಂಬಂಧಪಟ್ಟ ಅಧಿಕಾರಿ / ನೌಕರರುಗಳ ವಿರುದ್ಧ ನಿಯಮಾನುಸಾರ ಪರಿಶೀಲಿಸಿ ವಿಚಾರಣೆ ಒಳಪಡಿಸಿ ನಂತರ ಕಾನೂನು ರೀತ್ಯ ಸೂಕ್ತ ಕ್ರಮ ಕೈಗೊಳ್ಳಲಾಗುತ್ತದೆ. |

1091

| ಋ) | ಗೋಕಾಕ್ ಕಛೇರಿಯ ಹಣ ದುರುಪಯೋಗ ಪ್ರಕರಣದಲ್ಲಿ ಲೋಕಾಯುಕ್ತ ಸಂಸ್ಥೆಯಿಂದ ಸರ್ಕಾರಕ್ಕೆ ಸಲ್ಲಿಸಿರುವ ಕರ್ನಾಟಕ ಲೋಕಾಯುಕ್ತ ನಿಯಮ 12(1)ರ ವರದಿಯಲ್ಲಿ ಯಾವ ಅಧಿಕಾರಿಯ ವಿರುದ್ಧ ಕ್ರಮಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ; ಕ್ರಮಕೈಗೊಳ್ಳದೇ ಇರಲು ಕಾರಣಗಳೇನು (ಪೂರ್ಣ ವಿವರ ನೀಡುವುದು) | ಲೋಕಾಯುಕ್ತ ಸಂಸ್ಥೆಯಿಂದ ಗೋಕಾಕ್ ಕಛೇರಿಯ 2004 ರಿಂದ 2014 ರ ಅವಧಿಯಲ್ಲಿನ ಹಣ ದುರುಪಯೋಗ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ರ ಕಲಂ 12(1) ರಡಿ ಸರ್ಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ, ಸರ್ಕಾರವು ಈಗಾಗಲೇ ಸದರಿ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಿರುವುದರಿಂದ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3) ರಡಿ ಇಲಾಖಾ ವಿಚಾರಣೆಗೆ ಶಿಫಾರಸ್ಸು ಮಾಡುವುದಿಲ್ಲವೆಂದು ವರದಿಯಲ್ಲಿ ಉಲ್ಲೇಖಿಸಲಾಗಿರುತ್ತದೆ. |
|---|---|---|

ಟಿಡಿ 64 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

# - ಅನುಬಂಧ -

## ಸಾರಿಗೆ ಇಲಾಖೆಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ರಾಜಸ್ವ ದುರುಪಯೋಗ ಪ್ರಕರಣಗಳ ವಿವರ

| ಕ್ರಮ ಸಂಖ್ಯೆ | ಹೆಸರು | ಪದನಾಮ | ಕಛೇರಿಯ ಹೆಸರು | ವರದಿಯಲ್ಲಿ ತಿಳಿಸಿರುವ ಒಟ್ಟು ಹಣ | ಇಲಾಖಾ ವಿಚಾರಣೆ ಮತ್ತು ಕ್ರಿಮಿನಲ್ ಮೊಕ್ಕದಮೆ ವಿವರ |
|---|---|---|---|---|---|
| 1 | 2 | 3 | 5 | 6 | 7 |
| 1 | ಶ್ರೀ ಎಲ್.ಲಿಂಗರಾಜು | ಪ್ರಾಸಾಅ | ಕೆ.ಆರ್‌ಪುರಂ ಕಛೇರಿ | ರೂ. 8,95,539/- | ವಿಚಾರಣಾಧಿಕಾರಿಗಳು ಸಲ್ಲಿಸಿರುವ ಅಂತಿಮ ವರದಿಯ ಮೇರೆಗೆ ಸಂಬಂಧಪಟ್ಟ ಅಧಿಕಾರಿ/ ನೌಕರರುಗಳಿಗೆ ಸರ್ಕಾರದ ವತಿಯಿಂದ ಎರಡನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿದೆ. |
| | ಶ್ರೀ ಶ್ರೀಧರ್ | ಸ.ಪ್ರಾ.ಸಾ.ಅ | | | |
| | ಶ್ರೀ ಶಾಂತಕುಮಾರ್ | ಸ.ಪ್ರಾ.ಸಾ.ಅ | | | |
| | ಶ್ರೀ ಎಲ್.ಕೆ. ಕೃಷ್ಣಮೂರ್ತಿ | ಅಧೀಕ್ಷಕರು | | | |
| | ಶ್ರೀಮತಿ ಧ್ರುವಕುಮಾರಿ | ಅಧೀಕ್ಷಕರು | | | |
| | ಶ್ರೀ ಶ್ರೀಕಂಠಪ್ರಸಾದ್ | ಅಧೀಕ್ಷಕರು | | | |
| | ಶ್ರೀ ಸಿದ್ದರಾಮಯ್ಯ | ಅಧೀಕ್ಷಕರು | | | |
| | ಶ್ರೀಮತಿ ಡಿ.ಆರ್. ಲೀಲಾ | ಲೆಕ್ಕಪರಿಶೋಧಕಿ | | | |
| | ಶ್ರೀ ಪರಮೇಶ್ | ಲೆಕ್ಕಪರಿಶೋಧಕ | | | |
| | ಶ್ರೀ ಕೆ.ಸೋಮೇಶ್ | ದ್ವಿ.ದ.ಸ | | | |
| | ಶ್ರೀ ಕೆ. ಕಿರಣ್ ಕುಮಾರ್ | ದ್ವಿ.ದ.ಸ | | | |
| 2 | ಶ್ರೀ ವಿ.ಆರ್. ಶಂಭುಲಿಂಗ | ಪ್ರಾ.ಸಾ.ಅ (ನಿವೃತ್ತ) | ಸ.ಪ್ರಾ.ಸಾ.ಕ ಗೋಕಾಕ್ ಕಛೇರಿ | ರೂ. 4,84,32,809/- | ಸರ್ಕಾರದ ವತಿಯಿಂದ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿದೆ. ಮತ್ತು ಕೆಲವು ಅಧಿಕಾರಿ / ನೌಕರರುಗಳ ವಿರುದ್ಧ ಕ್ರಿಮಿನಲ್ ಮೊಕ್ಕದಮೆ ದಾಖಲಿಸಲಾಗಿದೆ. |
| | ಶ್ರೀಮತಿ ಶ್ರೀದೇವಿ ಆರ್. ಗಲಗಲಿ | ಪ್ರಾ.ಸಾ.ಅ (ನಿವೃತ್ತ) | | | |
| | ಶ್ರೀ ಆರ್.ಎಲ್. ಸಂಗಮ | ಸ.ಪ್ರಾ.ಸಾ.ಅ (ನಿವೃತ್ತ) | | | |
| | ಶ್ರೀ ಜೆ.ಎಂ ಶೇಖಜೀ | ಸ.ಪ್ರಾ.ಸಾ.ಅ (ನಿವೃತ್ತ) | | | |
| | ಶ್ರೀ ಆರ್.ಡಿ.ಮುದರೆಡ್ಡಿ | ಅಧೀಕ್ಷಕರು (ನಿವೃತ್ತ) | | | |
| | ಶ್ರೀ ಎ.ಎಸ್. ಜಕಾತಿ | ಅಧೀಕ್ಷಕರು (ನಿವೃತ್ತ) | | | |
| | ಶ್ರೀ ನಾಗಶೆಟ್ಟಿ | ಲೆಕ್ಕಾಧೀಕ್ಷಕರು | | | |
| | ಶ್ರೀ ಬಿ ಬಾಸ್ಕರ್ | ಲೆಕ್ಕಾಧೀಕ್ಷಕರು | | | |
| | ಶ್ರೀ ಎಂ.ಬಿ. ಪಾಟೀಲ್ | ಪ್ರ.ದ.ಸ. (ನಿವೃತ್ತ) | | | |
| | ಶ್ರೀ ಜಿ.ಜಿ. ಹವಾಲ್ದಾರ್ | ಪ್ರ.ದ.ಸ. | | | |
| | ಶ್ರೀ ಎಂ.ಎಸ್. ರವಿಕುಮಾರ್ | ಲೆಕ್ಕಸಹಾಯಕರು | | | |
| | ಶ್ರೀ ವಿ ಸರ್ವೇಶ್ | ಲೆಕ್ಕಪರಿಶೋಧಕರು | | | |
| | ಶ್ರೀ ಕೆ ವೇಂಕಟೇಶ್ | ಲೆಕ್ಕಪರಿಶೋಧಕರು | | | |
| | ಶ್ರೀ ಗಂಗನರಸಯ್ಯ | ಲೆಕ್ಕಪರಿಶೋಧಕರು | | | |
| | ಶ್ರೀ ಡಿ. ಸುನೀಲ್ | ಲೆಕ್ಕಪರಿಶೋಧಕರು | | | |
| | ಶ್ರೀ ಇರ್ವಿನ್ ಡಿ ಸೋಜ್ | ಲೆಕ್ಕಪರಿಶೋಧಕರು | | | |
| | ಶ್ರೀ ಎಸ್.ಎಂ. ಖಾಜಿ | ದ್ವಿ.ದ.ಸ | | | |
| | ಶ್ರೀ ರವಿ ಎಂ.ಮಾದರ್ | ದ್ವಿ.ದ.ಸ | | | |
| | ಶ್ರೀ ಗಿರೀಶ್ ಎಲ್ ಗಣೂರು | ದ್ವಿ.ದ.ಸ | | | |
| | ಶ್ರೀ ಎಮ್.ಎಸ್.ವಿನು | ದ್ವಿ.ದ.ಸ | | | |
| | ಶ್ರೀ ಜಿ. ವಿನೋದಾ | ಅಧೀಕ್ಷಕರು | | | |
| | ಶ್ರೀ ಸಿ. ದೇವರಾಜು | ಪ್ರ.ದ.ಸ. | | | |
| 3 | ಶ್ರೀ ಜಿ.ಎಸ್ ಹೆಗಡೆ | ಸ.ಪ್ರಾ.ಸಾ.ಅ (ಪ್ರಸ್ತುತ ಪ್ರಾಸಾಅ) | ಸ.ಪ್ರಾ.ಸಾ.ಕ ಬಂಟ್ವಾಳ ಕಛೇರಿ | ರೂ. 1,02,12,731/- | ಈ ಸಂಬಂಧ ಸಲ್ಲಿಸಲಾಗಿರುವ ವರದಿಯು ಪರಿಶೀಲನೆಯಲ್ಲಿರುತ್ತದೆ. |
| | ಶ್ರೀ ಕೆ.ಚರಣ್ | ಹಿ.ಮೋ.ವಾ.ನಿ | | | |
| | ಶ್ರೀ ಬಿ.ಕೆ.ಸತೀಶ್ | ಅಧೀಕ್ಷಕರು (ನಿಧನ) | | | |
| | ಶ್ರೀ ಶಿವಸಿದ್ದೇಶ್ವರ | ಅಧೀಕ್ಷಕರು | | | |
| | ಶ್ರೀ ಸಚಿನ್ ತಳೇಕರ್ | ಪ್ರ.ದ.ಸ | | | |
| | ಶ್ರೀಮತಿ ಗಾಯಿತ್ರಿ ಬಿ. ಶೆಣೈ | ಬೆರಳಚ್ಚುಗಾರರು | | | |

| 4 | ಶ್ರೀ ಶಿವರುದ್ರಯ್ಯ | ಸಹಾಯಕ ಕಾರ್ಯದರ್ಶಿಗಳು (ನಿವೃತ್ತ) | ಸಾರಿಗೆ ಆಯುಕ್ತರ ಕಛೇರಿ | ರೂ. 7,02,985/- | ಈ ಸಂಬಂಧ ಸಲ್ಲಿಸಲಾಗಿರುವ ವರದಿಯಲ್ಲಿ ಹೆಸರಿಸಲಾಗಿರುವ ಅಧಿಕಾರಿ ನೌಕರರುಗಳಿಗೆ ಜ್ಞಾಪನ ನೀಡಲಾಗಿದೆ. |
|---|---|---|---|---|---|
| | ಶ್ರೀ ಡಿ.ಎಸ್. ದೊಡ್ಡಯ್ಯ | ಸಹಾಯಕ ಕಾರ್ಯದರ್ಶಿಗಳು (ನಿವೃತ್ತ) | | | |
| | ಶ್ರೀ ಎಂ. ವಿ. ವೆಂಕಟಾಚಲಯ್ಯ | ಸಹಾಯಕ ಕಾರ್ಯದರ್ಶಿಗಳು (ನಿವೃತ್ತ) | | | |
| | ಶ್ರೀ ಹೆಚ್. ಪಿ. ಬಾಲಕೃಷ್ಣಯ್ಯ | ಸಹಾಯಕ ಕಾರ್ಯದರ್ಶಿಗಳು (ನಿವೃತ್ತ) | | | |
| | ಶ್ರೀ ಎನ್. ಎಸ್. ಪ್ರಕಾಶ್ | ಸಹಾಯಕ ಕಾರ್ಯದರ್ಶಿಗಳು (ಪ್ರಸ್ತುತ ಪ್ರಾ.ಸಾ.ಅ) | | | |
| | ಶ್ರೀ ಬಿ. ಎಂ. ಜಗದೀಶ್ | ಸಹಾಯಕ ಕಾರ್ಯದರ್ಶಿಗಳು (ನಿವೃತ್ತ) | | | |
| | ಶ್ರೀ ಹೆಚ್. ಸಿ. ಹನುಮಂತಪ್ಪ | ಸಹಾಯಕ ಕಾರ್ಯದರ್ಶಿಗಳು | | | |
| | ಶ್ರೀ ಎಂ. ಶ್ರೀನಿವಾಸ | ಅಧೀಕ್ಷಕರು (ನಿವೃತ್ತ) | | | |
| | ಶ್ರೀ ರಾಜಶೇಖರ್ | ಅಧೀಕ್ಷಕರು | | | |
| | ಶ್ರೀ ಜಿ. ಪಿ. ಎಂಕಟೇಶ್ | ಅಧೀಕ್ಷಕರು (ನಿವೃತ್ತ) | | | |
| | ಶ್ರೀ ಯೋಗೇಂದ್ರ | ದ್ವಿ.ದ.ಸ (ಪ್ರಸ್ತುತ ಪ್ರ.ದ.ಸ.) | | | |
| | ಶ್ರೀ ಸೆಲ್ವನಾಥನ್ | ದ್ವಿ.ದ.ಸ (ನಿವೃತ್ತ) | | | |
| | ಶ್ರೀ ಕೆ.ಜೆ. ಮಂಜುನಾಥ | ದ್ವಿ.ದ.ಸ | | | |
| | ಶ್ರೀ ಟಿ. ತಿಮ್ಮಯ್ಯ | ದ್ವಿ.ದ.ಸ (ನಿವೃತ್ತ) | | | |
| | ಶ್ರೀ ಅದರ್ಶ | ದ್ವಿ.ದ.ಸ | | | |
| | ಶ್ರೀ ಎಸ್. ಚೇತನ್ | ದ್ವಿ.ದ.ಸ | | | |
| | ಶ್ರೀ ಪ್ರಮೋದ್ ರಾಜೇಂದ್ರ | ದ್ವಿ.ದ.ಸ | | | |
| | ಶ್ರೀ ರಚತ್ ರಾಜ್ | ದ್ವಿ.ದ.ಸ | | | |
| 5 | ಶ್ರೀ ಎ. ಬಿ. ಯೋಮಕೇಶಪ್ಪ | ಸ.ಪ್ರಾಸಾ.ಅ. (ಪ್ರಸ್ತುತ ಪ್ರಾ.ಸಾ.ಅ) | ಕೆ.ಜಿ.ಎಫ್. ಕಛೇರಿ | ರೂ. 1,40,120/- | ಈ ಸಂಬಂಧ ಸಲ್ಲಿಸಲಾಗಿರುವ ವರದಿಯು ಪರಿಶೀಲನೆಯಲ್ಲಿರುತ್ತದೆ |
| | ಶ್ರೀ ಮಹಮೂದ್ ಸಾಜಿದ್ ಮಹಮ್ಮದ್ | ಅಧೀಕ್ಷಕರು | | | |
| | ಶ್ರೀ ಕೆ. ವಿ. ಪ್ರಸನ್ನ ಕುಮಾರ್ | ಪ್ರ.ದ.ಸ. (ನಿವೃತ್ತ) | | | |
| | ಶ್ರೀ ಕೆ. ಅನಂದ ಕುಮಾರ್ | ಪ್ರ.ದ.ಸ. | | | |
| | ಶ್ರೀ ಸಿ. ಗುರುಪ್ರಸಾದ್ | ಪ್ರ.ದ.ಸ. | | | |
| | ಶ್ರೀ ಕೆ. ಸೋಮಶ್ | ದ್ವಿ.ದ.ಸ | | | |
| | ಶ್ರೀ ಎಸ್. ಮುರಳೀಧರ | ದ್ವಿ.ದ.ಸ | | | |
| 6 | ಶ್ರೀಮತಿ ಭಾರತಿ ಎಸ್ ಗಾಣದಾಳ | ಗ್ರೂಪ್ ಡಿ | ಪ್ರಾಸಾಅ ದಾರವಾಡ (ಪಶ್ಚಿಮ) | ರೂ. 3,58,280/- | ಇಲಾಖಾ ವಿಚಾರಣೆ ಹಂತದಲ್ಲಿರುತ್ತದೆ. |

ಆಯುಕ್ತರು,
ಸಾರಿಗೆ ಮತ್ತು ರಸ್ತೆ ಸುರಕ್ಷತೆ,
ಬೆಂಗಳೂರು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1100

ಸದಸ್ಯರ ಹೆಸರು : ಶ್ರೀ ಮಂಜುನಾಥ್ ಎ.

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಸಾರಿಗೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಮೋಟಾರು ವಾಹನ ನಿರೀಕ್ಷಕರು ಮತ್ತು ಹಿರಿಯ ಮೋಟಾರು ವಾಹನ ನಿರೀಕ್ಷಕರ ಸಂಖ್ಯೆ ಎಷ್ಟು; | ಸಾರಿಗೆ ಇಲಾಖೆಯಲ್ಲಿ 118 ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳು ಹಾಗೂ 123 ಮೋಟಾರು ವಾಹನ ನಿರೀಕ್ಷಕರುಗಳು ಕಾರ್ಯನಿರ್ವಹಿಸುತ್ತಿದ್ದಾರೆ. |
| (ಆ) | ಸಾರಿಗೆ ಇಲಾಖೆಯಲ್ಲಿ ಚೆಕ್‌ಪೋಸ್ಟ್ ಮತ್ತು ರಸ್ತೆ ಬದಿ ವಾಹನಗಳನ್ನು ಚೆಕ್ ಮಾಡುವಾಗ ಮಾನ್ಯ ಲೋಕಾಯುಕ್ತರು ಮತ್ತು ಎ.ಸಿ.ಬಿ ಯಿಂದ ಟ್ರಾಪ್ ಮತ್ತು ರೈಡ್ ಆದ ಮೋಟಾರು ವಾಹನ ನಿರೀಕ್ಷಕರು ಮತ್ತು ಹಿರಿಯ ಮೋಟಾರು ವಾಹನ ನಿರೀಕ್ಷಕರ ಹೆಸರು, ದಿನಾಂಕ, ಸ್ಥಳ, ದೊರೆತ ಹೆಚ್ಚುವರಿ ಹಣದ ಬಗ್ಗೆ ಪೂರ್ಣ ವಿವರ ನೀಡುವುದು; | ಸಾರಿಗೆ ಇಲಾಖೆಯಲ್ಲಿ ಚೆಕ್‌ಪೋಸ್ಟ್ ಮತ್ತು ರಸ್ತೆ ಬದಿ ವಾಹನಗಳನ್ನು ಚೆಕ್ ಮಾಡುವಾಗ ಮಾನ್ಯ ಲೋಕಾಯುಕ್ತರು ಮತ್ತು ಎ.ಸಿ.ಬಿ ಯಿಂದ ಟ್ರಾಪ್ ಮತ್ತು ರೈಡ್ ಆದ ಮೋಟಾರು ವಾಹನ ನಿರೀಕ್ಷಕರ ಮತ್ತು ಹಿರಿಯ ಮೋಟಾರು ವಾಹನ ನಿರೀಕ್ಷಕರ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಇ) | ಸಾರಿಗೆ ಇಲಾಖೆಯಲ್ಲಿ ಲೋಕಾಯುಕ್ತ ಟ್ರಾಪ್, ರೈಡ್ ಮತ್ತು ಇತರೆ ಪ್ರಕರಣಗಳಲ್ಲಿ ಇಲಾಖಾ ವಿಚಾರಣೆ ನಡೆಸಲು ಲೋಕಾಯುಕ್ತ ಸಂಸ್ಥೆಗೆ ವಹಿಸದೇ ಪ್ರಸ್ತುತ ಬಾಕಿ ಇರುವ ಎಲ್ಲಾ ಪ್ರಕರಣಗಳ ಪೂರ್ಣ ವಿವರ ನೀಡುವುದು; | ಮಾನ್ಯ ಉಪ ಲೋಕಾಯುಕ್ತರಿಂದ ಸ್ವೀಕೃತವಾದ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ರ ಕಲಂ 12(3) ರಡಿ ಸಂಖ್ಯೆ: Compt/Uplok/BGM/1650/2019DRE-1, ದಿನಾಂಕ:06-12-2019 ರಲ್ಲಿ ಸ್ವೀಕೃತವಾದ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿ ಬಾಕಿ ಇರುತ್ತದೆ. |
| (ಈ) | ಇಲಾಖೆಯಲ್ಲಿ ಭ್ರಷ್ಟಾಚಾರ ತಡೆಯುವ ನಿಟ್ಟಿನಲ್ಲಿ ಕರ್ನಾಟಕ ಲೋಕಾಯುಕ್ತ ಕಾಯ್ದೆ 12(1) ಮತ್ತು 12(3) ರ ಎಲ್ಲಾ ಪ್ರಕರಣಗಳ ವಿಚಾರಣೆಯನ್ನು ಲೋಕಾಯುಕ್ತ ಸಂಸ್ಥೆಗೆ ವಹಿಸದೇ ಇರಲು ಕಾರಣಗಳೇನು (ವಿವರ ನೀಡುವುದು); | |
| (ಉ) | ಸದರಿ ಇಲಾಖೆಯಲ್ಲಿ ಚೆಕ್‌ಪೋಸ್ಟ್ ಮತ್ತು ರಸ್ತೆ ಬದಿ ತನಿಖೆ ಮಾಡುವ ಸಮಯದಲ್ಲಿ ಲೋಕಾಯುಕ್ತ/ಎ.ಸಿ.ಬಿ ಯಿಂದ ಟ್ರಾಪ್ ಮತ್ತು ರೈಡ್ ಅದ ಮೋಟಾರು ವಾಹನ ನಿರೀಕ್ಷಕರು ಮತ್ತು ಹಿರಿಯ ಮೋಟಾರು ವಾಹನ ನಿರೀಕ್ಷಕರನ್ನು ವಿಚಾರಣೆ ಮುಗಿಯುವ ಮುನ್ನವೆ ಪುನ: ಚೆಕ್‌ಪೋಸ್ಟ್ ಮತ್ತು ರೋಡ್ ಚೆಕ್‌ಗೆ ನಿಯೋಜಿಸಲು ಕಾರಣಗಳೇನು; ಇದನ್ನು ತಡೆಗಟ್ಟಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಲೋಕಾಯುಕ್ತ / ಎ.ಸಿ.ಬಿ ಯಿಂದ ದಾಖಲಾದ ಪ್ರಕರಣಗಳಲ್ಲಿ ಸಂಬಂಧಪಟ್ಟ ಹಿ.ಮೋ.ವಾ.ನಿ/ ಮೋ.ವಾ.ನಿ ರನ್ನು ಅಮಾನತ್ತುಗೊಳಿಸಿ ಹುದ್ದೆಯ ಲೀನ್‌ನ್ನು ಸ್ಥಳಾಂತರಿಸುವಂತೆ ಶಿಫಾರಸ್ಸು ಮಾಡಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಶಿಫಾರಸ್ಸು ಮಾಡಿರುವಂತೆ ಕ್ರಮಕ್ಕೈಗೊಳ್ಳಲಾಗುತ್ತದೆ.<br>ಮುಂದುವರೆದು, ಲೋಕಾಯುಕ್ತ / ಎ.ಸಿ.ಬಿ ಯಿಂದ ಟ್ರಾಪ್ ಮತ್ತು ರೈಡ್ ಆದ ಹಿ.ಮೋ.ವಾ.ನಿ / ಮೋ.ವಾ.ನಿ ಗಳು ಸೇವೆಗೆ ಪುನರ್ ನೇಮಕಗೊಂಡ ನಂತರ ಆಡಳಿತಾತ್ಮಕ, ಸಾರ್ವಜನಿಕ ಮತ್ತು ರಾಜಸ್ವ ಹಿತದೃಷ್ಟಿಯಿಂದ ಅವರುಗಳನ್ನು ತನಿಖಾ ಠಾಣೆಯ ಹಾಗೂ ವಾಹನಗಳ ತಪಾಸಣೆ ಕಾರ್ಯಗಳಿಗೆ ನೇಮಿಸಲಾಗುತ್ತದೆ. |

| | | |
|---|---|---|
| (ಊ) | ಸಾರಿಗೆ ಇಲಾಖೆಯಲ್ಲಿ ಲೋಕಾಯುಕ್ತ/ಎ.ಸಿ.ಬಿ ಯಿಂದ ಟ್ರ್ಯಾಪ್ ಮತ್ತು ರೈಡ್ ಆದ ಅಧಿಕಾರಿ/ನೌಕರರನ್ನು ಪ್ರವರ್ತನ ಮತ್ತು ಎಕ್ಸಿಕ್ಯೂಟೀವ್ ಹುದ್ದೆಗಳನ್ನು ಹೊರತುಪಡಿಸಿ ಕಛೇರಿ ಹುದ್ದೆಗಳಾದ ನಾನ್-ಎಕ್ಸಿಕ್ಯೂಟೀವ್ ಹುದ್ದೆಗಳಿಗೆ ನೇಮಿಸುತ್ತಿಲ್ಲದಿರುವುದಕ್ಕೆ ಕಾರಣಗಳೊಂದಿಗೆ ಪೂರ್ಣ ವಿವರ ನೀಡುವುದು; | ಸಾರಿಗೆ ಇಲಾಖೆಯಲ್ಲಿ ಎಕ್ಸಿಕ್ಯೂಟೀವ್ ಹುದ್ದೆ ಮಾತ್ರ ಇರುವುದರಿಂದ ಅವರುಗಳಿಗೆ ಅದರಂತೆ ಕಾರ್ಯಗಳನ್ನು ನಿರ್ವಹಿಸಲು ನೇಮಿಸಲಾಗುತ್ತದೆ. |
| (ಋ) | ಸಾರಿಗೆ ಇಲಾಖೆಯ ಚೆಕ್‌ಪೋಸ್ಟ್ ಮತ್ತು ರೋಡ್ ಚೆಕ್‌ಗಳಲ್ಲಿ ಲೋಕಾಯುಕ್ತ/ಎ.ಸಿ.ಬಿ ಟ್ರ್ಯಾಪ್ ಮತ್ತು ರೈಡ್ ಆದಾಗ ಇವುಗಳ ಮೇಲುಸ್ತುವಾರಿ ನಡೆಸುವ ಅಪರ ಜಂಟಿ ಸಾರಿಗೆ ಆಯುಕ್ತರುಗಳನ್ನು ಇಲಾಖಾ ವಿಚಾರಣೆಯಲ್ಲಿ ಸೇರಿಸಿಲ್ಲದಿರುವುದು ನಿಜವೇ; ಇವರುಗಳ ವಿರುದ್ಧ ಇಲಾಖೆಯಿಂದ ಯಾವುದೇ ಕ್ರಮಕೈಗೊಳ್ಳದೇ ಇರಲು ಕಾರಣಗಳೇನು (ಪೂರ್ಣ ವಿವರ ನೀಡುವುದು) | ಲೋಕಾಯುಕ್ತ ಸಂಸ್ಥೆಯಿಂದ ದಾಖಲಾದ ಟ್ರಾಪ್ / ರೈಡ್ / ಇತರೆ ಪ್ರಕರಣಗಳಲ್ಲಿ ಲೋಕಾಯುಕ್ತರವರು ಸಲ್ಲಿಸಲಾಗುವ ವರದಿಯಲ್ಲಿ ಶಿಫಾರಸ್ಸು ಮಾಡಲಾಗುವ ಇಲಾಖೆಯ ಅಧಿಕಾರಿ / ನೌಕರರುಗಳ ವಿರುದ್ಧ ನಿಯಮಾನುಸಾರ ಸೂಕ್ತ ಕ್ರಮ ಕೈಗೊಳ್ಳಲಾಗುತ್ತದೆ. |

ಟಿಡಿ 65 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1106

ಸದಸ್ಯರ ಹೆಸರು : ಶ್ರೀ ನಾಗನಗೌಡ ಕಂದ್‌ಕೂರ್

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 23-09-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಸಾರಿಗೆ ಇಲಾಖೆಯು ಅತ್ಯಗತ್ಯ ಸೇವಾ ಇಲಾಖೆಗಳ ಪಟ್ಟಿಯಲ್ಲಿದೆಯೇ; (ವಿವರ ನೀಡುವುದು) | ಹೌದು, ಸಾರಿಗೆ ಇಲಾಖೆಯು ಅತ್ಯಗತ್ಯ ಸೇವಾ ಪಟ್ಟಿಯಲ್ಲಿ ಇರುತ್ತದೆ. |
| (ಆ) | ಸಾರಿಗೆ ಇಲಾಖೆಯ ಅಧಿಕಾರಿ / ನೌಕರರು ತಮ್ಮ ಅಧಿಕೃತ ಲೀನ್ ಇರುವ ಕೇಂದ್ರ ಸ್ಥಾನದಲ್ಲಿ ಇರಬೇಕೇ; ಇಲ್ಲವಾದಲ್ಲಿ ಕಾರಣವೇನು; (ಪೂರ್ಣ ವಿವರ ನೀಡುವುದು | ಹೌದು, ಸಾರಿಗೆ ಇಲಾಖೆಯ ಅಧಿಕಾರಿ / ನೌಕರರುಗಳು ತಮ್ಮ ಅಧಿಕೃತ ಲೀನ್ ಇರುವ ಕೇಂದ್ರ ಸ್ಥಾನದಲ್ಲಿ ಇರಬೇಕು.<br>ಸಾರಿಗೆ ಇಲಾಖೆಯು ಪ್ರಸ್ತುತ ಅಧಿಕಾರಿ / ಸಿಬ್ಬಂದಿಯ ತೀವ್ರತರ ಕೊರತೆ ಎದುರುಸುತ್ತಿರುವ ಹಿನ್ನೆಲೆಯಲ್ಲಿ ಆಡಳಿತಾತ್ಮಕ, ಸಾರ್ವಜನಿಕ ಮತ್ತು ಸರ್ಕಾರವು ನಿಗದಿಪಡಿಸುವ ರಾಜಸ್ವ ಸಂಗ್ರಹಣೆ ಹಿತದೃಷ್ಟಿಯಿಂದ ಅಧಿಕಾರಿ / ಸಿಬ್ಬಂದಿಗಳನ್ನು ಅವಶ್ಯವಿರುವ ಕಛೇರಿಗಳಲ್ಲಿ ಕೆಲಸ ನಿರ್ವಹಿಸಲು ಕಾರ್ಯನಿರ್ವಹಣಾ ವ್ಯವಸ್ಥೆ ಮಾಡಲಾಗುತ್ತಿದೆ. |
| (ಇ) | ಸಾರಿಗೆ ಇಲಾಖೆಯು ಅಧಿಕಾರಿ / ನೌಕರರು ಕೇಂದ್ರಸ್ಥಾನ ಬಿಡಲು ಸಂಬಂಧಪಟ್ಟ ಮೇಲಾಧಿಕಾರಿಗಳಿಂದ ಲಿಖಿತವಾಗಿ ಅನುಮತಿ ಪಡೆಯುತ್ತಿದ್ದಾರೆಯೇ; ಇದ್ದಲ್ಲಿ ವಿವರ ನೀಡುವುದು, ಇಲ್ಲವಾದಲ್ಲಿ ಕಾರಣಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯ ಅಧಿಕಾರಿ / ನೌಕರರುಗಳು ಕೇಂದ್ರ ಸ್ಥಾನ ಬಿಡಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 107 ರ ಪ್ರಕಾರ ಸಂಬಂಧಪಟ್ಟ ಮೇಲಾಧಿಕಾರಿಗಳಿಂದ ಲಿಖಿತವಾಗಿ ಅನುಮತಿ ಪಡೆಯುತ್ತಿದ್ದಾರೆ. |
| (ಈ) | ಸಾರಿಗೆ ಇಲಾಖೆಯಲ್ಲಿ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡುವ ಅಧಿಕಾರಿ / ನೌಕರರ ವಿರುದ್ಧ ಸಿ.ಸಿ.ಎ ನಿಯಮಾವಳಿಗಳ ಪ್ರಕಾರ ಕ್ರಮಕೈಗೊಳ್ಳಲಗುತ್ತಿದೆಯೇ ಇದ್ದಲ್ಲಿ ವಿವರ ನೀಡುವುದು ಇಲ್ಲವಾದಲ್ಲಿ ಕಾರಣಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯ ಅಧಿಕಾರಿ / ನೌಕರರುಗಳು ಕಐಂದ್ರ ಸ್ಥಾನ ಬಿಡಲು ಸಂಬಂಧಪಟ್ಟ ಮೇಲಾಧಿಕಾರಿಗಳಿಂದ ಲಿಖಿತವಾಗಿ ಅನುಮತಿ ಪಡೆಯುತ್ತಿದ್ದಾರೆ. ಅನುಮತಿ ಪಡೆಯದೇ ಇರುವ ಕುರಿತಂತೆ ಪ್ರಕರಣಗಳು ವರದಿಯಾದಲ್ಲಿ ಆ ಸಂಬಂಧ ನಿಯಮಾನುಸಾರ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |
| (ಉ) | ಸಾರಿಗೆ ಇಲಾಖೆಯಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ವೃಂದದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಸಂಖ್ಯೆ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯಲ್ಲಿ 103 ಮಂಜೂರಾದ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಗಳಿದ್ದು ಆ ಪೈಕಿ ಒಬ್ಬರು (1) ಕಾರ್ಯನಿರ್ವಹಿಸುತ್ತಿದ್ದಾರೆ. |

| | | |
|---|---|---|
| (ಊ) | ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ವೃಂದದ ಖಾಲಿ ಹುದ್ದೆಗಳನ್ನು ಮುಂಬಡ್ತಿ ನೀಡಿ ತುಂಬದೇ ಇರಲು ಕಾರಣಗಳೇನು ಯಾವ ಕಾಲಮಿತಿಯಲ್ಲಿ ಮುಂಬಡ್ತಿ ನೀಡಿ ಭರ್ತಿ ಮಾಡಲಾಗುವುದು; (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಯಿಂದ ಶೇಕಡ 90 ಮತ್ತು ಲಿಪಿಕ ವರ್ಗದಿಂದ ಶೇಕಡ 10 ರ ಅನುಪಾತದಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಗಳನ್ನು ಮುಂಬಡ್ತಿ ಮೂಲಕ ತುಂಬಲಾಗುವುದು.<br><br>ಪೋಷಕ ವೃಂದವಾದ ಮೋಟಾರು ವಾಹನ ನಿರೀಕ್ಷಕರ 150 ಖಾಲಿ ಹುದ್ದೆಗಳ ನೇರ ನೇಮಕಾತಿ ಕುರಿತಂತೆ ಕರ್ನಾಟಕ ಲೋಕಸೇವಾ ಆಯೋಗವು ಅಧಿಸೂಚನೆ ಸಂಖ್ಯೆ: ಆರ್(2)609/19-20/ಪಿಎಸ್‌ಸಿ, ದಿನಾಂಕ:04-07-2019 ರಲ್ಲಿ ಒಟ್ಟು 129 ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ್ದು, ಆ ಸಂಬಂಧ ನ್ಯಾಯಾಲಯಗಳಲ್ಲಿ ಪ್ರಕರಣಗಳು ವಿಚಾರಣಾ ಬಾಕಿ ಇರುತ್ತವೆ. ಸದರಿ ನೇಮಕಾತಿ ಕುರಿತಂತೆ ಇಲಾಖೆಯು ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆಯ ನಿರೀಕ್ಷಣೆಯಲ್ಲಿರುತ್ತದೆ.<br><br>ಪ್ರಸ್ತುತ ಇಲಾಖೆಯಲ್ಲಿ 214 ಮಂಜೂರಾದ ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳ ಪೈಕಿ 118 ಮಾತ್ರ ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ 430 ಮಂಜೂರಾದ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳ ಪೈಕಿ 123 ಮಾತ್ರ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಹಂತದಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಹುದ್ದೆಗೆ ಮುಂಬಡ್ತಿ ನೀಡಿದಲ್ಲಿ ಸಾರ್ವಜನಿಕರ ದೈನಂದಿನ ಕೆಲಸಗಳಿಗೆ, ಪ್ರವರ್ತನ ಕಾರ್ಯ ಚುರುಕುಗೊಳಿಸುವಲ್ಲಿ ಹಾಗೂ ಸರ್ಕಾರವು ನಿಗದಿಪಡಿಸಿರುವ ರಾಜಸ್ವ ಸಂಗ್ರಹಿಸುವಲ್ಲಿ ತೀವ್ರತರ ಅಡಚಣೆ ಉಂಟಾಗುತ್ತದೆ.<br><br>ಆದಾಗ್ಯೂ ಅವಶ್ಯವಿರುವ ಕಛೇರಿಗಳಲ್ಲಿ ಖಾಲಿ ಇರುವ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಹುದ್ದೆಗಳಿಗೆ ಆಡಳಿತಾತ್ಮಕ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಭಾರ / ಹೆಚ್ಚುವರಿ ಪ್ರಭಾರದಲ್ಲಿ ಕೆಲಸ ನಿರ್ವಹಿಸಲು ವ್ಯವಸ್ಥೆಯನ್ನು ಮಾಡಲಾಗುತ್ತಿದೆ.<br><br>ಸದರಿ ಖಾಲಿ ಹುದ್ದೆಗಳನ್ನು ಮುಂದಿನ ದಿನಗಳಲ್ಲಿ ಮುಂಬಡ್ತಿ ಮೂಲಕ ತುಂಬಲಾಗುವುದು. |
| (ಋ) | ಸಾರಿಗೆ ಇಲಾಖೆಯಲ್ಲಿ ನೇಮಕಾತಿ ನಿರೀಕ್ಷಣೆಯಲ್ಲಿರುವ RTO/JCT/ACT ಗಳ ಸಂಖ್ಯೆ ಎಷ್ಟು RTO/JCT/ACT ವೃಂದಗಳಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯಲ್ಲಿ ಒಬ್ಬರು ಜಂಟಿ ಸಾರಿಗೆ ಆಯುಕ್ತರು ಹಾಗೂ ಒಬ್ಬರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸ್ಥಳ ನಿರೀಕ್ಷಣೆಯಲ್ಲಿರುತ್ತಾರೆ.<br><br>ಪ್ರಸ್ತುತ ಅಪರ ಸಾರಿಗೆ ಆಯುಕ್ತರು ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಯ ತಲಾ ಒಂದು ಹುದ್ದೆ ಖಾಲಿಯಿರುತ್ತದೆ. |
| (ಎ) | ನೇಮಕಾತಿ ನಿರೀಕ್ಷಣೆಯಲ್ಲಿರುವ RTO/JCT/ACT ಗಳ ಖಾಲಿ ಹುದ್ದೆಗಳಿದ್ದರೂ ಸಹ ನೇಮಿಸದೇ ಮನೆಯಲ್ಲಿ ಕೂರಿಸಿ ಸಂಬಳ ನೀಡುತ್ತಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುವುದಿಲ್ಲವೇ; ಇದಕ್ಕೆ ಕಾರಣರಾದವರು ಯಾರು; ನಷ್ಟವಾದ ಮೊತ್ತ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಇತ್ತೀಚಿನ ಅಧಿಕಾರಿಗಳ ಮುಂಬಡ್ತಿ ಮತ್ತು ವರ್ಗಾವಣೆ ಆದೇಶಗಳ ಹಿನ್ನೆಲೆಯಲ್ಲಿ ಅಧಿಕಾರಿಗಳು ಸ್ಥಳ ನಿರೀಕ್ಷಣೆಯಲ್ಲಿರುತ್ತಾರೆ. ಅಧಿಕಾರಿಗಳ ವರ್ಗಾವಣೆ ಮತ್ತು ಮುಂಬಡ್ತಿ ನೀಡಿದ ಸಂದರ್ಭದಲ್ಲಿ ಕೆಲವು ಪ್ರಕರಣಗಳಲ್ಲಿ ಅಧಿಕಾರಿಗಳು ಸ್ಥಳ ನಿರೀಕ್ಷಣೆಯಲ್ಲಿರುವುದು ಅಧಿಕಾರಿಗಳ ವರ್ಗಾವಣೆ ಪ್ರಕ್ರಿಯೆಯ ಸಾಮಾನ್ಯ ಭಾಗವಾಗಿರುತ್ತದೆ. |

1106

| (ಏ) | ಸಾರಿಗೆ ಇಲಾಖೆಯ ಅಧಿಕಾರಿ / ನೌಕರರ ಕರ್ತವ್ಯ ನಿರ್ವಹಣೆಗೆ ಸಾರಿಗೆ ಇಲಾಖೆಯ Manual ಇದೆಯೇ; ಇಲ್ಲದಿದ್ದಲ್ಲಿ ಕಾರಣಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯಲ್ಲಿ Manual ಇರುವುದಿಲ್ಲ. ಸಾರಿಗೆ ಇಲಾಖೆಯ ಅಧಿಕಾರಿ/ನೌಕರರು ಮೋಟಾರು ವಾಹನ ಕಾಯ್ದೆ ಮತ್ತು ನಿಯಮಗಳಲ್ಲಿ ಅವರುಗಳ ಕರ್ತವ್ಯಗಳ ನಿರ್ವಹಣೆ ಬಗ್ಗೆ ಸ್ಪಷ್ಟತೆ ಇರುತ್ತದೆ. ಅಲ್ಲದೆ, ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಸೂಚನೆಗಳ ಪ್ರಕಾರ ಅಧಿಕಾರಿ/ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
|---|---|---|
| (ಐ) | ಸಾರಿಗೆ ಇಲಾಖೆಯ ಸಮಗ್ರ ನಿರ್ವಹಣೆಗೆ ಸಾರಿಗೆ Manual ಸಿದ್ದಪಡಿಸಲಾಗುವುದೇ? (ಸಿದ್ದಪಡಿಸಲು ಕಾಲಮಿತಿ ನೀಡುವುದು, ಇಲ್ಲದಿದ್ದಲ್ಲಿ, ಕಾರಣ ತಿಳಿಸುವುದು)? | ಸಾರಿಗೆ ಇಲಾಖೆಗೆ Manual ಅವಶ್ಯಕತೆ ಇರುವುದಿಲ್ಲ. |

ಟಿಡಿ 62 ಟಿಡಿಕ್ಯೂ 2020

**(ಲಕ್ಷ್ಮಣ ಸಂಗಪ್ಪ ಸವದಿ)**
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1246

ಸದಸ್ಯರ ಹೆಸರು : ಶ್ರೀ ಲಿಂಗೇಶ್ ಕೆ.ಎಸ್. (ಬೇಲೂರು)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 23-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೇಲೂರು ಘಟಕದಲ್ಲಿ ಎಷ್ಟು Scheduleನಲ್ಲಿ ಬಸ್ ಸಂಚಾರ ಇದೆ; ಯಾವುದು; (ಮಾಹಿತಿ ನೀಡುವುದು) | ಬೇಲೂರು ಘಟಕದಿಂದ 38 ಅನುಸೂಚಿಗಳು ಕಾರ್ಯಾಚರಣೆ ಮಾಡಲಾಗುತ್ತಿದೆ. ವಿವರಗಳನ್ನು **"ಅನುಬಂಧ-ಅ"**ರಲ್ಲಿರಿಸಿದೆ. ಪ್ರಸ್ತುತ ಕೋವಿಡ್-19 ಕಾರಣದಿಂದಾಗಿ ವಿರಳ ಜನಸಂದಣಿ ಮತ್ತು ಕಡಿಮೆ ಬೇಡಿಕೆ ಇರುವ ಕಾರಣ 25 ಅನುಸೂಚಿಗಳು ಕಾರ್ಯಚರಣೆಯಲ್ಲಿರುತ್ತವೆ. ವಿವರಗಳನ್ನು **"ಅನುಬಂಧ-ಆ"**ರಲ್ಲಿರಿಸಿದೆ. |
| ಆ. | ಬೇಲೂರಿನ ಗ್ರಾಮಾಂತರ ಭಾಗಗಳಿಗೆ ವ್ಯವಸ್ಥಿತವಾಗಿ ಬಸ್ ಸಾರಿಗೆ ಸಂಪರ್ಕವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2011ನೇ ಜನಗಣತಿ ಪ್ರಕಾರ ಬೇಲೂರು ತಾಲ್ಲೂಕಿನಲ್ಲಿ 382 ಗ್ರಾಮಗಳು ಇದ್ದು, 382 ಗ್ರಾಮಗಳಿಗೂ ನಿಗಮದ ವತಿಯಿಂದ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ. ಪ್ರಸ್ತುತ ಕಲ್ಪಿಸಿರುವ ಸಾರಿಗೆ ಸೌಲಭ್ಯ ಅವಶ್ಯಕತೆಗೆ ಅನುಗುಣವಾಗಿದೆ. |
| ಇ. | ಸದರಿ ಡಿಪೋಗೆ ಒದಗಿಸಲಾದ ಹಳೆಯ ಮತ್ತು ಹೊಸ ಬಸ್‌ಗಳೆಷ್ಟು; ಸುಗಮ ಸಾರಿಗೆ ಸಂಚಾರಕ್ಕಾಗಿ ಘಟಕದಲ್ಲಿ ಬಸ್‌ಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೇಲೂರು ಘಟಕದಲ್ಲಿ ಒಟ್ಟು 40 ವಾಹನಗಳಿದ್ದು, ಇವುಗಳಲ್ಲಿ 21 ಹೊಸ ವಾಹನ ಮತ್ತು 19 ಹಳೆಯ ವಾಹನಗಳಿರುತ್ತವೆ.<br><br>ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಸಾರ್ವಜನಿಕ ಪ್ರಯಾಣಿಕರ ಜನದಟ್ಟಣೆಯು ಕಡಿಮೆ ಇರುವುದರಿಂದ ಬೇಲೂರು ಘಟಕದಲ್ಲಿ 25 ಅನುಸೂಚಿಗಳನ್ನು 40 ವಾಹನಗಳ ಬಲದಿಂದ ಕಾರ್ಯಾಚರಣೆ ಮಾಡಲಾಗುತ್ತಿದ್ದು, ಘಟಕದಲ್ಲಿ ಶೇ.60ರಷ್ಟು ಹೆಚ್ಚುವರಿ ವಾಹನಗಳಿರುತ್ತವೆ. ಇದರಿಂದಾಗಿ ಘಟಕದಲ್ಲಿ ಪ್ರಸ್ತುತ ವಾಹನಗಳ ಕೊರತೆಯಿರುವುದಿಲ್ಲ. |
| ಈ. | 2020-21ನೇ ಸಾಲಿನಲ್ಲಿ ಬೇಲೂರು ಬಸ್ ಡಿಪೋಗೆ ಹೊಸ ಬಸ್‌ಗಳನ್ನು ಒದಗಿಸುವ ಯೋಜನೆ ನಿಗಮಕ್ಕೆ ಇದೆಯೇ; | ಪ್ರಸ್ತುತ ಬೇಲೂರು ಘಟಕದಲ್ಲಿ ಶೇ.60ರಷ್ಟು ಹೆಚ್ಚುವರಿ ವಾಹನಗಳಿದ್ದು, ಕೊರತೆ ಇಲ್ಲದಿರುವುದರಿಂದ 2020-21ನೇ ಸಾಲಿನಲ್ಲಿ ಬೇಲೂರು ಘಟಕಕ್ಕೆ ಹೊಸ ಬಸ್‌ಗಳನ್ನು ಒದಗಿಸುವ ಯೋಜನೆಯಿರುವುದಿಲ್ಲ ಮತ್ತು ಮುಂಬರುವ ದಿನಗಳಲ್ಲಿ ಅನುಸೂಚಿ ಕಾರ್ಯಾಚರಣೆಯನ್ನು ಹೆಚ್ಚಿಸಿದಲ್ಲಿ ಅಗತ್ಯತೆಗೆ ಅನುಗುಣವಾಗಿ ಹೊಸ ವಾಹನಗಳನ್ನು ನಿಯೋಜಿಸಲಾಗುತ್ತದೆ. |

| | | |
|---|---|---|
| ಉ. | ಬೇಲೂರು-ಹಳೇಬೀಡಿನಿಂದ ದೂರದ ಪ್ರಮುಖ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಿಗೆ ಸಾರಿಗೆ ಸಂಪರ್ಕ ವ್ಯವಸ್ಥೆ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇಲ್ಲವಾದಲ್ಲಿ, ದೂರದ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಿಗೆ ಬಸ್ ಸೌಲಭ್ಯವನ್ನು ಯಾವ ಕಾಲಮಿತಿಯೊಳಗೆ ಒದಗಿಸಲಾಗುವುದು; | ಬೇಲೂರಿನಿಂದ ದೂರದ ಪ್ರಮುಖ ತಾಲ್ಲೂಕು/ಜಿಲ್ಲಾ ಕೇಂದ್ರಗಳಿಗೆ ಒಟ್ಟು 458 ಸುತ್ತುವಳಿಗಳು ಕಾರ್ಯಾಚರಣೆಯಲ್ಲಿರುತ್ತವೆ.<br>ಹಳೇಬೀಡಿನಿಂದ ವಿವಿಧ ಸ್ಥಳಗಳಿಗೆ 182 ಸುತ್ತುವಳಿಗಳಿಂದ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.<br>ಸದರಿ ಸ್ಥಳಗಳಿಂದ ದೂರದ ಪ್ರಮುಖ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಿಗೆ ಕಲ್ಪಿಸಿರುವ ಸಾರಿಗೆ ಸೌಲಭ್ಯ ಅವಶ್ಯಕತೆಗೆ ಅನುಗುಣವಾಗಿರುತ್ತದೆ. |
| ಊ. | ಬೇಲೂರು ಕಿರಿದಾದ ಬಸ್ ನಿಲ್ದಾಣವನ್ನು ವಿಸ್ತರಿಸುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಮತ್ತು ಪ್ರಸ್ತುತ ಯಾವ ಹಂತದಲ್ಲಿದೆ; | ಪ್ರಸ್ತುತ ಬಸ್ ನಿಲ್ದಾಣವನ್ನು ವಿಸ್ತರಿಸುವ ಪ್ರಸ್ತಾವನೆ ಇರುವುದಿಲ್ಲ. |
| ಋ. | ಬಸ್ ನಿಲ್ದಾಣ ವಿಸ್ತರಣೆಗೆ ಬೇಕಾದ ಹೆಚ್ಚುವರಿ ನಿವೇಶನವನ್ನು PWD ಇಲಾಖೆಯಿಂದ ಹಸ್ತಾಂತರ ಪಡೆದುಕೊಳ್ಳುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಯಾವ ಹಂತದಲ್ಲಿದೆ; ಎಷ್ಟು ಕಾಲಮಿತಿಯೊಳಗೆ ಕಾಮಗಾರಿಯನ್ನು ಆರಂಭಿಸಲಾಗುವುದು? | ಲೋಕೋಪಯೋಗಿ ಇಲಾಖೆಯಿಂದ ಹೆಚ್ಚುವರಿ ನಿವೇಶನವನ್ನು ಬಸ್ ನಿಲ್ದಾಣದ ವಿಸ್ತರಣೆಗೆ ನೀಡುವಂತೆ ಕೋರಲಾಗಿರುತ್ತದೆ. ಆದರೆ ಲೋಕೋಪಯೋಗಿ ಇಲಾಖೆಗೆ ಸೇರಿದ ನಿವೇಶನವು ಸಾರಿಗೆ ನಿಗಮಕ್ಕೆ ಇದುವರೆವಿಗೂ ಹಸ್ತಾಂತರವಾಗಿರುವುದಿಲ್ಲ.<br>ಲೋಕೋಪಯೋಗಿ ಇಲಾಖೆಯಿಂದ ಹೆಚ್ಚುವರಿ ನಿವೇಶನ ಹಸ್ತಾಂತರವಾದ ನಂತರ ಈ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುತ್ತದೆ. |

ಸಂಖ್ಯೆ: ಟಿಡಿ 153 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಅನುಬಂಧ–ಅ

| ಕ್ರಸಂ | ಅನುಸೂಚಿ ಸಂಖ್ಯೆ | ಮಾರ್ಗ |
|---|---|---|
| 1 | 1 | ಬೇಲೂರು–ಚಿಕ್ಕಮಗಳೂರು–ಬೆಂಗಳೂರು |
| 2 | 4 | ಬೇಲೂರು–ಬೆಂಗಳೂರು–ಚಿಕ್ಕಮಗಳೂರು |
| 3 | 5 | ಶೃಂಗೇರಿ–ಬೆಂಗಳೂರು–ಚಿಕ್ಕಮಗಳೂರು |
| 4 | 6 | ಬೇಲೂರು–ಹಾಸನ–ಚಿಕ್ಕಮಗಳೂರು |
| 5 | 7 | ಹಾಸನ–ಚಿಕ್ಕಮಗಳೂರು–ಬೇಲೂರು |
| 6 | 8 | ಬೇಲೂರು–ಬೆಂಗಳೂರು–ರಂಭಾಪುರಿಪೀಠ |
| 7 | 9 | ರಂಭಾಪುರಿಪೀಠ–ಬೆಂಗಳೂರು–ಬೇಲೂರು |
| 8 | 10 | ಬೇಲೂರು–ಚಿಕ್ಕಮಗಳೂರು |
| 9 | 11 | ಬೇಲೂರು–ಬೆಣ್ಣೂರು–ಸಿ.ಹೊಸಳ್ಳಿ |
| 10 | 12 | ಸಿ.ಹೊಸಳ್ಳಿ–ಬೆಣ್ಣೂರು–ಬೇಲೂರು |
| 11 | 13 | ಬೇಲೂರು–ಚಿಲ್ಕೂರು ಹೊಸಳ್ಳಿ–ಹುಲ್ಲೇನಹಳ್ಳಿ |
| 12 | 14 | ಹುಲ್ಲೇನಹಳ್ಳಿ–ಜಾವಗಲ್ |
| 13 | 15 | ಬೇಲೂರು–ಹಾಸನ–ಚಿಕ್ಕಮಗಳೂರು |
| 14 | 16 | ಬೇಲೂರು–ಹಾಸನ–ಚಿಕ್ಕಮಗಳೂರು |
| 15 | 17 | ಬೇಲೂರು–ಬಾಣಾವರ–ಮಂಗಳೂರು |
| 16 | 23 | ಬೇಲೂರು–ಹಾಸನ–ಚಿಕ್ಕಮಗಳೂರು |
| 17 | 24AB | ಬೇಲೂರು–ಗುಂಡ್ಲುಪೇಟೆ |
| 18 | 25 | ಬೇಲೂರು–ಬಾಣಾವರ–ತಿಪಟೂರು |
| 19 | 26 | ತಿಪಟೂರು–ಧರ್ಮಸ್ಥಳ–ಬೇಲೂರು |
| 20 | 28 | ಬೇಲೂರು–ಹಾಸನ–ಪಡುವಳಲು |
| 21 | 29 | ಬೇಲೂರು–ಚಿತ್ರದುರ್ಗ–ಅರಸೀಕೆರೆ |
| 22 | 30 | ಅರಸೀಕೆರೆ–ಚಿತ್ರದುರ್ಗ–ಬೇಲೂರು |
| 23 | 31 | ಬೇಲೂರು–ಹಾಸನ–ಅರೇಹಳ್ಳಿ |
| 24 | 32 | ಅರೇಹಳ್ಳಿ–ಹಾಸನ–ಬೇಲೂರು |
| 25 | 33 | ಬೇಲೂರು–ಚಿಕ್ಕಮಗಳೂರು–ಸೇಲಂ |
| 26 | 34 | ಸೇಲಂ–ಚಿಕ್ಕಮಗಳೂರು–ಬೇಲೂರು |
| 27 | 35 | ಬೇಲೂರು–ಯಮಸಂದಿ–ಕೂಡ್ಲೂರು |
| 28 | 36 | ಕೂಡ್ಲೂರು–ಯಮಸಂಧಿ–ಬೇಲೂರು |
| 29 | 37 | ಬೇಲೂರು–ಹಗರೆ–ಪಡುವಳಲು |
| 30 | 38 | ಪಡುವಳಲು–ಹಗರೆ–ಬೇಲೂರು |
| 31 | 39 | ಬೇಲೂರು–ಹಳೇಬೀಡು–ಬೆಂಗಳೂರು |
| 32 | 40 | ಬೆಂಗಳೂರು–ಹಳೇಬೀಡು–ಬೇಲೂರು |
| 33 | 41AB | ಬೇಲೂರು–ಹಾಸನ–ಚಿಕ್ಕಮಗಳೂರು |
| 34 | 44 | ಬೇಲೂರು–ಬಾಣಾವರ–ಸಕಲೇಶಪುರ |
| 35 | 46 | ಬೇಲೂರು–ಹಗರೆ–ಕುಡ್ಲೂರು |
| 36 | 49 | ಬೇಲೂರು–ಹಾಸನ–ಸಕಲೇಶಪುರ |
| 37 | 50 | ಬೇಲೂರು–ಶಿವಮೊಗ್ಗ–ಚಿಕ್ಕಮಗಳೂರು–ಮೈಸೂರು |
| 38 | 51 | ಮೈಸೂರು–ಬೇಲೂರು–ಹೊರನಾಡು |

## ಅನುಬಂಧ–ಆ

| ಕ್ರಸಂ | ಅನುಸೂಚಿ ಸಂಖ್ಯೆ | ಮಾರ್ಗ |
|---|---|---|
| 1 | 1 | ಬೇಲೂರು–ಚಿಕ್ಕಮಗಳೂರು–ಬೆಂಗಳೂರು |
| 2 | 04 | ಬೇಲೂರು–ಬೆಂಗಳೂರು–ಶೃಂಗೇರಿ |
| 3 | 05 | ಶೃಂಗೇರಿ–ಬೆಂಗಳೂರು–ಬೇಲೂರು |
| 4 | 6 | ಬೇಲೂರು–ಹಾಸನ–ಚಿಕ್ಕಮಗಳೂರು |
| 5 | 7 | ಚಿಕ್ಕಮಗಳೂರು–ಹಾಸನ–ಬೇಲೂರು |
| 6 | 8 | ಬೇಲೂರು–ಬೆಂಗಳೂರು–ರಂಭಾಪುರಿಪೀಠ |
| 7 | 9 | ರಂಭಾಪುರಿಪೀಠ–ಬೆಂಗಳೂರು–ಬೇಲೂರು |
| 8 | 15 | ಬೇಲೂರು–ಹಾಸನ–ಚಿಕ್ಕಮಗಳೂರು |
| 9 | 16 | ಚಿಕ್ಕಮಗಳೂರು–ಹಾಸನ–ಬೇಲೂರು |
| 10 | 24AB | ಬೇಲೂರು–ಗುಂಡ್ಲುಪೇಟೆ |
| 11 | 25 | ಬೇಲೂರು–ಬಾಣಾವರ–ತಿಪಟೂರು |
| 12 | 26 | ತಿಪಟೂರು–ಬಾಣಾವರ–ಬೇಲೂರು |
| 13 | 29 | ಬೇಲೂರು–ಚಿತ್ರದುರ್ಗ–ಅರಸೀಕೆರೆ |
| 14 | 30 | ಅರಸೀಕೆರೆ–ಚಿತ್ರದುರ್ಗ–ಬೇಲೂರು |
| 15 | 33 | ಬೇಲೂರು–ಚಿಕ್ಕಮಗಳೂರು–ಬೆಂಗಳೂರು |
| 16 | 34 | ಬೆಂಗಳೂರು–ಚಿಕ್ಕಮಗಳೂರು–ಬೇಲೂರು |
| 17 | 39/40 | ಬೇಲೂರು–ಹಳೇಬೀಡು–ಬೆಂಗಳೂರು |
| 18 | 40 | ಬೆಂಗಳೂರು–ಹಳೇಬೀಡು–ಬೇಲೂರು |
| 19 | 44 | ಬೇಲೂರು–ಬಾಣಾವರ–ಸಕಲೇಶಪುರ |
| 20 | 49 | ಬೇಲೂರು–ಹಾಸನ–ಸಕಲೇಶಪುರ |
| 21 | 50 | ಬೇಲೂರು–ಶಿವಮೊಗ್ಗ–ಚಿಕ್ಕಮಗಳೂರು–ಮೈಸೂರು |
| 22 | 51 | ಮೈಸೂರು–ಚಿಕ್ಕಮಗಳೂರು–ಶಿವಮೊಗ್ಗ–ಬೇಲೂರು |
| 23 | 55AB | ಬೇಲೂರು–ಹಾಸನ |
| 24 | 56AB | ಬೇಲೂರು–ಹಾಸನ |
| 25 | 57 | ಬೇಲೂರು–ಹಾಸನ |